# ಕರ್ನಾಟಕ ಸಿಂಧೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಪಿಎಚ್ ಡಿ ಮಹಾಪ್ರಬಂಧ

ಸಂಶೋಧಕ
ದೊಡ್ಡಮನಿ ಲೋಕರಾಜ ಎ ಕೆ

ಮಾರ್ಗದರ್ಶಕರು
ಪ್ರೊ. ಕೆ ಎಂ ಮೈತ್ರಿ



ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೦೫

# ಕರ್ನಾಟಕ ಸಿಂಧೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ

ಕನ್ನಡ ವಿಶ್ವವಿದ್ಯಾಲಯಕ್ಕೆ ಅರ್ಪಿಸಿದ ಪಿಎಚ್ ಡಿ ಮಹಾಪ್ರಬಂಧ

ಸಂಶೋಧಕ

ದೊಡ್ಡಮನಿ ಲೋಕರಾಜ ಎ ಕೆ



ಮಾರ್ಗದರ್ಶಕರು

ಪ್ರೊ ಕೆ ಎಂ ಮೈತ್ರಿ






ಬುಡಕಟ್ಟು ಅಧ್ಯಯನ ವಿಭಾಗ
ಸಮಾಜ ವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ - ೫೮೩ ೨೭೬

೨೦೦೫

# ಪ್ರಮಾಣ ಪತ್ರ

ಕರ್ನಾಟಕ ಸಿಂಧೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಪಿಎಚ್ ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಪ್ರೊ ಕೆ ಎಂ ಮೈತ್ರಿ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

D. Lokaraja. A.K.

ದಿನಾಂಕ : ೨೦. ೦೬. ೨೦೦೯.

ಸ್ಥಳ : ವಿದ್ಯಾರಣ್ಯ

(ದೊಡ್ಡಮನಿ ಲೋಕರಾಜ ಎ ಕೆ)
ಪಿಎಚ್ ಡಿ ಸಂಶೋಧನ ವಿದ್ಯಾರ್ಥಿ
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ದೃಢೀಕರಣ ಪತ್ರ

ಕರ್ನಾಟಕ ಸಿಂಧೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಶೀರ್ಷಿಕೆಯ ಮಹಾಪ್ರಬಂಧವನ್ನು ಶ್ರೀ ದೊಡ್ಡಮನಿ ಲೋಕರಾಜ ಎ ಕೆ ಇವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿರುತ್ತಾರೆ. ಪಿಎಚ್ ಡಿ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಬೇರೆ ಯಾವುದೇ ಉದ್ದೇಶ ಅಥವಾ ಪದವಿಗಳಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ದಿನಾಂಕ : ೨೦.೬.೨೦೦೫

ಸ್ಥಳ : ವಿದ್ಯಾರಣ್ಯ

(ಪ್ರೊ ಕೆ ಎಂ ಮೈತ್ರಿ)
ಪ್ರಾಧ್ಯಾಪಕರು ಹಾಗೂ ಮಾರ್ಗದರ್ಶಕರು
ಬುಡಕಟ್ಟು ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩ ೨೭೬

# ಪರಿವಿಡಿ

# ಪರಿಶಿಷ್ಟಗಳು

ಪರಿಶಿಷ್ಟ VI : ಛಾಯಾಚಿತ್ರಗಳು

## ಅಧ್ಯಾಯ - ೧

# ಅಧ್ಯಯನ ಸ್ವರೂಪ - ವ್ಯಾಪ್ತಿ - ವಿಧಾನ

೧. ಅಧ್ಯಯನದ ಪ್ರಾಮುಖ್ಯತೆ

೨. ಉದ್ದೇಶ

೩. ವ್ಯಾಪ್ತಿ

೪. ಅಧ್ಯಯನದ ವಿಧಾನ

೫. ಕ್ಷೇತ್ರಾನುಭವ



# ಅಧ್ಯಯನ ಸ್ವರೂಪ - ವ್ಯಾಪ್ತಿ - ವಿಧಾನ

## ಪ್ರವೇಶ

ಭೂಮಿಯ ಮೇಲೆ ಅವತರಿಸಿದ ಜೀವ ಸಂಕುಲಕ್ಕೆ ಸಾವಿರಾರು ವರ್ಷಗಳ ಇತಿಹಾಸವಿದೆ. ಅಂದಿನಿಂದ ಇಂದಿನವರೆಗೂ ಈ ಸೃಷ್ಟಿಯ ಬಗೆಗೆ ಹಲವಾರು ವಿದ್ವಾಂಸರು ಹಲವು ಬಗೆಯ ಅಭಿಪ್ರಾಯಗಳನ್ನು ಹೇಳುತ್ತಾ ಬಂದಿದ್ದಾರೆ. ಆದರೂ ಅದೆಷ್ಟೋ ರಹಸ್ಯಗಳು ವಿದ್ವಾಂಸರ ಯೋಚನಾ ಲಹರಿಗೂ ನಿಲುಕದೆ, ಅಗೋಚರವಾಗಿಯೇ ಉಳಿದಿವೆ. ಇಂಥಾ ಕೆಲವು ಅಧ್ಯಯನಗಳ ಫಲಶೃತಿಯಿಂದ ಮಾನವ ಜಗತ್ತಿನ ರಹಸ್ಯಗಳು ಆಗೊಮ್ಮೆ ಈಗೊಮ್ಮೆ ಬಯಲಾಗುತ್ತಿರುವುದು ಬೆಳಕಿನಷ್ಟೇ ಸತ್ಯ.

ಭೂಮಂಡಲದ ಮೇಲೆ ಅವತರಿಸಿದ ಮಾನವ ತನ್ನ ಮೊದಲ ಕಾಲಘಟ್ಟದಲ್ಲಿ ಅಲೆಮಾರಿ ಜೀವನವನ್ನು ನಡೆಸುತ್ತಿದ್ದ. ಬೆಟ್ಟ-ಗುಡ್ಡ, ಗಿರಿ-ಕಂದರ, ನದಿ-ಬಯಲುಗಳನ್ನು ತನ್ನ ವಾಸಸ್ಥಾನವಾಗಿ ಮಾಡಿಕೊಂಡಿದ್ದನು. ಪ್ರಕೃತಿಯ ಮಡಿಲಿನಲ್ಲಿಯ ಪ್ರಾಣಿಸಂಕುಲ, ಗಡ್ಡೆ-ಗೆಣಸು, ಹಣ್ಣು-ಹಂಪಲು, ಸೊಪ್ಪು-ಸೆದೆ, ಜೇನು ಇತ್ಯಾದಿ ಆಹಾರ ಅರಸಿಕೊಂಡು, ಒಂದು ಪ್ರದೇಶದಿಂದ ಇನ್ನೊಂದು ಪ್ರದೇಶಕ್ಕೆ ಸಂಚರಿಸುತ್ತಿದ್ದನು. ಅಲ್ಲಿನ ಗಿಡ-ಮರ, ಹೂವು-ಬಳ್ಳಿ, ಪ್ರಾಣಿ-ಪಕ್ಷಿಗಳೊಂದಿಗೆ ಅವಿನಾಭಾವ ಸಂಬಂಧವನ್ನು ಇಟ್ಟುಕೊಂಡಿದ್ದನು.

ಆದಿಮಾನವ ಕಾಡಿನಲ್ಲಿ ವಾಸ ಮಾಡುತ್ತಿದ್ದ. ಆಹಾರಕ್ಕಾಗಿ ಮತ್ತು ಆಶ್ರಯಕ್ಕಾಗಿ ಕಾಡನ್ನೇ ಆಶ್ರಯಿಸಿದ್ದ. ಹೀಗಾಗಿ ಕಾಡೇ ಅಂದಿನ ಮಾನವನ ಜೀವಾಳವಾಗಿತ್ತು. ಕಾಡಿನೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದ್ದ. ಆದಿಮಾನವ ಕಾಡಿನ ಬಗೆಗೆ ನುರಿತ ಅನುಭವವನ್ನು ಪಡೆದುಕೊಂಡಿದ್ದ. ಕಾಲದ ಬದಲಾವಣೆಗಳಿಂದಾಗುವ ಏರುಪೇರುಗಳನ್ನು ಚೆನ್ನಾಗಿ ಅರಿತಿದ್ದ. ಜೊತೆಗೆ ಅವುಗಳನ್ನು ಎದುರಿಸುವ ಉಪಾಯಗಳನ್ನು ಕಂಡುಕೊಂಡಿದ್ದ. ಮಳೆ, ಬಿಸಿಲು, ಗುಡುಗ, ಸಿಡಿಲು, ಬೆಂಕಿ, ಪ್ರವಾಹ, ಕಾಡುಮೃಗಗಳ ಹಾವಳಿ ಮೊದಲಾದ ಪ್ರಾಕೃತಿಕ ವಿಕೋಪಗಳಿಂದ ರಕ್ಷಣೆಪಡೆಯುವ ಉಪಾಯಗಳನ್ನು ಅರಿತಿದ್ದ. ಹೊಟ್ಟೆಯ ಪಾಡಿಗೋಸ್ಕರ ಚಿಕ್ಕ ಪುಟ್ಟ ಪ್ರಾಣಿಗಳ ಬೇಟೆಯಾಡುವುದನ್ನು ಬಿಟ್ಟರೆ ಬೇರೆ ಯಾವ ಪ್ರಾಣಿಯ ತಂಟೆಗೂ ಹೋಗುತ್ತಿರಲಿಲ್ಲ. ಇದು ಆದಿಮ ಕಾಲದ ಮಾನವನ ನಿತ್ಯ ಕಾಯಕವಾಗಿತ್ತು. ಹೀಗೆ ಅಲೆಮಾರಿಯಾಗಿದ್ದ ಅಂದಿನ ಮಾನವನಿಗೆ ಯಾವುದೇ ಸ್ಥಿರ ನೆಲೆಗಳಾಗಲಿ, ಆಸ್ತಿಪಾಸ್ತಿಗಳಾಗಲಿ ಇರಲಿಲ್ಲ. ಇದನ್ನು ಮಾನವ ಜೀವನದ ಪ್ರಾಥಮಿಕ ಕಾಲಘಟ್ಟವೆಂದು ಗುರುತಿಸಬಹುದು.

ಮಾನವ ಭೌತಿಕವಾಗಿ ವಿಕಾಸವಾದಂತೆ ಬೌದ್ಧಿಕ ಮಟ್ಟದಲ್ಲಿ ಕೆಲವು ಪರಿವರ್ತನೆಗಳು ಕಂಡುಬಂದವು. ಪರಿಣಾಮವಾಗಿ ಅವರ ಜೀವನ ಕ್ರಮದಲ್ಲಿಯೂ ಸ್ಥಿತ್ಯಂತರಗಳು ಆದವು. ಅದೇ ಕಾಲಕ್ಕೆ ಜೀವನದ

ಅವಶ್ಯಕವಾದ ಮೂಲಭೂತ ಅನಿವಾರ್ಯತೆಗಳು ಏನೆಂಬುದನ್ನು ಕಂಡುಕೊಂಡು ಅಲೆಮಾರಿ ಜೀವನಕ್ಕೆ ಬದಲಾಗಿ ಹಲವಾರು ಜನ ಒಂದೇ ಪ್ರದೇಶದಲ್ಲಿ ನೆಲೆಗೊಳ್ಳಲು ನಿಂತರು. ತನ್ನ ವಾಸ ಮತ್ತು ಆಹಾರ ಬೆಳವಣಿಗೆಗೆ ಯೋಗ್ಯವಾದ ನದಿ ದಂಡೆಯ ಮೇಲೆ ತಮ್ಮ ನೆಲೆಗಳನ್ನು ಕಟ್ಟಿಕೊಂಡರು. ಇದರಿಂದಾಗಿ ಕೃಷಿಪದ್ಧತಿ ಅಸ್ತಿತ್ವಕ್ಕೆ ಬಂದಿತು. ಅಲ್ಲದೆ ಗ್ರಾಮಗಳ ಉದಯಕ್ಕೆ ನಾಂದಿಯಾಯಿತು, ಮಾತ್ರವಲ್ಲದೆ ವೈವಿಧ್ಯಮಯ ಸಾಂಸ್ಕೃತಿಯ ಬೆಳವಣಿಗೆಗೂ ಕಾರಣವಾಯಿತು. ಸ್ಥಿರ ನೆಲೆಯ ಜೀವನ ಕೆಲವು ಹೊಸ ಶೋಧಗಳಿಗೆ ಪ್ರೇರಣೆಯಾಯಿತು. ಮಾನವನ ವಿಕಾಸ ಹಲವಾರು ಪರಿವರ್ತನೆಗಳಿಗೆ ಕಾರಣವಾಯಿತು. ಹೀಗಾಗಿ ಇದನ್ನು ಮಾನವ ಜೀವನದ ಎರಡನೆಯ ಕಾಲಘಟ್ಟವೆಂದು ಗುರುತಿಸಬಹುದು.

ಮಾನವ ಸಮುದಾಯದಲ್ಲಾದ ಈ ಪರಿವರ್ತನೆ ಅಥವಾ ಬೆಳವಣಿಗೆಗಳು ಭೂಪ್ರದೇಶದ ಬೇರೆ ಬೇರೆ ಕಡೆ ವಾಸಿಸುವ ಎಲ್ಲಾ ಜನರಲ್ಲೂ ಏಕಕಾಲದಲ್ಲಾಯಿತೆಂದು ಹೇಳಲಾಗದು. ಇಂದಿಗೂ ಕೆಲವು ಸಮುದಾಯದ ಜನರು ಸಾಮಾಜಿಕ, ರಾಜಕೀಯ, ಆರ್ಥಿಕ, ಶೈಕ್ಷಣಿಕ ಮತ್ತು ಸಾಂಸ್ಕೃತಿಕವಾಗಿ ಮುಂದು ವರೆಯದವರಾಗಿದ್ದಾರೆ. ಇದಕ್ಕೆ ವಿರುದ್ಧ ವಾತಾವರಣದ ಅಥವಾ ಬುಡಕಟ್ಟು, ಗಿರಿಜನ, ಆದಿವಾಸಿ, ಅಲೆಮಾರಿ ಪರಿಸ್ಥಿತಿಯ ಜನಸಮುದಾಯವನ್ನು ಕಾಣಬಹುದಾಗಿದೆ. ಈ ಮಾತು ಯಾವುದೇ ಒಂದು ರಾಷ್ಟ್ರದ ಅಥವಾ ಸಮುದಾಯದ ಜನರಿಗೆ ಅನ್ವಯಿಸುವುದಿಲ್ಲ. ವಿಶ್ವದ ಎಲ್ಲಾ ಸಮುದಾಯಗಳಿಗೂ ಅನ್ವಯಿಸಿ ನೋಡಬಹುದು.

ಭಾರತ ದೇಶದಲ್ಲಿ ಹಲವು ಜಾತಿ, ಧರ್ಮ, ಮತ, ಪಂಥ, ಭಾಷೆ ಮತ್ತು ಸಂಸ್ಕೃತಿಗೆ ಸೇರಿದ ಜನರು ವಾಸಿಸುತ್ತಿದ್ದಾರೆ. ಆದರೆ ಅವರ ಆಚಾರ-ವಿಚಾರ, ನಡೆ-ನುಡಿ, ಸಾಂಸ್ಕೃತಿಕ ಚಹರೆಗಳು ಇತರರಿ ಗಿಂತಲೂ ಭಿನ್ನ ಮತ್ತು ವಿಶಿಷ್ಟವಾಗಿ ಕಂಡುಬರುತ್ತದೆ. ಮೂಲತಃ ಅರಣ್ಯವಾಸಿಗಳಾದ ಆದಿಮಾನವರು ಹಲವು ಘಟ್ಟಗಳನ್ನು ದಾಟಿ, ಗ್ರಾಮೀಣ, ನಗರ ಮತ್ತು ಮೆಟ್ರೋಪಾಲಿಟಿ ಸಿಟಿಗಳಿಗೆ ಕಾಲಿರಿಸಿದ್ದಾರೆ. ಈ ನಡುವೆ ಅನೇಕ ಸಮುದಾಯಗಳು ಕಾಡಿನಲ್ಲಿಯೇ ಉಳಿದು ಗ್ರಾಮೀಣ, ನಗರ ಮತ್ತು ಮೆಟ್ರೋ ಪಾಲಿಟಿ ಸಿಟಿಗಳಿಗಿಂತ ಭಿನ್ನ ಮತ್ತು ಪ್ರತ್ಯೇಕ ಜೀವನ ರೂಢಿಸಿಕೊಂಡು ಜೀವನ ಮಾಡುತ್ತಾ ಬಂದಿದ್ದಾರೆ. ವೈವಿಧ್ಯಮಯ ಸಂಸ್ಕೃತಿ ಜೊತೆಗಿಟ್ಟುಕೊಡು ಮುಖಾಮುಖಿಯಾಗಿ ಜೀವನ ಮಾಡುವುದುಂಟು. ಈ ಸಮುದಾಯಗಳ ಭಾಷೆ ಸಾಂಸ್ಕೃತಿಕ, ಸಾಮಾಜಿಕ ಆಚರಣೆಗಳು ಮೇಲ್ನೋಟದಲ್ಲಿ ಒಂದೇ ರೀತಿಯಾಗಿ ಕಂಡರೂ ಒಂದೊಂದು ಸಮುದಾಯದ ಜೀವನಕ್ರಮದಲ್ಲಿ ವೈವಿಧ್ಯತೆಯನ್ನು ಕಾಣಬಹುದಾಗಿದೆ. ಹೀಗಾಗಿ ಜಾಗತಿಕ ಮಟ್ಟದಲ್ಲಿ ಭಾರತದೇಶ ವೈವಿಧ್ಯಮಯ ಸಂಸ್ಕೃತಿಯನ್ನು ಹೊಂದಿದ ದೇಶ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ.

ಕರ್ನಾಟಕದಲ್ಲಿ ವಾಸವಾಗಿರುವ ಬುಡಕಟ್ಟು ಸಮುದಾಯಗಳು ತಮ್ಮದೇ ಆದ ಸಾಮಾಜಿಕ ವ್ಯವಸ್ಥೆಯಲ್ಲಿ ವಿವಿಧ ವೃತ್ತಿಗಳಿಗೆ ಒಳಗಾಗಿದ್ದಾರೆ. ಅವರುಗಳು ನಾಡಿನ ತುಂಬಾ ಎಲ್ಲಾ ಕಡೆಗಳಲ್ಲಿ ಕಾಣಸಿಗುವುದುಂಟು. ಇವರು ಗುಡಾರ, ಗುಡಿಸಲು, ಹೆಂಚಿನಮನೆಗಳನ್ನು ನಿರ್ಮಿಸಿಕೊಂಡು ಸಂಕಷ್ಟ ರೀತಿಯಲ್ಲಿ ಜೀವನ ಸಾಗಿಸುತ್ತಿದ್ದಾರೆ. ಅಲೆಮಾರಿ ಜನರು ಸಾಮಾನ್ಯವಾಗಿ ಊರಹೊರಗಿನ ಸ್ಥಳ, ಶಾಲಾ ಮೈದಾನ, ಕಾಡಿನ ಕೊನೆಯ ಭಾಗ, ಗುಡ್ಡಗಾಡು ಮೊದಲಾದ ಪ್ರದೇಶಗಳಲ್ಲಿ ವಾಸಿಸುವುದನ್ನು

ಕಂಡುಬರುತ್ತದೆ. ಜೊತೆಯಲ್ಲಿ ಪಾರಂಪರಿಕ ಕುಲಕಸುಬುಗಳನ್ನು ಹೊಂದಿದ್ದಾರೆ. ಸಾಮಾನ್ಯವಾಗಿ ಅಲೆಮಾರಿ ಬುಡಕಟ್ಟು ಜನರು ಧರ್ಮದ ಅವಲಂಬನೆಯಿಂದ ಧಾರ್ಮಿಕ ವೃತ್ತಿಗಳು ಮಾಡುವುದು ಮತ್ತು ಅವುಗಳನ್ನು ಪಾಲಿಸುತ್ತಾ ಬಂದಿದ್ದಾರೆ. ಅವುಗಳಾದ ಜೋಗಿಗಳು- ಪ್ರತಿ ಮನೆಗೂ ಕಿನ್ನರಿ ನುಡಿಸುವುದು, ಸುಡ್ಗಗಾಡು ಸಿದ್ಧರು- ಸ್ಮಶಾನವನ್ನು ಕಾಯುವುದು, ಹೆಳವರು- ಮನುಷ್ಯನ ವಂಶವೃಕ್ಷವನ್ನು ತಿಳಿಸುವುದು, ಸಿಂಧೋಳ್ಳುರು- ಊರಿಗೆ ಪ್ಲೇಗ್ ಬಂದಾಗ ಅದರ ನಿರ್ಮೂಲನೆಗಾಗಿ ಮತ್ತು ನಾಡಿನ ಜನರ ಅಭಿವೃದ್ಧಿಗಾಗಿ ಬುಟ್ಟಿಯಲ್ಲಿ ಮಾರಿದೇವತೆ ಹೊತ್ತುಕೊಂಡು ಬುರ‍್ರ ಬುರ‍್ರವಾದ್ಯದೊಂದಿಗೆ ಸಿಂಧೋಳ್ಳು ಪೂಜಾರಿ ತನ್ನ ದೇಹವನ್ನು ದಂಡಿಸಿಕೊಳ್ಳುವುದು. ಹೀಗೆ ಅನೇಕ ಸಮುದಾಯಗಳು ಧಾರ್ಮಿಕ ಭಿಕ್ಷಾಟನೆಯನ್ನೇ ಉದ್ಯೋಗಗಳೆಂದು ಅರಸುತ್ತಾ ಬಂದರು. ಈ ಜನರು ಧಾರ್ಮಿಕ ಭಿಕ್ಷಾವೃತ್ತಿಗಳನ್ನು ಬಿಟ್ಟರೆ ಅನ್ಯಮಾರ್ಗವೇ ಇಲ್ಲ, ಇವುಗಳನ್ನು ತಿರಸ್ಕರಿಸಿದರೆ ಅವಸಾನ ಹೊಂದುವೆವು ಎಂದು ತಿಳಿದುಕೊಂಡಿದ್ದರು. ಆದಕಾರಣ ಅವುಗಳನ್ನು ಆಚರಿಸುತ್ತಾ ಬಂದಿದ್ದಾರೆ. ಹೀಗೆ ಧಾರ್ಮಿಕ ವೃತ್ತಿಗಳನ್ನು ಗಮನಿಸಿದರೆ, ಅಲೆಮಾರಿ ಬುಡಕಟ್ಟು ಜನರ ಬದುಕು ತಿಳಿಯುವುದು.

ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಸಿಂಧೋಳ್ಳು ಸಮುದಾಯಕ್ಕೆ ವಿಶಿಷ್ಟ ಸ್ಥಾನ-ಮಾನಗಳಿವೆ. ಎಲ್ಲಾ ಬುಡಕಟ್ಟುಗಳಿಗಿರುವಂತೆ ವೈವಿಧ್ಯಮಯ ಸಾಂಸ್ಕೃತಿಕ ಪರಂಪರೆಯಿದ್ದರೂ ಇವರ ಸಂಸ್ಕೃತಿಯ ಚರಿತ್ರೆ ವಿವಿಧ ಕಾಲಘಟ್ಟಗಳಲ್ಲಿ ದಾಖಲಾಗದೆ ಇರುವುದು ದುರದೃಷ್ಟಕರ. ಮೌಖಿಕವಾಗಿ ತಮ್ಮ ಗತಕಾಲದ ಕಥನಗಳನ್ನು ಸ್ಮರಿಸಿಕೊಳ್ಳುತ್ತಾರೆ. ಹೀಗಾಗಿ ಸಿಂಧೋಳ್ಳು ಸಮುದಾಯದ ಬಗ್ಗೆ ಶಾಸನಗಳಾಗಲಿ, ಗ್ರಂಥಗಳಾಗಲಿ ನೈಜವಾದ ಚರಿತ್ರೆಯನ್ನು ಕಟ್ಟಿಕೊಡುವುದಿಲ್ಲ. ಚಿತ್ರಕಲೆ ಮೌಖಿಕ ಆಕಾರಗಳಲ್ಲಿ ಮುಸುಕು-ಮುಸುಕಾಗಿ ಚರಿತ್ರೆಯಲ್ಲಿ ವಿಜೃಂಭಿಸಿರುವುದು ಕಂಡುಬರುತ್ತದೆ.

ಮೂಲತಃ ದ್ರಾವಿಡ ಗುಂಪಿನವರಾದ ಸಿಂಧೋಳ್ಳುರು ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೂ ಭಿಕ್ಷಾಟನೆಯನ್ನೇ ವೃತ್ತಿಯನ್ನಾಗಿ ಮಾಡಿಕೊಂಡಿದ್ದಾರೆ. ಇವರು ಜೀವನೋಪಾಯಕ್ಕಾಗಿ ಭಿಕ್ಷಾಟನೆಯನ್ನು ಅವಲಂಬಿಸಿದ್ದು, ಭಿಕ್ಷೆಗಾಗಿ ಒಂದು ಊರಿನಿಂದ ಮತ್ತೊಂದು ಊರಿಗೆ ನಿರಂತರವಾಗಿ ಅಲೆಯುತ್ತಿರುತ್ತಾರೆ. ಯಾವುದೇ ಊರಿಗೆ ಹೋದರೂ ಅವರಲ್ಲಿ ಪುಟ್ಟಿ ಮತ್ತು ಪೆಟ್ಟಿಗೆಯಲ್ಲಿ ದೇವರು ಇರುವುದು ಸರ್ವೇಸಾಮಾನ್ಯ. ಭಕ್ತರಿಂದ ದವಸಧಾನ್ಯ, ಒಡವೆ ವಸ್ತುಗಳನ್ನು ಕಾಣಿಕೆಯಾಗಿ ಪಡೆಯುವುದು. ಮಂಗಳವಾರ ಮತ್ತು ಶುಕ್ರವಾರದಂದು ಬೀದಿಗಳಲ್ಲಿ, ಸಂತೆ ಮೈದಾನಗಳಲ್ಲಿ ಮತ್ತು ಜಾತ್ರೆಯ ಉತ್ಸವಗಳಲ್ಲಿ ಬುರ‍್ರಬುರ‍್ರ ವಾದ್ಯದೊಂದಿಗೆ ಕುಣಿಯುತ್ತಾ ಮತ್ತು ಚಾಟಿಯಿಂದ ತನ್ನ ಮೈಯಿಗೆ ಹೊಡೆದುಕೊಳ್ಳುವುದರ ಮುಖೇನ ಭಿಕ್ಷೆಯನ್ನು ಸಂಗ್ರಹಿಸಲಾಗುವುದು.

ಸಾಮಾನ್ಯ ದಿನಗಳಲ್ಲಿ ದವಸ-ಧಾನ್ಯ ಮತ್ತು ತಂಗಳಾನ್ನ ಪಡೆಯುವುದಾದರೆ, ಹಬ್ಬ ಜಾತ್ರೆಗಳಲ್ಲಿ ಹಠವಾದಿಗಳಂತೆ ಭಿಕ್ಷೆ ನೀಡುವವರೆಗೂ ಕೈಗಳನ್ನು ಕೊಯ್ದುಕೊಳ್ಳುತ್ತಾ, ಹಣ, ಅರಿವೆ ಮೊದಲಾದವು ಗಳನ್ನು ಕೇಳುವುದುಂಟು. ಜನಪದರಲ್ಲಿ ಇವರನ್ನು ದುರುಗಮುರಗಿ, ಸುಂಕಲಮ್ಮನ ಆಡಿಸುವರು, ಕೂಗಮ್ಮನ ಆಡಿಸುವರು, ಪೋತರಾಜ, ಉರಿಮಾರಿಯರು, ಬುರ‍್ರ ಬುರ‍್ರಮಾರಿಯಾರ್ ಇತ್ಯಾದಿ ಹೆಸರುಗಳುಗಳಿಂದ ಕರೆಯುವುದುಂಟು. ಆರ್ಥಿಕ, ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು

ಶೈಕ್ಷಣಿಕವಾಗಿ ಹಿಂದುಳಿದಿರುವ ಸಿಂಧೋಳ್ಳು ಸಮುದಾಯವನ್ನು ಪ್ರಸ್ತುತ ಸಮಾಜಕ್ಕೆ ಪರಿಚಯಿಸುವುದರ ಮುಖೇನ ಸರ್ಕಾರದ ಗಮನವನ್ನು ಸೆಳೆಯಬೇಕಾಗಿದೆ. ಈ ಸಮುದಾಯದ ಬಗೆಗೆ ಹೆಚ್ಚಿನ ಅಧ್ಯಯನಗಳು ನಡೆದಿರುವುದಿಲ್ಲ. ಅಲ್ಲಲ್ಲಿ ಕೆಲವು ಬಿಡಿ ಬರಹಗಳು ಮೂಡಿಬಂದಿವೆಯಷ್ಟೆ. ಈ ದಿಸೆಯಲ್ಲಿ ಸಮಗ್ರ ಅಧ್ಯಯನವನ್ನು ಕೈಗೊಳ್ಳುವುದರ ಮೂಲಕ ಈ ಸಮುದಾಯದ ಒಟ್ಟು ಸ್ವರೂಪವನ್ನು ಅನಾವರಣಗೊಳಿಸುವುದು ಪ್ರಸ್ತುತ ಅಧ್ಯಯನದ ಬಹುಪ್ರಧಾನ ಆಶಯವಾಗಿದೆ.

### ಅಧ್ಯಯನದ ಪ್ರಾಮುಖ್ಯತೆ

ಭಾರತ ದೇಶದಲ್ಲಿ ಹಲವಾರು ಸಮುದಾಯಗಳಿವೆ. ಇಂದು ಕೆಲವು ಸಮುದಾಯಗಳು ಸಾಮಾಜಿಕ, ಆರ್ಥಿಕ ಮತ್ತು ಸಾಂಸ್ಕೃತಿಕವಾಗಿ ಬದಲಾವಣೆಗಳನ್ನು ಕಂಡಿವೆ. ಆದರೆ ಬುಡಕಟ್ಟುಗಳಲ್ಲೊಂದಾದ ಸಿಂಧೋಳ್ಳು ಸಮುದಾಯ ಎಲ್ಲಾ ವಿಧದಲ್ಲಿಯೂ ಹಿಂದುಳಿದ ಜನಾಂಗವಾಗಿದೆ. ಕರ್ನಾಟಕ ಮತ್ತು ಆಂಧ್ರಪ್ರದೇಶಗಳಲ್ಲಿ ಈ ಸಮುದಾಯ ನೆಲೆಸಿರುವುದು ಕಾಣಬರುತ್ತದೆ. ಈ ಸಮುದಾಯದ ಬಗ್ಗೆ ಸಮಗ್ರ ಸಂಶೋಧನಾಧ್ಯಯನ ನಡೆದಿರುವುದಿಲ್ಲ. ಬೆರಳಣಿಕೆಯಷ್ಟೇ ಕಿರುಲೇಖನಗಳು ಪ್ರಕಟಗೊಂಡಿವೆ. ಆಧುನಿಕ ಸಮಾಜದಲ್ಲಿ ಸಂಸ್ಕೃತಿಯ ಅನನ್ಯತೆಗಳು ಜಾಗತೀಕರಣದಲ್ಲಿ ಮರೆಯಾಗುವುದಕ್ಕಿಂತ ಮೊದಲು ಸಿಂಧೋಳ್ಳು ಸಮುದಾಯದ ಬಗ್ಗೆ ಅಧ್ಯಯನ ಮಾಡಬೇಕಾಗಿರುವುದು ಅನಿವಾರ್ಯವೂ ಮತ್ತು ಅವಶ್ಯಕತೆಯು ಆಗಿದೆ.

ಸಿಂಧೋಳ್ಳು ಸಮುದಾಯ ತನ್ನದೇ ಆದ ಸಾಂಸ್ಕೃತಿಕ ಗುಣ ಲಕ್ಷಣಗಳನ್ನು ಹೊಂದಿದೆ. ಗುಡಾರ ಕುಲದೇವತೆಗಳ ಮೇಲಿನ ಭಯ, ಭಕ್ತಿ, ನಂಬಿಕೆ ಮತ್ತು ನಿಷ್ಠತೆಯ ಪ್ರಭಾವಕ್ಕೆ ಒಳಗಾಗಿದ್ದು, ತಮ್ಮ ನಿತ್ಯ ಜೀವನದ ಪ್ರತಿವಸ್ತುವಿನಲ್ಲಿಯೂ ದೈವವನ್ನು ಕಾಣುವುದುಂಟು. ಪ್ರತಿ ವಸ್ತುವಿನಲ್ಲಿಯೂ ದೇವರ ಅಂಶವನ್ನು ಕಾಣುವ ಮನೋಭಾವನೆ ಅವರದು. ಗುಡಾರ ಒಳಗಡೆ ಹೋದಾಗ ಅಮ್ಮನ ಪೆಟ್ಟಿಗೆ, ಬುರ್ರ ಬುರ್ರ ವಾದ್ಯ, ಒರಳುಕಲ್ಲು, ಒಣಿಕೆ ಮತ್ತು ತಂಬಿಗೆ ಇತ್ಯಾದಿ ವಸ್ತುಗಳನ್ನು ನಮಸ್ಕರಿಸುವರು. ಪೂಜಾರಿ ಭಿಕ್ಷಾಟನೆಗೆ ಹೋದಾಗ ಬುರ್ರ ಬುರ್ರ ವಾದ್ಯದೊಂದಿಗೆ ಕುಣಿಯುತ್ತಾ, ತನ್ನ ಮೈಯಿಗೆ ಚಾಟಿಯಿಂದ ನಿತ್ಯ ಹೊಡೆದುಕೊಳ್ಳುವ ಕಾಯಕ ಇವರದಾಗಿದೆ. ಇದು ಜನರ ಮನಸ್ಸಿನಲ್ಲಿ ಭಯ-ಭಕ್ತಿ ಉಂಟಾಗುವಂತೆ ಪ್ರೇರೇಪಿಸುತ್ತದೆ.

ಸಿಂಧೋಳ್ಳು ಸಮುದಾಯದ ಸಾಮಾಜಿಕ ಅಧ್ಯಯನವು ತಮ್ಮದೇ ಆದ ಪ್ರಾಮುಖ್ಯತೆಯನ್ನು ಹೊಂದಿದೆ. ಏಕೆಂದರೆ ಇಂದಿನ ಶೀಘ್ರಗತಿಯ ಬದಲಾವಣೆಯು ಸಾಮಾಜಿಕ ಜೀವನದಲ್ಲಿ ಇಂತಹ ಮುಗ್ಧ ಸಮುದಾಯಂತಹ ಹಲವು ಸಮುದಾಯಗಳ ಸಂಪ್ರದಾಯಿಕ ಜೀವನ ಶೈಲಿಯನ್ನು ಬದಲಾಯಿಸಿ ಬಿಡುವ ಸಾಧ್ಯತೆಗಳಿವೆ. ಹೀಗಾಗಿ ಈ ಸಮುದಾಯದ ಸಂಸ್ಕೃತಿಯನ್ನು ದಾಖಲಿಸಿ ವಿಶ್ಲೇಷಿಸುವ ಅವಶ್ಯಕತೆಯಿದೆ. ಹೀಗಾಗಿ ಸಿಂಧೋಳ್ಳು ಸಮುದಾಯದ ಬದುಕಿನ ಚಿತ್ರಣವನ್ನು ಕುರಿತು ಅಧ್ಯಯನ ಮಾಡುವುದು ಅವಶ್ಯಕವಾಗಿದೆ.

ಊಹೆಗಳು

೧. ಸಿಂಧೋಳ್ಳು ಸಮುದಾಯವನ್ನು ಜನಪದರು ದುರುಗ ಮುರಗಿ, ಬುರ್ರ ಬರ್ರ ಮಾರಿಯರ್, ಪೋತರಾಜ, ಕೂಗಮ್ಮನ ಆಡಿಸುವರು, ಸುಂಕ್ಲಲಮ್ಮನ ಆಡಿಸುವರು, ಪೂಜಾರಿ, ದುರ್ಗಮ್ಮನ ಆಡಿಸುವರು, ಉರಿಮಾರಿ ಇತ್ಯಾದಿ ಹೆಸರುಗಳಿಂದ ಕರೆಯುವರು.

೨. ಜಾಗತೀಕರಣ, ತಂತ್ರಜ್ಞಾನ ಮತ್ತು ಧಾರ್ಮಿಕ ಮೌಲ್ಯಗಳಲ್ಲಿಯ ವ್ಯತ್ಯಾಸ ಇವರ ಬದುಕಿನ ಮೇಲೆ ಗುರುತರವಾದ ಪ್ರಭಾವ ಬೀರಿವೆ.

ಅಧ್ಯಯನದ ಉದ್ದೇಶಗಳು

* ಸಿಂಧೋಳ್ಳು ಸಮುದಾಯದ ಮೂಲ ಪರಿಚಯ, ಸೃಷ್ಟಿ ಪುರಾಣ ಮತ್ತು ಸಾಂಸ್ಕೃತಿಕ ವೀರರ ಇತಿಹಾಸದ ಅವಲೋಕನ.
* ಸಿಂಧೋಳ್ಳು ಸಮುದಾಯದ ಭೌಗೋಳಿಕ ಜನಸಂಖ್ಯೆಯ ಪರಿವೀಕ್ಷಣೆ.
* ಸಮುದಾಯದ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ ಮತ್ತು ಧಾರ್ಮಿಕ ಅಂಶಗಳ ವಿಶ್ಲೇಷಣೆ.
* ಬೇಟೆಯ ಮಹತ್ವದ ಬಗೆಗೆ ವಿಶ್ಲೇಷಣೆ
* ಹಬ್ಬ-ಜಾತ್ರೆಗಳು ಆಧುನಿಕ ಸಂದರ್ಭದಲ್ಲಿ ಹೇಗೆ ತನ್ನ ಸ್ವರೂಪವನ್ನು ಬದಲಾಯಿಸಿಕೊಳ್ಳುತ್ತಿವೆ ಎಂಬುದರ ಕಡೆಗೆ ಗಮನಹರಿಸುವುದು.
* ಭಾಷೆ, ಸಾಹಿತ್ಯ ಮತ್ತು ಕಲೆಗಳನ್ನು ಕುರಿತು ವಿಶ್ಲೇಷಿಸುವುದು.
* ಸಿಂಧೋಳ್ಳು ಸಮುದಾಯದ ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಬದಲಾವಣೆಗೆ ಕಾರಣಗಳನ್ನು ಗುರುತಿಸುವುದು.
* ಸಿಂಧೋಳ್ಳು ಸಮುದಾಯವು ಎದುರಿಸುತ್ತಿರುವ ಸಮಸ್ಯೆಗಳನ್ನು ಶೋಧಿಸುವುದು ಮತ್ತು ಸರ್ಕಾರ ಅವುಗಳ ಪರಿಹಾರಕ್ಕಾಗಿ ಎಷ್ಟರಮಟ್ಟಿಗೆ ಸಹಕರಿಸಿದೆ ಎಂಬುದನ್ನು ವಿಶ್ಲೇಷಿಸುವುದು.
* ಪ್ರಸ್ತುತ ಸಂದರ್ಭದಲ್ಲಿ ಇವರ ಸಂಘಟನೆಗಳ ಚಲನಶೀಲತೆಯನ್ನು ಗುರುತಿಸುವುದು.

ಅಧ್ಯಯನದ ವ್ಯಾಪ್ತಿ

ಸಿಂಧೋಳ್ಳು ಸಮುದಾಯದ ಅಧ್ಯಯನದ ವ್ಯಾಪ್ತಿಯು ಕರ್ನಾಟಕದ ಎಲ್ಲಾ ಜಿಲ್ಲೆಗಳಿಗೂ ಅನ್ವಯಿಸುವುದು. ಆದರೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಕರ್ನಾಟಕದ ೨೦ ಜಿಲ್ಲೆಗಳಲ್ಲಿ ಮಾತ್ರ ನೆಲೆಸಿರುವುದು ಕಾಣಬರುತ್ತದೆ. ಅವುಗಳೆಂದರೆ ಬಾಗಲಕೋಟೆ, ಬಳ್ಳಾರಿ, ಬೆಳಗಾಂ, ಬೀದರ್, ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ, ಧಾರವಾಡ, ಗದಗ, ಗುಲಬರ್ಗಾ, ಹಾಸನ, ಹಾವೇರಿ, ಕೊಪ್ಪಳ, ಮಂಡ್ಯ, ಮೈಸೂರು, ರಾಯಚೂರು, ವಿಜಾಪುರ, ಶಿವಮೊಗ್ಗ, ತುಮಕೂರು ಮತ್ತು ಉತ್ತರ ಕನ್ನಡ. ಇನ್ನೂ ೭ ಜಿಲ್ಲೆಗಳಲ್ಲಿ ಸಿಂಧೋಳ್ಳುರ ಜನ ವಸತಿ ನೆಲೆಸಿರುವುದರ ಬಗೆಗೆ ಮಾಹಿತಿ ಲಭ್ಯವಾಗುವುದಿಲ್ಲ. ಇಲ್ಲಿಯ ಇವರ ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ರಾಜಕೀಯ ಮತ್ತು ಸಾಂಸ್ಕೃತಿಕ ಶೋಧಗಳು ಅಧ್ಯಯನದ ವ್ಯಾಪ್ತಿಗೆ ಸೇರುವವು.

**ಅಧ್ಯಯನದ ವಿಧಾನ**

ಕರ್ನಾಟಕ ಸಿಂಧೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ ಎಂಬ ಈ ನಿಂಬಂಧವು ಸಮಾಜಶಾಸ್ತ್ರೀಯ ಅಧ್ಯಯನ ವಿಧಾನದ ರೂಪುರೇಷೆಗಳ ಮೇಲೆ ಸಿದ್ಧಗೊಂಡಿದೆ.

**೧. ಪ್ರಶ್ನಾವಳಿ ವಿಧಾನ**

ಅಧ್ಯಯನದ ವಿಷಯಕ್ಕನುಗುಣವಾಗಿ ಸೂಕ್ತವಾದ ಪ್ರಶ್ನೆಗಳನ್ನು ರಚಿಸಿಕೊಂಡು, ಸಮೀಕ್ಷಿಸಲಾಗಿದೆ. ಫಲಿತಗಳನ್ನು ಪ್ರಬಂಧದಲ್ಲಿ ನಮೂದಿಸಲಾಗಿದೆ. ಪ್ರತ್ಯೇಕವಾದ ವಿಷಯ ಹಾಗೂ ವ್ಯಕ್ತಿಗಳ ಅಧ್ಯಯನಕ್ಕೆ ಪ್ರಶ್ನೆಗಳನ್ನು ರಚಿಸಿ ಅವುಗಳಿಂದ ಪಡೆದ ಮಾಹಿತಿಯನ್ನು ವಿಶ್ಲೇಷಿಸಲಾಗಿದೆ.

**೨. ಸಂದರ್ಶನ ವಿಧಾನ**

ರಾಜ್ಯದ ನಾನಾ ಮೂಲೆಗಳಲ್ಲಿ ಸಿಂಧೋಳ್ಳು ಸಮುದಾಯದ ಜನ ನೆಲೆಸಿದ್ದಾರೆ. ಈ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯದ ಬಹುತೇಕ ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯ ಮಾಡಲಾಗಿದೆ. ಪ್ರತಿಯೊಂದು ಗುಡಾರ, ಆಶ್ರಯ ಮನೆಗಳು ಮತ್ತು ಹಂಚಿನ ಮನೆಗಳಲ್ಲಿಯೂ ಅವರ ವಯೋಮಿತಿಗನುಸಾರವಾಗಿ ಸಂದರ್ಶನ ನಡೆಸಲಾಗಿದೆ. ಜೊತೆಗೆ ಗುಡಾರ ಗುಡಿಸಿ ನಿವಾಸಿಗಳ ಕಲ್ಯಾಣ ಸಂಘದ ಅಧ್ಯಕ್ಷರು ಮತ್ತು ಸಿಂಧೋಳ್ಳು ಸಮಾಜ ಕಲ್ಯಾಣ ಸಂಘದ ಪದಾಧಿಕಾರಿಗಳಿಂದ ಅಧ್ಯಯನಕ್ಕೆ ಅವಶ್ಯವಿರುವ ಮಾಹಿತಿಗಳನ್ನು ಕಲೆ ಹಾಕಲಾಗಿದೆ.

**೩. ಅವಲೋಕನ ವಿಧಾನ**

ಈ ಅಧ್ಯಯನದಲ್ಲಿ ಅವಲೋಕನ ವಿಧಾನಕ್ಕೂ ಆದ್ಯತೆ ನೀಡಲಾಗಿದೆ. ಸಿಂಧೋಳ್ಳುರಲ್ಲಿ ಇತ್ತೀಚಿನ ದಿನಗಳಲ್ಲಿ ವೃತ್ತಿ ಕ್ರಮಗಳಲ್ಲಿ ಬದಲಾವಣೆಯಾಗಿದೆ ಇವುಗಳನ್ನು ಸೂಕ್ಷ್ಮವಾಗಿ ಅವಲೋಕಿಸಲಾಗಿದೆ.

**೪. ಐತಿಹಾಸಿಕ ವಿಧಾನ**

ಈ ಸಮುದಾಯದಲ್ಲಿ 'ದೇವಿ ಪೆಟ್ಟಿಗೆ' ಮತ್ತು 'ಪೋತರಾಜ'ನ ಮುಖವಾಡದ ಆಚರಣೆಗಳು ಮುಖ್ಯವಾದವುಗಳು. ಇವುಗಳ ಮುಖೇನ ಇವರ ಸಾಂಸ್ಕೃತಿಕ ಇತಿಹಾಸವನ್ನು ಕಟ್ಟಿಕೊಡಲು ಪ್ರಯತ್ನಿಸಲಾಗಿದೆ.

**೫. ಸಂಖ್ಯಾಶಾಸ್ತ್ರೀಯ ವಿಧಾನ**

ಸಿಂಧೋಳ್ಳುರಲ್ಲಿ ಅಂಕಿ-ಸಂಖ್ಯೆಗಳಲ್ಲಾಗುವ ಏರಿಳಿತಗಳನ್ನು ಕುರಿತು ಅಧ್ಯಯನ ಮಾಡಲು, ಈ ವಿಧಾನವನ್ನು ಅನುಸರಿಸಲಾಗಿದೆ. ಪ್ರಸ್ತುತ ಸಮೀಕ್ಷೆಯ ಪ್ರಕಾರ ಇವರ ಒಟ್ಟು ಜನಸಂಖ್ಯೆ, ವೈವಾಹಿಕ ವಿಧಾನ, ಸಾಕ್ಷರತೆ, ವೃತ್ತಿಗಳ ಸಂಖ್ಯೆ ಹೀಗೆ ಹಲವು ವಿಷಯಗಳ ಬಗೆಗೆ ಗಮನಹರಿಸಲಾಗಿದೆ. ಹೆಚ್ಚಿನ ಮಾಹಿತಿಗಾಗಿ ಅನುಬಂಧದಲ್ಲಿ ಕೋಷ್ಠಗಳನ್ನು ನೀಡಲಾಗಿದೆ.

**೬. ತೌಲನಿಕ ಅಧ್ಯಯನ**

ಒಂದು ಸಮುದಾಯದ ನಡುವಿನ ಪ್ರಾದೇಶಿಕ ಭಿನ್ನತೆಗಳನ್ನು ಅರಿಯಲು ತುಲನಾತ್ಮಕ ಅಧ್ಯಯನಗಳು ಹೆಚ್ಚು ಮಹತ್ವವನ್ನು ಪಡೆದುಕೊಳ್ಳುತ್ತವೆ. ಈ ಹಿನ್ನೆಲೆಯಲ್ಲಿ ಆ ಬಗೆಯ ಮಾಹಿತಿಗಳನ್ನು ತಿಳಿಯಲು ತೌಲನಿಕ ವಿಧಾನವನ್ನು ಸಹ ಅನುಸರಿಸಲಾಗಿದೆ.

## ಕ್ಷೇತ್ರಕಾರ್ಯದ ಅನುಭವ

ಕನ್ನಡ ವಿಶ್ವವಿದ್ಯಾಲಯದ ಬುಡಕಟ್ಟು ಅಧ್ಯಯನ ವಿಭಾಗದಲ್ಲಿ ನಾನು ಎಂ.ಫಿಲ್ ಪದವಿಗಾಗಿ ಸಿಂಧೋಳ್ಳು ಸಮುದಾಯದ ಬಗ್ಗೆ ಅಧ್ಯಯನ ಮಾಡಿರುವುದರಿಂದ, ಬಳ್ಳಾರಿ ಜಿಲ್ಲೆಯ ಸಿಂಧೋಳ್ಳುರು ನನಗೆ ಚಿರಪರಿಚಿತರಾಗಿದ್ದಾರೆ. ಆ ಜನರೊಟ್ಟಿಗೆ ಅವರ ಗುಡಾರ ಕಾಲೋನಿಗಳಲ್ಲಿ ಕಳೆದಿದ್ದೇನೆ. ಅವರ ಸಮಾರಂಭಗಳಲ್ಲಿ ಭಾಗವಹಿಸಿದ್ದೇನೆ. ಹೀಗಾಗಿ ಸಿಂಧೋಳ್ಳುರಿಗೆ ತೀರಾ ಹತ್ತಿರದವನಾಗಲು ಸಾಧ್ಯವಾಯಿತು. ಅವರ ಸಂಬಂಧದ ರಸ ನಿಮಿಷಗಳು ನೂರಾರು. ಆ ಅನುಭವಗಳು ಚೇತೋಹಾರಿಯಾಗಿವೆ. ಅವರ ಕುಟುಂಬದ ಸದಸ್ಯನಂತೆ ನನ್ನನ್ನು ನೋಡಿಕೊಂಡಿದಾರೆ. ಅವರ ವಾಸಿಸುವ ಗುಡಾರಗಳ ಹತ್ತಿರ ಹೋದರೆ ಸಾಕು, ಎಲ್ಲಿಲ್ಲದ ಸಂತೋಷ, ಪ್ರೀತಿ, ಮಮತೆ ಮತ್ತು ಅತಿಗೌರವದಿಂದ ಕಾಣುವುದುಂಟು. ನಾನು ಆ ಜನರಿಂದ ಕಲಿತ ಹಲವಾರು ಜೀವನ ಪಾಠಗಳು ಎಂದಿಗೂ ಸ್ಮೃತಿಪಟಲದಿಂದ ಮರೆಯಲಾರೆ.

ಪ್ರಶ್ನಾವಳಿ ಸಿದ್ಧಪಡಿಸಿಕೊಂಡು, ಕ್ಷೇತ್ರಕಾರ್ಯ ಹೋಗುವ ಸಂದರ್ಭದಲ್ಲಿ ಅವರು ಎಲ್ಲಿ ವಾಸವಾಗಿದ್ದಾರೆ. ಅವರು ಹೆಚ್ಚಾಗಿ ಈಗ ಯಾವ ಸ್ಥಳದಲ್ಲಿ ಕಂಡುಬರುತ್ತಾರೆ. ಅವರು ವಾಸಿಸುವ ಕಡೆಗಳಲ್ಲಿ ಹೋಗುತ್ತಿದ್ದೆನು. ಹೋಗುವ ಸಂದರ್ಭದಲ್ಲಿ ಜನರು "ಏನ್ರಿ ಬ್ಯಾಗ್ ತೆಗೆದುಕೊಂಡು ಬಟ್ಟೆ ಮಾರಿತೀರಿ" ಎಂದು ಕೇಳುತ್ತಿದ್ದರು. ಕೆಲವೊಮ್ಮೆ ಅವರ ನೀಡಿದ ಮಾತುಗಳಿಗೆ ನೇರ ಉತ್ತರ ಕೊಡುತ್ತಿದ್ದೆನು. ಕೆಲವೊಮ್ಮೆ ಅಪಹಾಸ್ಯ ಮಾಡಿರುವುದುಂಟು. ಅವುಗಳನ್ನು ಇಲ್ಲಿ ಸಹಿಸಿಕೊಂಡು ಸಿಂಧೋಳ್ಳುರ ಕಾಲೋನಿಗಳಿಗೆ ಹೋದಾಗ ಆತ್ಮೀಯ ಸ್ವಾಗತದಿಂದ ಬರಮಾಡಿಕೊಳ್ಳುತ್ತಿದ್ದರು. ಕಾರಣ ನನ್ನ ಎಂ.ಫಿಲ್ ಸಂಪ್ರಬಂಧದ ಛಾಯಾಚಿತ್ರಗಳು ನೋಡಿ ಅತಿ ಸಂತೋಷಪಟ್ಟಿರುವುದುಂಟು.

ಪ್ರಶ್ನಾವಳಿಯನ್ನು ಮುಂದಿಟ್ಟುಕೊಂಡು ವ್ಯಕ್ತಿಗತ ಮಾಹಿತಿ ಪಡೆಯಲು ಹೋದಾಗ ನಿಮ್ಮ ಹೆಸರೇನು ನಿಮ್ಮ ವೃತ್ತಿ ಏನು ನಿಮ್ಮ ಸಮುದಾಯ ಏನೆಂದು ಕರೆಯುತ್ತಾರೆ ಎಂದು ಕೇಳಿದಾಗ ಒಬ್ಬೊಬ್ಬರು ಒಂದೊಂದು ರೀತಿಯಲ್ಲಿ ಪ್ರತಿಕ್ರಿಯಿಸುತ್ತಿದ್ದರು. ಕೆಲವರು ತಬ್ಬಿಬ್ಬಾದರೆ ಮತ್ತೆ ಕೆಲವರು ತಡವರಿಸುತ್ತಾರೆ. ಕೆಲವರು ಮೌನವಾಗುತ್ತಿದ್ದರು. ಹುಡುಗ ಹುಡುಗಿಯರು ಒಮ್ಮೊಮ್ಮೆ ನನ್ನ ಮಾತಿಗೆ ನಗುತ್ತಿದ್ದುಂಟು. ಇನ್ನು ಕೆಲವರು ಉದಾಸೀನ ತೋರಿಸಿದರೆ, ಕೆಲವರು ಆಶ್ಚರ್ಯ, ದುಗುಡಗಳನ್ನು ವ್ಯಕ್ತಪಡಿಸುತ್ತಿದ್ದರು. ಉತ್ತರ ಕೆಲವರದಾದರೆ, ಮತ್ತೆ ಕೆಲವರು ಪ್ರಶ್ನೆ ಮಾಡಿದವರಿಗೆ ತಿರುಗಿ ಮರು ಪ್ರಶ್ನೆಯನ್ನು ಮಾಡುತ್ತಿದ್ದರು. ಒಂದೊಂದು ಪ್ರಶ್ನೆಗೆ ಉತ್ತರ ಪಡೆಯಬೇಕಾದರೆ ಸಾಹಸದ ಕೆಲಸವೇ ಆಗಿತ್ತು. ಮನೆಗಳ ಬಗ್ಗೆ ಕೇಳಿದಾಗ ಸರಿಯಾದ ಉತ್ತರ ನೀಡಲು ಹಿಂಜರಿಯುತ್ತಿದ್ದರು. ನೋಡ್ರಿ ಸಾಹೇಬ್ರೆ ಇವೆಲ್ಲಾ ಗುಡಾರ, ಕೆಲವೊಂದು ಜನತಾ ಮನೆಗಳು ಬಂದಿವೆ. ಮನೆಗಳು ಇಲ್ಲದಿರುವವರಿಗೆ ಮನೆಗಳು ಕೊಡಿಸಬೇಕು ಎಂದು ಅಂಗಲಾಚಿದರು. ಕೆಲವರು ಮಾಹಿತಿ ನೀಡದೆ ಬೇಡವೆಂದು ಸುಮ್ಮನಾಗಿರುವುದೂ ಉಂಟು. ಮಾಹಿತಿ ಕೊಟ್ಟಿರುವ ಸಿಂಧೋಳ್ಳುರ ಕಾಲೋನಿಗಳಲ್ಲಿ ಅವರು ಆಹಾರ ನೀಡಿರುವುದುಂಟು ಅದನ್ನು ಅತಿಸಂತೋಷದಿಂದ ಸ್ವೀಕರಿಸಿಕೊಂಡಿದ್ದೇನೆ. ಕೆಲವೊಮ್ಮೆ ಉಪವಾಸದಿಂದ ಕಾಲಕಳೆಯುವ ಪ್ರಸಂಗವೂ ಬಂದಿಲ್ಲವೆಂದಲ್ಲ.

ಬೀದರ ಜಿಲ್ಲೆಯ ಹುಮನಾಬಾದ, ದಾವಣಗೆರೆ ಮತ್ತು ಶಿವಮೊಗ್ಗ ಜಿಲ್ಲೆಯ ಜಡೆ ಎಂಬಲ್ಲಿಗೆ

ಕ್ಷೇತ್ರಕಾರ್ಯಕ್ಕೆ ಹೋದಾಗ ಸಿಂಧೋಳ್ಳುರು ನಾನು ಕೇಳಿದ ಪ್ರಶ್ನೆಗಳಿಗೆ ಉತ್ತರ ನೀಡದೆ, ವಾಪಸ್ ಕಳುಹಿಸಿದರು. ಜಡೆ ಎಂಬ ಹೋಬಳಿಯಲ್ಲಿ ಸಿಂಧೋಳ್ಳು ವ್ಯಕ್ತಿ ಮಧ್ಯಪಾನ ಮಾಡಿಕೊಂಡು, ನನ್ನನ್ನ ಅವಾಚ್ಯಶಬ್ದಗಳಿಂದ ಬೈದದ್ದೂ ಉಂಟು. ಅಂದು ರಾತ್ರಿ ನಿದ್ದೆ ಇಲ್ಲದೆ ರಾತ್ರಿ ಎಲ್ಲಾ ಪೇಚಾಟ ಮಾಡುವಂತಾಗಿತ್ತು. ಬಿಜಾಪುರ ಜಿಲ್ಲೆಯ ಸಿಂಧಿಗಿಯಲ್ಲಿ ಸಮುದಾಯದ ಬಗ್ಗೆ ಮಾಹಿತಿ ನೀಡಿರಿ ಎಂದು ಕೇಳಿದಾಗ ಅವರು ಇಂದು ಮಂಗಳವಾರ ದೇವಿಯ ಅನುಗ್ರಹದಲ್ಲಿ ನಮ್ಮದು ನ್ಯಾಯ ಪಂಚಾಯಿತಿ ಇದೆ. ಮಾಹಿತಿ ನೀಡಲಿಕ್ಕೆ ಆಗುವುದಿಲ್ಲ ಎಂದು ಹೇಳಿದರು. ಅಲ್ಲಿದ್ದ ಜನರು ಕೇವಲ ಜನಸಂಖ್ಯೆ ಮಾಹಿತಿಯನ್ನು ನೀಡಿದರು. ಬೆಂಗಳೂರು ನಗರದಲ್ಲಂತೂ ಅವರನ್ನು ಹುಡುಕಿದರೂ ಅವರ ನೆಲೆ ಮಾತ್ರ ಕಾಣಲಿಲ್ಲ. ಕನಕಪುರದಲ್ಲಿ ಸಿಂಧೋಳ್ಳುರು ಇದ್ದಾರೆ ಎಂಬ ಮಾಹಿತಿ ಸಿಕ್ಕಾಗ ಅಲ್ಲಿಗೆ ಆ ಸಮುದಾಯವನ್ನು ಹುಡುಕಿಕೊಂಡು ಹೋದಾಗ ಅಲ್ಲಿ ಅವರು ಇಲ್ಲದಿರುವುದು ಕಂಡುಬಂದಾಗ ಸುಮ್ಮನೆ ನಿರಾಶೆಯಿಂದ ವಾಪಸ್ಸು ಬರುವಂತಾಯಿತು.

ಹುಬ್ಬಳ್ಳಿಯ ಸಿದ್ಧೇಶ್ವರ ನಗರದ ಸಿಂಧೋಳ್ಳು ಸಮುದಾಯದ ಬಗ್ಗೆ ಮಾಹಿತಿ ಸಂಗ್ರಹಿಸಲು ಹೋದಾಗ ಅಲ್ಲಿ ನ್ಯಾಯ ಪಂಚಾಯಿತಿ ನಡೆಯುತ್ತಿತ್ತು. ಹೊರಗಿನಿಂದ ಬಂದಿರುವ ನನ್ನನ್ನು ನೋಡಿ ಆತ್ಮೀಯವಾಗಿ ಬರಮಾಡಿಕೊಂಡರು. ನನಗೆ ನ್ಯಾಯ ಪಂಚಾಯಿತಿಯಲ್ಲಿ ಭಾಗವಹಿಸಲು ಅನುಮತಿಯನ್ನು ನೀಡಿದರು. ನಾನು ಅಲ್ಲಿ ಅವರ ನ್ಯಾಯ ತೀರ್ಮಾನ, ವಾದವಿವಾದಗಳನ್ನು ನಡೆಸುವ ರೀತಿ ನೀತಿಗಳನ್ನು ದಾಖಲಿಸಲು ಛಾಯಾಚಿತ್ರಗಳನ್ನು ಪಡೆದುಕೊಂಡೆನು. ಆ ಸಮುದಾಯದ ಜಂಬಯ್ಯನವರು ಉಣಕಲ್ಲ ಕೆರೆಗೆ ಕರೆದುಕೊಂಡು ಹೋದರು. ನಾವು ಸೋಗುವ ದಾರಿಯಲ್ಲಿ ಅಂದರೆ ಕೆರೆಯ ಹಿಂಭಾಗದಲ್ಲಿ ಸಮಾಧಿಯ ಮುಂದೆ ಮಾನವನ ತಲೆಬುರುಡೆ ಹಾಗೂ ನಾಲ್ಕು ಕಾಲುಗಳ ಅಸ್ಥಿಪಂಜರವನ್ನು ಕುಂಕುಮ ಮತ್ತು ಅರಿಷಿನದಿಂದ ಸಿಂಗರಿಸಿದ್ದರು. ಅದರ ತಳದಲ್ಲಿ ರಂಗೋಲಿ ಹಾಕಿ ಅದರ ಮೇಲೆ ನಿಂಬೆಹಣ್ಣು, ಧೂಪದ ಹೊಗೆ ಹಾಕಿ ಪೂಜಿಸಿದ್ದರು. ನನಗೆ ಈ ದೃಶ್ಯದ ಛಾಯಾಚಿತ್ರಗಳು ಬೇಕಾಗಿದೆ ಛಾಯಾಚಿತ್ರ ತೆಗೆಯಲು ಅನುಮತಿ ಕೊಡಿ ಎಂದು ಕೇಳಿದಾಗ ಅವರು ಅದಕ್ಕೆ ಒಪ್ಪಲಿಲ್ಲ. ಸಂಶೋಧಕ ವಿದ್ಯಾರ್ಥಿಯಾಗಿ ಪರಿಪರಿಯಾಗಿ ಬೇಡಿಕೊಂಡರೂ ಅವರು ಯಾರು ಅದಕ್ಕೆ ಒಪ್ಪಲಿಲ್ಲ. ಅವರಲ್ಲಿ ಕೆಲವರು ಅವಾಚ್ಯ ಶಬ್ದಗಳಿಂದ ಬೈದದ್ದಲ್ಲದೆ, ಕೆಲವರು ಹೊಡೆಯಲಿಕ್ಕೂ ಮುಂದಾದರು. ನಾನು ಅನಿವಾರ್ಯವಾಗಿ ಸುಮ್ಮನಿರ ಬೇಕಾಯಿತು. ಆದರೂ ನನ್ನ ವರ್ತನೆಯನ್ನು ಕಂಡು ಅವರಲ್ಲಿ ಕೆಲವರು ಎಚ್ಚರಿಕೆಯಾಗಿ "ನೋಡ್ರಿ ಸಾಹೇಬ್ರೆ ನೀವು ಇದನ್ನು ಪೇಪರ್‌ನಲ್ಲಿ ಹಾಕಿದ್ರೆ ನಿಮ್ಮ ಜೀವ ತೆಗೆತೀವಿ" ಎಂದು ಎಚ್ಚರಿಸಿದರು. ಅವರಿಗೆ ನಾನು ಪತ್ರಿಕೆಯಲ್ಲಿ ಪ್ರಕಟಿಸುವುದಿಲ್ಲ ಎಂಬ ವಿಶ್ವಾಸದ ಭರವಸೆಯನ್ನು ಕೊಟ್ಟೆನು. ಮತ್ತೆ ಎಲ್ಲಾರು ತಮ್ಮ ಕಾಲೋನಿಗಳಿಗೆ ಹೋದರು. ಹೀಗೆ ಸಿಂಧೋಳ್ಳು ಸಮುದಾಯದ ಕ್ಷೇತ್ರಕಾರ್ಯದಲ್ಲಿ ಆದ ಅನುಭವಗಳು ಸಾಕಷ್ಟು ಇದ್ದರೂ ಕೆಲವೊಂದು ಪ್ರಸಂಗಗಳನ್ನು ಮಾತ್ರ ಇಲ್ಲಿ ಪ್ರಸ್ತಾಪಿಸಲಾಗಿದೆ.

## ಅಧ್ಯಾಯ - ೨

## ಐತಿಹಾಸಿಕ ಹಿನ್ನೆಲೆ

೧. ಮೂಲ

೨. ಪರಿಚಯ

೩. ಪ್ರಸಾರ ಮತ್ತು ಜನಸಂಖ್ಯೆ

೪. ಸೃಷ್ಠಿ ಪುರಾಣಗಳು

೫. ಸಾಂಸ್ಕೃತಿಕ ವೀರರು



# ಐತಿಹಾಸಿಕ ಹಿನ್ನೆಲೆ

ಬುಡಕಟ್ಟು ಸಮುದಾಯಗಳು ತನ್ನದೇ ಆದ ವೈವಿಧ್ಯಮಯ ಸಂಸ್ಕೃತಿಯನ್ನು ಹೊಂದಿವೆ. ಇತರ ಸಮುದಾಯಗಳ ಆಚಾರ ವಿಚಾರಗಳಿಗಿಂತ ತಮ್ಮ ಆಚಾರ ವಿಚಾರಗಳನ್ನೇ ಶ್ರೇಷ್ಠವೆಂದು ಭಾವಿಸಿರುವ ಈ ಸಮುದಾಯಗಳು, ಅವುಗಳನ್ನು ಅತ್ಯಂತ ಕಟ್ಟುನಿಟ್ಟಾಗಿ ಪಾಲಿಸುತ್ತಾ ಬರುವುದನ್ನು ಕಾಣಬಹುದಾಗಿದೆ. ಆಧುನೀಕರಣ, ಜಾಗತೀಕರಣ ಮತ್ತು ಉದಾರೀಕರಣಗಳ ಜೊತೆಗೆ ಮುಖಾಮುಖಿಯಾಗಿರುವ ಈ ಸಮುದಾಯಗಳು, ಪಾರಂಪರಿಕ ಸಂಸ್ಕೃತಿಯ ಜೊತೆಗಿನ ಸಂಬಂಧವನ್ನು ಸಡಿಲಗೊಳಿಸಿವೆ. ಅಂದರೆ ಬುಡಕಟ್ಟು ಸಮುದಾಯಗಳ ಮೇಲೆ ಆಧುನೀಕರಣದ ಪ್ರಭಾವವಾಗಿದ್ದು, ಮೂಲ ಸಂಸ್ಕೃತಿಯಲ್ಲಿ ಹಲವು ಬದಲಾವಣೆಗಳು ಘಟಿಸಿರುವುದು ಗೋಚರವಾಗುತ್ತದೆ. ಕಾಲಕ್ರಮೇಣ ಈ ಪ್ರಭಾವದ ಅಲೆ ಅಧಿಕವಾಗಿ ಮೂಲ ಸಂಸ್ಕೃತಿ ಸಂಪೂರ್ಣವಾಗಿ ಮರೆಯಾಗಲೂಬಹುದು. ಕೆಲವು ಸಮುದಾಯಗಳಿಗೆ ಇಂಥ ಸಂದಿಗ್ಧ ಪರಿಸ್ಥಿತಿಗಳು ಒದಗಿರಲೂಬಹುದು. ಆ ಹಿನ್ನೆಲೆಯಲ್ಲಿ ಬುಡಕಟ್ಟು ಸಮುದಾಯಗಳ ಬಗೆಗಿನ ಸೃಷ್ಟಿ ಪುರಾಣಗಳು, ಸಾಂಸ್ಕೃತಿಕವೀರರ ಚರಿತ್ರೆ ಮೊದಲಾದ ಪ್ರಧಾನ ಅಂಶಗಳನ್ನು ಗುರುತಿಸುವುದರ ಮುಖೇನ ಸಮುದಾಯಗಳ ಅಖಂಡ ಸಂಸ್ಕೃತಿಯನ್ನು ದಾಖಲಿಸಬೇಕಾದ ಅವಶ್ಯಕತೆಯಿದೆ.

ಕರ್ನಾಟಕ ಸಾಂಸ್ಕೃತಿಕ ಚರಿತ್ರೆಯಲ್ಲಿ ಸಿಂಧೋಳ್ಳು ಸಮುದಾಯ ತನ್ನದೇ ಆದ ವೈಶಿಷ್ಟ್ಯವನ್ನು ಹೊಂದಿದೆ. ಇತರ ಸಮುದಾಯಗಳ ಜೊತೆ ಬದುಕುತ್ತಿದ್ದರೂ, ಅಷ್ಟಾಗಿ ಯಾವುದೇ ಸಮುದಾಯದ ಪ್ರಭಾವಕ್ಕೆ ಒಳಗಾಗದೆ ತನ್ನ ಪಾರಂಪರಿಕ ಸಾಂಸ್ಕೃತಿಕ ಚಹರೆಗಳನ್ನು ಈಗಲೂ ಉಳಿಸಿಕೊಂಡು ಬಂದಿದೆ. ಈ ಸಮುದಾಯದ ಜನರು ಗುಡಾರ, ಭಿಕ್ಷೆ ಬೇಡುವ ಬುಟ್ಟಿ, ಮೊರ, ಚಾಟಿ, ಪೆಟ್ಟಿಗೆ ಮತ್ತು ದೇವಿ ಮೂರ್ತಿ ಮೊದಲಾದ ಒಂದೊಂದು ವಸ್ತುವಿನ ಬಗೆಗೂ ಒಂದೊಂದು ಕಥೆ, ಐತಿಹ್ಯಗಳನ್ನು ಹೇಳುವುದುಂಟು. ಜೊತೆಗೆ ತಮ್ಮ ಸಮುದಾಯದ ಮೂಲ ಹಾಗೂ ಅದರ ಚಾರಿತ್ರಿಕ ಬೆಳವಣಿಗೆಗಳನ್ನು ಕುರಿತು ಕೆಲವು ಪುರಾಣ ಕಥೆಗಳನ್ನು ಹೇಳಲಾಗುತ್ತಿದೆ. ಪ್ರಸ್ತುತ ಅಧ್ಯಯನದಲ್ಲಿ ಅಂಥ ಪುರಾಣಕಥೆಗಳನ್ನು, ಸೃಷ್ಟಿಪುರಾಣಗಳು ಎಂದು ಪರಿಭಾವಿಸಲಾಗಿದೆ. ಸೃಷ್ಟಿಪುರಾಣಗಳ ಬಗೆಗೆ ಕರ್ನಾಟಕದ ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುವ ಸಿಂಧೋಳ್ಳುರಲ್ಲಿ ಏಕಾಭಿಪ್ರಾಯವಿರದೆ, ಭಿನ್ನಾಭಿಪ್ರಾಯಗಳಿವೆ. ಅಂದರೆ ಒಂದೊಂದು ಪ್ರದೇಶದ ಸಿಂಧೋಳ್ಳುರು ಒಂದೊಂದು ಬಗೆಯ ಸೃಷ್ಟಿಪುರಾಣಗಳನ್ನು ಹೇಳುವುದು ಕಾಣಬರುತ್ತಿದೆ. ಸಿಂಧೋಳ್ಳು ಸಮುದಾಯದ ಚಾರಿತ್ರಿಕ ಬೆಳವಣಿಗೆಯಲ್ಲಿ ಪೌರಾಣಿಕ ವ್ಯಕ್ತಿಗಳೆನಿಸಿ ಕೊಂಡವರಲ್ಲಿ ಮುನಿಸ್ವಾಮಿ, ಈರನಾಗಮ್ಮ ಮತ್ತು ಪೋತರಾಜು ಪ್ರಧಾನವಾಗಿದ್ದಾರೆ. ಈ ಮೂರು ಜನ ಪೌರಾಣಿಕ ವ್ಯಕ್ತಿಗಳ ಬಗೆಗಿನ ಚರಿತ್ರೆಗಳು ಈ ಸಮುದಾಯದ ಅಧ್ಯಯನದಲ್ಲಿ ಅತ್ಯಂತ ಪ್ರಮುಖ

ಪಾತ್ರವನ್ನು ವಹಿಸುತ್ತಿವೆ. ಆ ಹಿನ್ನೆಲೆಯಲ್ಲಿ ಪ್ರಸ್ತುತ ಅಧ್ಯಾಯದಲ್ಲಿ ಸೃಷ್ಟಿಪುರಾಣಗಳ ಬಗೆಗೆ ಹೆಚ್ಚು ಕೇಂದ್ರಿಕರಿಸಲಾಗಿದೆ.

## ೧. ಮೂಲ

ಸಮಾಜಶಾಸ್ತ್ರೀಯ ಅಧ್ಯಯನಗಳಲ್ಲಿ ಸಮುದಾಯಗಳನ್ನು ಕುರಿತು ಅಧ್ಯಯನ ಮಾಡುವಾಗ ದತ್ತ ಮಾಹಿತಿಯನ್ನು ಆಧರಿಸಿ ಸಮುದಾಯಗಳ ಮೂಲವನ್ನು ಗುರುತಿಸಬಹುದಾದರೂ, ಅದು ಎಲ್ಲಾ ಅಧ್ಯಯನಗಳ ಸಂದರ್ಭದಲ್ಲಿ ಸಾಧ್ಯವಾಗದೆ ಇರಲೂ ಸಾಧ್ಯ. ಇದಕ್ಕೆ ಹಲವಾರು ಅಂಶಗಳು ಕಾರಣ ವಾಗಿರುತ್ತವೆ. ಸಾಮಾನ್ಯವಾಗಿ ಬುಡಕಟ್ಟು ಸಮುದಾಯಗಳು ದಟ್ಟವಾದ ಅರಣ್ಯ ಪ್ರದೇಶ ಅಂದರೆ ತಮಗೆ ಬೇಕಾಗಿರುವ ಆಹಾರ ಪದಾರ್ಥಗಳು ಮತ್ತು ಬೇಟೆಗೆ ಅನುಕೂಲಕರವಾದ ಸ್ಥಳ ಯಾವುದೋ ಅಲ್ಲಿ ನೆಲೆಸಿರುವುದನ್ನು ಕಾಣಬಹುದಾಗಿದೆ. "ಏಕಾಂಗಿ ಅಲೆಮಾರಿಯಾಗಿರುತ್ತಿದ್ದ ಮಾನವ ಕಾಲಕಳೆದಂತೆ ಕ್ರೂರ ಮೃಗಗಳ ಭಯದಿಂದಲೋ, ತಾನು ತನ್ನವರೆಂಬ ಅರಿವು ಬಂದಿದ್ದರಿಂದಲೋ ಗುಂಪಾಗಿ, ಸಮೂಹ ವಾಗಿ, ತಮ್ಮದೇ ಸಾಮಾಜಿಕ ಪರಿಸರವನ್ನು ನಿರ್ಮಿಸಿಕೊಂಡರೆಂಬುದನ್ನು ಮರೆಯುವಂತಿಲ್ಲ"[೧] ಅದರಲ್ಲಿ ಸಿಂಧೋಳ್ಳುರೂ ಕೂಡ ತಮಗೆ ಬೇಕಾದ ಆಹಾರ ಪದಾರ್ಥಗಳನ್ನು, ಬೇಟೆ ಮತ್ತು ಭಿಕ್ಷಾಟನೆಯ ಮೂಲಕವೇ ಸಂಪಾದಿಸಿಕೊಂಡು ಜೀವನ ಸಾಗಿಸುತ್ತಾ ಬಂದವರು. ಸಿಂಧೋಳ್ಳುರು ಊರಿನ ಹೊರಗಿನ ಸ್ಥಳಗಳಲ್ಲಿ ಶಾಲಾ ಆವರಣಗಳಲ್ಲಿ ಬಯಲು ಸ್ಥಳಗಳಲ್ಲಿ ಕೊಳಚೆ ಪ್ರದೇಶಗಳಲ್ಲಿ ಗುಡಾರಗಳನ್ನು ನಿರ್ಮಿಸಿಕೊಂಡು ಜೀವನ ನಡೆಸುತ್ತಿದ್ದಾರೆ.

ಸಿಂಧೋಳ್ಳುರ ಮೂಲ ಸ್ಥಳ ಆಂಧ್ರಪ್ರದೇಶ. ಇವರು ಹೆಚ್ಚಾಗಿ ತೆಲಂಗಾಣ ಪ್ರಾಂತ್ಯದಲ್ಲಿ ಕಂಡು ಬರುತ್ತಾರೆ. ಇವರ ಆಚರಣಾ ಕಲೆ ವಾದ್ಯಗಳಾದ ಗೆಜ್ಜೆಯ ಕುಣಿತ, ಮದ್ದಲೆ, ತಮ್ಮಟೆ ಹಾಗೂ ಬುರ್ರ ಬುರ್ರವಾದ್ಯಗಳು ಮೂಲ ಕುಲದೇವತೆಯಾದ ಅಂಕಮ್ಮನ ಆರಾಧನೆಯಿಂದಲೇ ಬಂದಿವೆ ಎಂಬುದು ಇವರ ನಂಬಿಕೆಯಾಗಿದೆ. ಮತ್ತು ಇವರ ಭಿಕ್ಷಾಟನೆ ನೃತ್ಯದ ಬಗೆಗೆ ರಾಮಾಯಣ, ಮಹಾಭಾರತ ಹಾಗೂ ಅಂಕಮ್ಮನ ಕಥೆಗಳಲ್ಲಿ ಕೆಲವು ಉಲ್ಲೇಖಗಳು ಸಿಗುತ್ತವೆ. ತೆಲಂಗಾಣ ಪ್ರಾಂತ್ಯದಲ್ಲಿ ಭಿಕ್ಷಾಟನೆ ಕಲಾವಿದರಾಗಿ ಮೆಚ್ಚುಗೆಯನ್ನು ಪಡೆದುಕೊಂಡಿದ್ದಾರೆ. ಇವರ ಸಾಂಸ್ಕೃತಿಕ ಅಂಶಗಳು ಈ ಪ್ರದೇಶದಲ್ಲಿಯೇ ಜನ್ಮತಾಳಿದವು ಎಂದು ಹೇಳಲಾಗುತ್ತಿದೆಯಾದರೂ ಇವುಗಳ ಬಗ್ಗೆ ಲಿಖಿತ ಆಧಾರಗಳು ಎಲ್ಲಿಯೂ ಸಿಗುವುದಿಲ್ಲ. ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯೊಂದಿಗೆ ನಿಕಟ ಸಂಬಂಧವನ್ನು ಹೊಂದಿದ್ದಾರೆ.

ಪದ ನಿಷ್ಪತ್ತಿ- ಕರ್ನಾಟಕದ ಸಾಂಸ್ಕೃತಿಕ ಚರಿತ್ರೆಯಲ್ಲಿ ಸಿಂಧೋಳ್ಳುರರಿಗೆ ವಿಶಿಷ್ಟ ಸ್ಥಾನಮಾನಗಳಿವೆ. ಸಿಂಧೋಳ್ಳುರು ಬುಡಕಟ್ಟು ಸಮುದಾಯಕ್ಕೆ ಸೇರಿದವರಾಗಿದ್ದಾರೆ. ಇವರ ಮೂಲ ಸ್ಥಳ ಆಂಧ್ರಪ್ರದೇಶ ಇರಬಹುದು. ಅಲ್ಲಿ ಇವರನ್ನು 'ಸಿಂದ್ ಮಾದಿಗರ್' ಎಂದು ಕರೆಯುವುದುಂಟು. ಬಹುತೇಕ ಮಾದಿಗ ಉಪಜಾತಿಯ ಸಿಂದ್ ಮಾದಿಗರ ಬಗ್ಗೆ ಮಾಹಿತಿ ಸಿಕ್ಕಿರುವುದು ಥರಸ್ಟನ್ ಅವರ ಪುಸ್ತಕದಲ್ಲಿ "The Sindhuvallu (Drummers) are Madigas, who so about acting scenes from The Ramayana or The Mahabaratha and The Story of Ankamma"[2] ಆಂಧ್ರಪ್ರದೇಶದ ತೆಲಂಗಾಣ ಪ್ರಾಂತ್ಯದಲ್ಲಿ ಇವರನ್ನು "ಚಿಂದಲು>ಚಿಂದರು>ಚಿಂದೋಳ್ಳ>ಚಿಂದೋರು>

ಸಿಂಧೋಳ್ಳು>ಸಿಂಧೋರು ಎಂದು ಇತ್ಯಾದಿ ಪದಗಳಿಂದ ಕರೆದರೆ, ಉಳಿದ ಪ್ರಾಂತ್ಯಗಳಲ್ಲಿ ಮಾದಿಗ ಬೋಗಲು>ಮಾದಿಗ ಬೋಗಗಳು"[೩] ಎಂದು ಕರೆಯಲಾಗುತ್ತದೆ.

"ಸಿಂಧು ಎಂಬುದು ತೆಲುಗಿನ 'ಚಿಂದು' ಪದದ ತದ್ಭವ ರೂಪ. ಚಿಂದು ಪದಕ್ಕೆ ನಾಟ್ಯ ಅಥವಾ ಗೆಜ್ಜೆಯ ಕುಣಿತ ನಾಟ್ಯದಿಂದಲೇ ಬಂದಿರಬೇಕು"[೪] ತೆಲಂಗಾಣ ಪ್ರಾಂತ್ಯದಲ್ಲಿ ಗೆಜ್ಜೆಯ ಕುಣಿತದ ಮೂಲಕ ಸಿಂಧೋಳ್ಳು ಸಮುದಾಯ ಉಗಮಗೊಂಡಿರಬಹುದು.

ಆಂಧ್ರಪ್ರದೇಶದ ಸಿಂಧೋಳ್ಳುರ ಬೆಡಗು ಮತ್ತು ಬಳಿಗಳು ಕರ್ನಾಟಕದ ಧಾರ್ಮಿಕ ಭಿಕ್ಷಾಟನೆಯಲ್ಲಿ ತೊಡಗಿಸಿಕೊಂಡಿರುವ ದುರುಗಮುರಗಿ, ಬುರ‍್ರ ಬುರ‍್ರಚಾ, ಸುಂಕಲಮ್ಮನ ಮತ್ತು ಕೂಗಮ್ಮನ ಆಡಿಸು ವವರು ಹೀಗೆ ಬೇರೆ ಬೇರೆ ಹೆಸರುಗಳಿಂದ ಕರೆಯಲಾಗುತ್ತಿರುವ ಈ ಸಮುದಾಯಗಳ ನಡುವೆ ವೃತ್ತಿ ಭಿನ್ನತೆಗಳು ಇದ್ದರೂ, ಬೆಡಗು ಮತ್ತು ಬಳಿಗಳಲ್ಲಿ ಸಾಮ್ಯತೆಯಿದೆ. ಆಂಧ್ರ ಮತ್ತು ಕರ್ನಾಟಕದ ಸಿಂಧೋಳ್ಳುರಿಗೆ ವೈವಾಹಿಕ ಸಂಬಂಧಗಳು ಏರ್ಪಟ್ಟಿವೆ ಎಂದು ಸಮುದಾಯದ ಹಿರಿಯರು ಹೇಳುತ್ತಾರೆ.

ಪ್ರಸ್ತುತ ಅಧ್ಯಯನದ ವ್ಯಾಪ್ತಿಯ ಕಂಪ್ಲಿಯ ಸಿಂಧೋಳ್ಳುರು ಆಂಧ್ರಪ್ರದೇಶದ ಅನಂತಪುರ, ರಾಯದುರ್ಗ, ವಿಜಯವಾಡ ಮತ್ತು ತಾಡಪತ್ರಿ ಪ್ರಾಂತ್ಯಗಳಲ್ಲಿ ಸಿಂಧೋಳ್ಳುರೊಂದಿಗೆ ವೈವಾಹಿಕ ಸಂಬಂಧ ವನ್ನು ಬೆಳೆಸಿದ್ದಾರೆ. ಕರ್ನಾಟಕದಲ್ಲಿ ನೆಲೆಸಿರುವ ಸಿಂಧೋಳ್ಳುರು ಕೌಟುಂಬಿಕ ಪರಿಸರದಲ್ಲಿ ಸಾಮಾನ್ಯವಾಗಿ ತೆಲುಗು ಮಾತನಾಡುತ್ತಾರೆ. ಕರ್ನಾಟಕದ ಸಿಂಧೋಳ್ಳುರಲ್ಲಿ ಸಿಂಧ್ಯಾಲೋಳ್, ಸಿಂಧೋಳ್ಳು, ರಾವುಲೋಳ್, ಪೆದ್ದದ್ಯಾಮನೋರ್, ದ್ಯಾಮನೋರ್ ಮೊದಲಾದ ಬೆಡಗು ಅಥವಾ ಗೋತ್ರಗಳು ಇದ್ದು, ಇವೇ ಬೆಡಗುಗಳು ಆಂಧ್ರಪ್ರದೇಶದ ಸಿಂಧೋಳ್ಳುರಲ್ಲಿಯೂ ಕಾಣಬರುತ್ತವೆ. ಈ ಹಿನ್ನೆಲೆಯಲ್ಲಿ ಸಿಂಧೋಳ್ಳುರು ಮೂಲತಃ ಆಂಧ್ರದವರಾಗಿದ್ದು ಕರ್ನಾಟಕಕ್ಕೆ ವಲಸೆ ಬಂದಿರುವ ಸಾಧ್ಯತೆಗಳಿವೆ.

### ೨ ಪರಿಚಯ

ಬೀದರ್‌ನಿಂದ ಚಾಮರಾಜಪೇಟೆಯವರೆಗೆ ಸುಂದರವಾದ ಅರಣ್ಯ ಪ್ರದೇಶ, ಬೃಹತ್ ಕಾರ್ಖಾನೆಗಳು, ಬೃಹತ್ ಅಣೆಕಟ್ಟುಗಳು ಇತ್ಯಾದಿನ್ನೊಳಗೊಂಡಿರುವ ಈ ಭೂಪ್ರದೇಶದಲ್ಲಿ ೨೭ ಜಿಲ್ಲೆಗಳಿದ್ದು, ಇದನ್ನು 'ಕರ್ನಾಟಕ'ವೆಂದು ಗುರುತಿಸಲಾಗುತ್ತದೆ. ನೀರು ಹರಿಯುವ ಜುಳುಜುಳುನಾದ, ಮನರಂಜನೆ ನೀಡುವ ಬಂಡೀಪುರ, ನಾಗರಹೊಳೆ, ಬನ್ನೇರಘಟ್ಟ ಮೊದಲಾದ ಅಭಯಾರಣ್ಯಗಳೂ ಇವೆ. ಈ ಕಾಡಿನಲ್ಲಿ ಆನೆ, ಸಿಂಹ, ಹುಲಿ ಮುಂತಾದ ಪ್ರಾಣಿಗಳಿರುವಂತೆ ನವಿಲು, ಗಿಳಿ, ಮೊಲ ಮತ್ತು ಗೊರವಂಕ ಮೊದಲಾದ ಪಕ್ಷಿಗಳೂ ಇವೆ. ಮೈಸೂರು ಮಲ್ಲಿಗೆ, ಮಂಡ್ಯ ಸಕ್ಕರೆ, ತೋರಣಗಲ್ಲು ಉಕ್ಕಿನ ಕಾರ್ಖಾನೆ, ವಾಡಿಯ ಸಿಮೆಂಟ್ ಕಾರ್ಖಾನೆ, ಮೊಳಕಾಲ್ಮೂರಿನ ಕಲಾತ್ಮಾಕ ರೇಶ್ಮೆ ಸೀರೆಗಳ ತಯಾರಿಕೆ ಈ ಪ್ರದೇಶಕ್ಕೆ ಒಂದು ಮೆರಗು ತಂದು ಕೊಟ್ಟಿವೆ. ಚನ್ನಪಟ್ಟಣದ ಗೊಂಬೆಗಳು ಕಲಾತ್ಮಕವಾಗಿ ಜಗತ್ಪ್ರಸಿದ್ಧಿಯನ್ನು ಪಡೆದಿವೆ. ಮೈಸೂರು ದಸರಾ, ಕೊಪ್ಪಳದ ಗವಿಸಿದ್ದೇಶ್ವರ, ಶರಣಬಸವೇಶ್ವರ ಜಾತ್ರೆ ಮತ್ತು ಬೆಂಗಳೂರು ಕರಗ ಸಾಂಸ್ಕೃತಿಕವಾಗಿ ಇಡೀ ಜಗತ್ತನ್ನು ತಮ್ಮ ಕಡೆ ಆಕರ್ಷಿಸಿವೆ.

ಈ ನಾಡಿನ ಬಯಲು ಸೀಮೆ, ವಾಯುವ್ಯ ಭಾಗ, ಈಶ್ಯಾನ ಭಾಗ ಜನರನ್ನು ಒಳಗೊಂಡಂತೆ ಶೀಘ್ರದಲ್ಲಿ ಮಂದಹಾಸ ಹೆಚ್ಚಿಸಿದೆ. ಅದೇ ರೀತಿಯಲ್ಲಿ ವೈವಿಧ್ಯಮಯವಾದ ಬದುಕನ್ನು ಒಳಗೊಂಡ

ಅನೇಕ ಜಾತಿ, ಸಮುದಾಯ ಮತ್ತು ಬುಡಕಟ್ಟುಗಳು ಕಂಡು ಬರುತ್ತವೆ. ಇವರ ವೇಷಭೂಷಣಗಳು, ಮಾತೃಭಾಷೆ ಮತ್ತು ವೃತ್ತಿಗಳು ವೈಧಾನಿಕತೆಯಲ್ಲಿ ಭಿನ್ನ ಮತ್ತು ವಿಭಿನ್ನ ಸಂಸ್ಕೃತಿಯ ಲಕ್ಷಣಗಳನ್ನು ಒಳಗೊಂಡಿರುವುದು ಕಂಡುಬರುವುದುಂಟು. ಇಲ್ಲಿನ ಸಂಪ್ರದಾಯಗಳು ಇನ್ನು ಮನುಷ್ಯ ಜಗತ್ತಿನ ಕತೆ ಹೇಳುತ್ತವೆ. ಪ್ರಕೃತಿಯ ಮಡಿಲಿನಲ್ಲಿ ಮನ ಮಿಡಿಯುವ ಕಾವ್ಯದಲೆಯ ಗುರುತುಗಳು ಕಾಣಿಸುತ್ತವೆ. ಗುಡಾರ, ಗುಡಿಸಲುಗಳು ವಿಭಿನ್ನ ರೀತಿಯಲ್ಲಿ ಕಂಡು ಬರುತ್ತವೆ. ಬುಡಕಟ್ಟು ಸಮುದಾಯಗಳು ತಮ್ಮದೇ ಸಂಸ್ಕೃತಿಯನ್ನು ಹೊಂದಿವೆ. ಈ ಎಲ್ಲಾ ಸಂಗತಿಗಳು ಈ ನಾಡಿನ ವೈಶಿಷ್ಟ್ಯಗಳೇ.

ಸಿಂಧೋಳ್ಳುರು ಕರ್ನಾಟಕದ ಉದ್ದಗಲ್ಲಕ್ಕೂ ಧಾರ್ಮಿಕ ಭಿಕ್ಷೆಬೇಡಿಕೊಂಡು ಅಲೆಮಾರಿ ಜೀವನ ಸಾಗಿಸುತ್ತಾ, ಈಗ ಒಂದೆಡೆ ನಿಂತು ಜೀವನಸಾಗಿಸುತ್ತಿದ್ದಾರೆ. ಭಿಕ್ಷಾಟನೆಯಿಂದ ಜೀವನ ಸಾಗಿಸುವ ಸಿಂಧೋಳ್ಳುರು ಕರ್ನಾಟಕದ ೨೦ ಜಿಲ್ಲೆಗಳಲ್ಲಿ ಬೇರೆ ಬೇರೆ ಹೆಸರುಗಳಿಂದ ಕಾಣಸಿಗುವರು. ಅವುಗಳಾದ ದುರಗಮುರಗಿ, ಬುರ್ರ ಬುರ್ರಚಾ, ಬುರ್ರ ಬುರ್ರ ಪೋಚಮ್ಮ, ಬುರ್ರ ಬುರ್ರ ಸುಂಕಲಮ್ಮ, ಕೂಗಮ್ಮನ ಆಡಿಸುವರು, ಪೋತರಾಜ, ಬುರ್ರ ಮಾರಿಯರ್, ಊರಮಾರಿಯರ್, ಪೆಟ್ಟಿಗೆ ಪೂಜಾರಿ, ಬುಟ್ಟಿಕೂಗಮ್ಮ, ಮರಗವ್ವ ಇತ್ಯಾದಿ ಹೆಸರುಗಳಿಂದ ಕರೆಯುವುದುಂಟು. ಇವರು ಹೆಚ್ಚಾಗಿ ಗುಡಾರಗಳಲ್ಲಿ ವಾಸಿಸುತ್ತಾ, ಭಿಕ್ಷೆ ಸಿಗುವ ಸ್ಥಳದಲ್ಲಿ ನೆಲೆಯೂರಿದ್ದಾರೆ. ಇವರು ತಮ್ಮ ಭಾಷೆ, ವೇಷಭೂಷಣ, ಸಂಸ್ಕೃತಿಯ ವಿಚಾರಧಾರೆಗಳನ್ನು ಇಂದಿಗೂ ಉಳಿಸಿಕೊಂಡು ಬಂದಿರುವರು. ಸಾಮಾನ್ಯವಾಗಿ ಭಿಕ್ಷಾಟನೆಯಿಂದ ಜೀವನ ನಿರ್ವಹಿಸಿಕೊಂಡು, ತಮ್ಮ ಬದುಕಿನ ಸಂಸ್ಕೃತಿಯನ್ನು ಮೈಗೂಡಿಸಿಕೊಂಡು ಬಂದಿರುವುದನ್ನು ಇಂದಿಗೂ ಕಾಣಬಹುದು. ಸಿಂಧೋಳ್ಳುರು ಸಾಮಾಜಿಕ, ಆರ್ಥಿಕ ಮತ್ತು ಧಾರ್ಮಿಕ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದಿರುವರು. ಇವರ ಜೀವನ ವಿಧಾನ, ಸಾಂಸ್ಕೃತಿಕ ಬದುಕು, ಸಂಪ್ರದಾಯಗಳು ಇತ್ಯಾದಿ ಜಾನಪದ ಜಗತ್ತನ್ನು ಶ್ರೀಮಂತಗೊಳಿಸುವಲ್ಲಿ ಕೈಜೋಡಿಸಿವೆ.

**ಕೋಷ್ಟಕ ೨.೧ ಪ್ರಾದೇಶಿಕವಾಗಿ ಸಿಂಧೋಳ್ಳುರಿಗೆ ಇರುವ ಅಥವಾ ಕರೆಯುವ ಹೆಸರುಗಳು**

| ಕ್ರ.ಸಂ. | ಜಿಲ್ಲೆಯ ಹೆಸರು | ಸಿಂಧೋಳ್ಳುರಿಗೆ ಇರುವ/ಕರೆಯುವ ಇತರೆ ಹೆಸರುಗಳು |
|---|---|---|
| ೦೧ | ಬಾಗಲಕೋಟೆ | ಬುರ್ರ ಬುರ್ರ ಪೋಚಮ್ಮ |
| ೦೨ | ಬಳ್ಳಾರಿ | ದುರುಗಮುರುಗಿ |
| ೦೩ | ಬೆಳಗಾವಿ | ಬುರ್ರಬುರ್ರಚಾ |
| ೦೪ | ಬೀದರ | ಪೋತ್ಯಾ, ಪೊತ್ರಾಜ್ |
| ೦೫ | ವಿಜಾಪುರ | ಉರಿಮಾರಿಯಾರ್ |
| ೦೬ | ಚಿಕ್ಕಮಗಳೂರು | ಬುರ್ರ ಬುರ್ರ ಪೋಚಮ್ಮ |
| ೦೭ | ಚಿತ್ರದುರ್ಗ | ಕೂಗಮ್ಮನ ಆಡಿಸುವರು |
| ೦೮ | ದಾವಣಗೆರೆ | ದುರುಗಮ್ಮನ ಆಡಿಸುವರು |
| ೦೯ | ಧಾರವಾಡ | ಉರಿಮಾರಿಯರ್, ಸುಂಕಲಮ್ಮನ ಆಡಿಸುವರು |

| | | |
|---|---|---|
| ೧೦ | ಗದಗ | ಬುಟ್ಟಿ ಕೂಗಮ್ಮನ ಆಡಿಸುವರು |
| ೧೧ | ಗುಲ್ಬರ್ಗಾ | ಪೋತರಾಜ, ಮರಗವ್ವನ ಆಡಿಸುವರು |
| ೧೨ | ಹಾಸನ | ಬೆಂಕಿ ಮಾರಿಯಾರ್ |
| ೧೩ | ಹಾವೇರಿ | ಸುಂಕಲಮ್ಮನ ಆಡಿಸುವರು |
| ೧೪ | ಕೊಪ್ಪಳ | ದುರುಗಮುರುಗಿ |
| ೧೫ | ಮಂಡ್ಯ | ಪೆಟ್ಟಿಗೆ ಪೋತರಾಜ |
| ೧೬ | ಮೈಸೂರು | ಬುರ್ರು ಮಾರಿಯಾರ್ |
| ೧೭ | ರಾಯಚೂರು | ದುರುಗಮುರುಗಿ |
| ೧೮ | ಶಿವಮೊಗ್ಗ | ಉರಿಮಾರಿಯಾರ್ |
| ೧೯ | ತುಮಕೂರು | ಕೂಗಮ್ಮನ ಆಡಿಸುವರು |
| ೨೦ | ಉತ್ತರ ಕನ್ನಡ | ಬುರ್ರ ಬುರ್ರಚಾ |

**ಸಿಂಧೋಳ್ಳು ಸಮುದಾಯದ ಪರ್ಯಾಯ ಪದಗಳ ವಿವರಣೆ**

**ದುರುಗ ಮುರುಗಿ :** ಸಿಂಧೋಳ್ಳುರನ್ನು ಮೊದಲು ದುರುಗಮುರುಗಿ ಎಂತಲೂ ಕರೆಯುತ್ತಿದ್ದರು. ಆದರೆ ಇತ್ತೀಚಿನ ದಿನಗಳಲ್ಲಿ ಸಿಂಧೋಳ್ಳುರು ಜಾಗೃತರಾಗಿ ತಮ್ಮನ್ನು ಸಿಂಧೋಳ್ಳುರೆಂದು ಹೇಳಿಕೊಳ್ಳುವುದುಂಟು. ದುರುಗಮುರುಗಿ ಎಂದರೆ ಸಿಂಧೋಳ್ಳುರು ಭಿಕ್ಷೆಗೆ ಹೋಗುವ ಸಂದರ್ಭದಲ್ಲಿ ಬುಟ್ಟಿಯಲ್ಲಿ ದುರುಗಮ್ಮ ಮತ್ತು ಮರಗವ್ವ ಮೂರ್ತಿಗಳನ್ನು ತೆಗೆದುಕೊಂಡು ಭಿಕ್ಷೆಬೇಡಲು ಹೋಗುತ್ತಿದ್ದರಂತೆ. ಅದು ಕಾಲ ಕ್ರಮೇಣ ಅಲ್ಲಿನ ಜನರು ದುರುಗ ಬಂದಳೇ.... ಮರಗಮ್ಮ ಮೂರ್ತಿ ತಂದಳೇ.... ಎಂದು ನಾಡಿನ ಜನರು ಕರೆದರಂತೆ ಅಂದಿನಿಂದ ಸಿಂಧೋಳ್ಳು ಸಮುದಾಯವನ್ನು ಮೊದಲು ದುರುಗಮುರಿಗಿ ಎಂಬ ಹೆಸರಿನಿಂದ ಕರೆಯುವುದು ರೂಢಿಗೆ ಬಂಧಿರಬಹುದು.

**ಬುರ್ರ ಬುರ್ರಚಾ :** ಪೋತರಾಜನು ಭಿಕ್ಷಾಟನೆಗೆ ಹೋದಾಗ ದೇವರ ಬುಟ್ಟಿಯ ಜೊತೆಯಲ್ಲಿ ಬುರ್ರ ಬುರ್ರ ವಾದ್ಯ ತೆಗೆದುಕೊಂಡು ಹೋಗುವುದುಂಟು. ನಾಡಿನ ಜನರು ಜಿರ್... ಜಿರ್.... ಬುರ್ರ್ ಎಂಬ ಶಬ್ದವನ್ನು ನೋಡಿ ಅಲ್ಲಿನ ಜನರು ಬುರ್ರ ಬುರ್ರಚಾ ಎಂದು ಕರೆದರಂತೆ.

**ಬುರ್ರ ಬುರ್ರ ಪೋಚಮ್ಮ :** ಗ್ರಾಮೀಣ ಭಾಗದಲ್ಲಿ ಪ್ಲೇಗ ಬಂದಾಗ, ಅದು ನಿರ್ಮೂಲನೆಯಾಗಲು ಪೋತರಾಜನು ಸದಾ ಸಿದ್ಧನಾಗಿರುತ್ತಾನೆ. ಈತನು ಭಿಕ್ಷೆಗೆ ಬಂದಾಗ ಪೋಚಮ್ಮನ ಮೂರ್ತಿ ತೆಗೆದುಕೊಂಡು ಬರುವುದುಂಟು. ಪ್ಲೇಗ್ ನಿರ್ಮೂಲನೆಗಾಗಿ

"ಹಾ ಹಾ ಹಾ ಹಾ
ಪೋಚಮ್ಮ ಬಂದಾಳ್ರೆ
ಕೂಗಮ್ಮ ಬಂದಾಳ್ರೆ
ನಿಮ್ಮ ಮನೆಗೆ ಕಂಟಕ ಬರದಿರ್ಲಿ"

ಎಂದು ಬುರ್ರಬುರ್ರ ವಾದ್ಯದೊಂದಿಗೆ ಚಾಟಿಯಿಂದ ತಮ್ಮ ಮೈಯಿಗೆ ದಂಡಿಸಿಕೊಳ್ಳುತ್ತಾನೆ. ಪ್ಲೇಗ್ ನಿರ್ಮೂಲನೆಗಾಗಿ ಅಲ್ಲಿ ಜನರು ಬುರ್ರ ಬುರ್ರ ಪೋಚಮ್ಮ ಬಂದರು ಎಂದು ಹೇಳುವುದುಂಟು.

**ಬುರ್ರ ಬುರ್ರ ಸುಂಕಲಮ್ಮ :** ಭಿಕ್ಷೆಗೆ ಹೋಗುವ ಮಹಿಳೆಯೂ ಬುಟ್ಟಿಯಲ್ಲಿ ಸುಂಕಲಮ್ಮ ಮೂರ್ತಿ ತೆಗೆದುಕೊಂಡು ಹೋಗುವುದುಂಟು. ಭಿಕ್ಷೆ ಕೊಡುವ ಜನರು 'ಬುರ್ರ ಬುರ್ರ ಸುಂಕಲಮ್ಮ ಬಂದಾಳ್ರೆ' ಎಂತಲೂ ಕರೆಯುತ್ತಾರೆ.

**ಕೂಗಮ್ಮನ ಆಡಿಸುವರು :** ಸಿಂಧೋಳ್ಳು ಸಮುದಾಯ ಬುಟ್ಟಿಯಲ್ಲಿ ಕೂಗಮ್ಮಮೂರ್ತಿ ತೆಗೆದುಕೊಂಡು ದಿನಾಲೂ ಭಿಕ್ಷಾಟನೆ ಮಾಡುವುದುಂಟು. ಸಮುದಾಯದ ಜನರು ಹಾಡಿನ ಮೂಲಕ ಹೆಚ್ಚಾಗಿ

"ಕೂಗಮ್ಮ ಬಂದಾಳ್ರೆ
ದುರುಗಮ್ಮ ಬಂದಾಳ್ರೆ
ಸುಂಕಲಮ್ಮ ಬಂದಾಳ್ರೆ"

ಎಂದು ಪಲ್ಲವಿಯೊಂದಿಗೆ ಇದನ್ನು ಗಮನಿಸಿ, ಈ ನಾಡಿನ ಜನರು ಸಿಂಧೋಳ್ಳು ಸಮುದಾಯವನ್ನು ಕೂಗಮ್ಮನ ಆಡಿಸುವರು ಎಂತಲೂ ಕರೆದರು.

**ಬುರ್ರ ಬುರ್ರ ಮಾರಿಯರ್ :** ಬುರ್ರ ಬುರ್ರ ಮಾರಿಯರ್ ಪದವನ್ನು ಹೆಚ್ಚಾಗಿ ಮೈಸೂರು ಪ್ರಾಂತ್ಯದಲ್ಲಿ ಕರೆಯುವುದುಂಟು. ಪೋತರಾಜನ ಮುಖವಾಡ ಧರಿಸಿಕೊಂಡು ಬುರ್ರ ಬುರ್ರ ನೃತ್ಯದೊಂದಿಗೆ ಕುಣಿಯುವ ಈತನ ವರ್ತನೆ ನೋಡಿ ಅಲ್ಲಿನ ಜನರು ಬುರ್ರ ಬುರ್ರ ಮಾರಿಯರ್ ಎಂದು ಕರೆದರಂತೆ.[೬]

**ಪೆಟ್ಟಿಗೆ ಪೂಜಾರಿ :** ಸಿಂಧೋಳ್ಳುರು ಮೊದಲು ಭಿಕ್ಷೆಗೆ ಹೋಗುವ ಸಂದರ್ಭದಲ್ಲಿ ೩ ಅಡಿ ದೇವರ ಮೂರ್ತಿಯ ಪೆಟ್ಟಿಗೆ ತೆಗೆದುಕೊಂಡು ಹೋಗುತ್ತಿದ್ದರಂತೆ. ಇಂದು ಭಾರವಾದ ದೇವರ ಪೆಟ್ಟಿಗೆ ತೆಗೆದುಕೊಂಡು ಹೋಗುವುದಿಲ್ಲವಂತೆ. ಪೆಟ್ಟಿಗೆ ತೆಗೆದುಕೊಂಡು ಹೋಗುತ್ತಿದ್ದ ಈ ಸಮುದಾಯವನ್ನು ನಾಡಿನ ಜನರು ಪೆಟ್ಟಿಗೆ ಪೂಜಾರಿ ಎಂತಲೂ ಕರೆದರಂತೆ.[೭] ಇವರು ಹೆಚ್ಚಾಗಿ ಬಳ್ಳಾರಿ ಜಿಲ್ಲೆಯಲ್ಲಿ ಕಂಡುಬರುತ್ತಾರೆ.

**ಉರಿಮಾರಿಯರ್ :** ಭಿಕ್ಷೆ ಬೇಡುವ ವ್ಯಕ್ತಿಗೆ 'ಉರಿ' ಎಂದು ಕರೆದರೆ, ಬುಟ್ಟಿಯಲ್ಲಿನ ಕುಲದೇವತೆಗಳನ್ನು 'ಮಾರಿ' ಎಂದು ಕರೆಯುತ್ತಾರೆ. ನಾಡಿನ ಜನರು ಎರಡು ಪದಗಳನ್ನು ಸೇರಿಸಿಕೊಂಡು 'ಉರಿಮಾರಿ' ಎನ್ನುವುದುಂಟು. ಪೋತರಾಜನು ನಿರಂತರವಾಗಿ ಉರಿ ಉರಿಯಾಗಿರುತ್ತಾನೆ. (ಕೋಪದಿಂದ ಇರುತ್ತಾನೆ) ಇವನ ಬುರ್ರ ಬುರ್ರ ನೃತ್ಯ, ಮುಂಗೈನಿಂದ ರಕ್ತ ಚಿಮ್ಮಿಸುವ ದೃಶ್ಯ ಮೊದಲಾದ ಅಂಶಗಳನ್ನು ಆಧರಿಸಿ ಶಿವಮೊಗ್ಗ ಜಿಲ್ಲೆಯ ಜನರು ಸಿಂಧೋಳ್ಳುರನ್ನು ಉರಿಮಾರಿ ಎಂದು ಕರೆಯುವುದುಂಟು.

ಈ ನಾಡಿನ ಜನರು ಧಾರ್ಮಿಕ ಭಿಕ್ಷಾಟನೆ, ಬುರ್ರಬುರ್ರ ನೃತ್ಯರೂಪ, ಕುಲದೇವರುಗಳ ಆರಾಧನೆ ಮತ್ತು ಪ್ರದರ್ಶನ ಕಲೆಯ ಹೆಸರುಗಳಿಂದ ಇವರನ್ನು ದುರುಗಮುರಗಿ, ಬುರ್ರ ಬುರ್ರಚಾ, ಸುಂಕಲಮ್ಮನ ಆಡಿಸುವರು, ಕೂಗಮ್ಮನ ಆಡಿಸುವರು ಇತ್ಯಾದಿ ಪದಗಳಿಂದ ಪರಿಚಯಿಸುತ್ತಿರುವುದು ಗಮನಾರ್ಹಸಂಗತಿ. ಇಲ್ಲಿನ ಜನರನ್ನು ಮೇಲಿನ ಪದಗಳಿಗೆ ಬದಲಾಗಿ 'ಸಿಂಧೋಳ್ಳು' ಎಂಬ ಹೆಸರಿನಿಂದ ಕರೆಯುವುದು ಹೆಚ್ಚು ಸೂಕ್ತ.

**ಇದುವರೆಗಿನ ಅಧ್ಯಯನಗಳು**

ಜಾನಪದ ವಿದ್ವಾಂಸರು ಸಿಂಧೋಳ್ಳು ಸಮುದಾಯದ ಬಗ್ಗೆ ಕಿರಲೇಖನಗಳನ್ನು ಪ್ರಕಟಿಸಿರುತ್ತಾರೆ. ಉದಾಹರಣೆ ಕೆಲವನ್ನು ಇಲ್ಲಿ ಗಮನಿಸಲಾಗಿದೆ.

**ಗೀತಾನಾಗಭೂಷಣ :** ಇವರು ಕನ್ನಡ ಸಾಹಿತ್ಯ ಅಕಾಡೆಮಿಯು ಪ್ರಕಟಿಸಿದ ಉಪ ಸಂಸ್ಕೃತಿ ಮಾಲೆಯಲ್ಲಿಯ 'ದುರುಗಮುರುಗಿ ಸಂಸ್ಕೃತಿ' ಎಂಬೀ ಕಿರು ಪುಸ್ತಕದಲ್ಲಿ ಸಿಂಧೋಳ್ಳು ಸಂಸ್ಕೃತಿಯ ಬಗ್ಗೆ ಚಿತ್ರಿಸಿದ್ದಾರೆ. ಸಿಂಧೋಳ್ಳರ ಬದುಕಿನ ಚಿತ್ರಣವನ್ನು ಕ್ಷೇತ್ರಕಾರ್ಯದ ಮೂಲಕ ವಿವರಿಸಿದ್ದಾರೆ. ಇವರು ದುರುಗಮುರಗಿಯರ ಮೂಲವನ್ನು ಕುರಿತು "ದುರುಗ ಮುರಗಿಯವರೆಂದರೆ ದುರ್ಗಮ್ಮ, ಮರಗಮ್ಮನ ಆರಾಧಕರು. ಇಲ್ಲಿ ದುರುಗ ಅಂದರೆ ದುರ್ಗಾದೇವಿ ಮತ್ತು ಮರಗಮ್ಮ ಎಂದರೆ ಪಾರ್ವತಿ ಎಂದು ಅರ್ಥೈಸಬಹುದು. ಆದರೆ ಅದು ಮೊದಲು ದುರುಗಮುರಗಿ ಎಂದಿದ್ದಿರಬೇಕು. ಮುಂದೆ 'ದು'ವಿನ ಪ್ರಕಾರ ಅದರ ಮೇಲಾಗಿ ಅದು ಕೂಡ 'ಮು'ಆಗಿ ಮುರಗಿ ಎಂದಾಗಿರಬೇಕೆಂಬ ಊಹೆ ಬರುವುದು" ಎಂದು ಇವರು ಅಭಿಪ್ರಾಯಪಡುತ್ತಾರೆ.[೬] ಇದರಿಂದ ಈ ಸಮುದಾಯವನ್ನು ಅಧ್ಯಯನ ಮಾಡಿದಾಗ ಸಿಂಧೋಳ್ಳು ಸಮುದಾಯದ ಬಗ್ಗೆ ಕೇವಲ ಮಾಹಿತಿ ಸಂಗ್ರಹಣೆಯನ್ನು ಮಾಡಿದ್ದು, ಈ ಸಮುದಾಯದ ಬದುಕಿನ ಚಿತ್ರಣವನ್ನು ಮಾತ್ರ ಗಮನಿಸಲಾಗಿದ್ದು ಈ ಮಾಲೆಯಲ್ಲಿ ಸಂಪೂರ್ಣವಾಗಿ ದುರುಗಮುರಗಿ ಯವರ ಮೂಲ ನೆಲೆಯ ಬಗ್ಗೆ ಖಚಿತವಾಗಿ ತಿಳಿಸಿರುವುದಿಲ್ಲ. ಇವರ ಸಾಮಾಜಿಕ ಬದುಕಿನ ಬಗ್ಗೆ ಮಾಹಿತಿಯನ್ನು ನೀಡುವಲ್ಲಿ ಸಫಲರಾಗಿದ್ದಾರೆಯೇ ಹೊರತು ಅವರ ಸಾಮಾಜಿಕ ಬದುಕಿನ ಬಗ್ಗೆ ಎಲ್ಲಿಯೂ ಪ್ರಶ್ನೆ ಮಾಡಿಲ್ಲ. ಭಿಕ್ಷಾಟನೆ ಇವರ ಮೂಲ ವೃತ್ತಿಯಾಗಿದೆ ಎಂದು ಚಿತ್ರಣವನ್ನು ನೀಡುತ್ತಾರೆ. ಆದರೆ ಈ ಸಮುದಾಯದ ಭಿಕ್ಷಾಟನೆಯನ್ನೇ ತಮ್ಮ ವೃತ್ತಿಯನ್ನಾಗಿ ಏಕೆ ಮಾಡಿಕೊಂಡಿದ್ದಾರೆ? ಮತ್ತು ಅದನ್ನು ಏಕೆ ಮುಂದುವರೆಸಿಕೊಂಡು ಬಂದಿದ್ದಾರೆ? ಎಂಬುದರ ಬಗ್ಗೆ ಗಮನಹರಿಸದಿರುವುದು ಕಂಡುಬರುತ್ತದೆ.

**ಚಂದ್ರಶೇಖರ ಕಂಬಾರ :** ಇವರ ಪ್ರಕಾರ "ಮಹಾಭಾರತದಲ್ಲಿ ದೇವಿಯ ಬಗೆಗೆ ಅನೇಕ ಉಲ್ಲೇಖಗಳಿವೆ. ಪಾಂಡವರು ತಮ್ಮ ಅಜ್ಞಾತವಾಸದ ಸಮಯದಲ್ಲಿ ವೀರಾಟನ ರಾಜಧಾನಿಗೆ ಬಂದಾಗ, ದುರ್ಗೆಯನ್ನು ಪೂಜಿಸಿದರು. ದುರ್ಗೆ ಪ್ರತ್ಯಕ್ಷಳಾಗಿ ವರಗಳನ್ನು ಕೊಟ್ಟಳು. ಮಹಾಭಾರತದಲ್ಲಿ ಕೃಷ್ಣನ ಸೂಚನೆಯ ಮೇರೆಗೆ ಅರ್ಜುನ ದುರ್ಗೆಯನ್ನು ಪ್ರಾರ್ಥಿಸಿದಾಗ ಆಕಾಶದಲ್ಲಿ ದುರ್ಗೆಯು ಪ್ರತ್ಯಕ್ಷಳಾಗಿ ಯುದ್ಧದಲ್ಲಿ ಜಯ ಲಭಿಸುವಂತೆ ವರಗಳನ್ನು ನೀಡಿದಳು. ದೇವಿಯ ಈ ಹಿನ್ನೆಲೆಯಿಂದ ಪೂಜಾರಿ ಚಾಟಿಯಿಂದ ತನ್ನ ದೇಹ ದಂಡಿಸಕೊಳ್ಳುತ್ತಾ, ದೇವಿಯನ್ನು ಆರಾಧಿಸುವುದು ರೂಢಿಗೆ ಬಂದಿರಬಹುದು. ಚಾಟಿಯಿಂದ ಹೊಡೆದುಕೊಳ್ಳುವುದು ಮಾತ್ರವಲ್ಲ ಮುಂಗೈಯನ್ನು ಚೂಪಾದ ಕತ್ತಿಯಿಂದ ಕೊಯ್ದುಕೊಂಡು ರಕ್ತ ಚಿಮ್ಮಿಸುವುದರಿಂದ ದೇವಿ ತೃಪ್ತಿಯಾಗುತ್ತಾಳೆ ಎಂಬ ಸಂಗತಿಯನ್ನು ದಾಖಲಿಸುತ್ತಾರೆ.[೭] ದುರುಗಮುರಗಿ ಯವರ ಬಗ್ಗೆ ಪ್ರಸ್ತಾಪಿಸಿ ತಿಳಿಸುವುದೆನೆಂದರೆ ಶ್ರೀಕೃಷ್ಣನ ಸಲಹೆಯಂತೆ ದುರ್ಗೆಯನ್ನು ಅರ್ಜುನನು ಪೂಜಿಸಿದನೆಂದು ಅದಕ್ಕೆ ದೇವಿಯು ಪ್ರತ್ಯೆಕ್ಷಳಾಗಿ ವರನೀಡಿದ್ದಾಗಿ, ಇದರಿಂದ ಪೂಜಾರಿಯು ತಾನು ದೇವಿಯ ದರ್ಶನ ಪಡೆದು ವರಬೇಡಲು ಮುಂದಾದಾಗ ಅವನು ದೇಹದಂಡನೆ ಹಿಂಸೆಯ ಹಾದಿಯನ್ನು ಆಯ್ದುಕೊಂಡು ದೇವಿಯ ಪ್ರತ್ಯಕ್ಷವನ್ನು ಮತ್ತು ದುರ್ಗೆಯ ಆರಾಧಿಸುವ ಮಾರ್ಗವನ್ನು ಅನುಸರಿಸರ

ಬಹುದು ಎಂಬುದಾಗಿ ಹೇಳುವುದರಿಂದ ಜೀವಂತ ಸಮುದಾಯದ ಮೂಲವನ್ನು ತಿಳಿಸಿಕೊಡುವಲ್ಲಿ ವಿಫಲವಾಗಿದೆ. ಹಾಗೂ ಅವರ ಹಿನ್ನೆಲೆಯ ಕುರಿತು ಸ್ಪಷ್ಟವಾದ ಆಧಾರಗಳನ್ನು ನೀಡದಿರುವುದು ಕಾಣಬರುತ್ತದೆ.

**ಚನ್ನಣ್ಣವಾಲೀಕಾರ :** 'ದುರುಗ ಮುರಗಿ' ಲೇಖನದಲ್ಲಿ ದುರುಗ ಮುರಗಿ ಬಗ್ಗೆ ಪ್ರಸ್ತಾಪಿಸಿ ಅವರ "ಆಚಾರ-ವಿಚಾರ, ಆಹಾರ-ವಿಹಾರ, ರೂಢಿ-ಸಂಪ್ರದಾಯದ ಇರುವಿಕೆಯನ್ನು ನೋಡಿದರೆ ಅವರು ಭಿಲ್ಲ, ಗೊಂಡ ಜಾತಿಯಿಂದ ಬಂದ ದ್ರಾವಿಡ ಜನಾಂಗಕ್ಕೆ ಸೇರಿದವರಿರಬೇಕೆಂದು ಎನ್ನಿಸುವುದು. ಹಾಗೂ ಇವರು ಶಕ್ತಿ ಪೂಜಕರಾದ ದ್ರಾವಿಡರ ಗುಂಪಿಗೆ ದುರುಗ ಮುರಗಿಯವರು ಸೇರುವುದರಿಂದ ಇವರು ದಕ್ಷಿಣದವರೇ ಆಗಿರಬೇಕು ಎಂಬುದು ಇವರ ಅಭಿಪ್ರಾಯವಾಗಿದೆ".[೧೦]

ದುರುಗ ಮುರಗಿಯವರು ಗೊಂಡರ ಮೂಲದಿಂದ ಬಂದವರು ಮತ್ತು ಅವರ ಆಚಾರ-ವಿಚಾರಗಳನ್ನು ಗೊಂಡರಲ್ಲಿಯೂ ಕಾಣಬಹುದಾಗಿದೆ ಎಂದಿದ್ದಾರೆ. ಆದರೆ ಗೊಂಡರಂತೆ ದುರುಗ ಮುರಗಿಯವರು ಆಂಧ್ರಪ್ರದೇಶದಲ್ಲಿ ವಾಸಿಸುತ್ತಿರಬಹುದಾದರು ಅವರಿಗೆ ಮತ್ತು ಇವರಿಗೂ ಯಾವುದೇ ತರಹದ ವೈವಾಹಿಕ ಸಂಬಂಧವಾಗಿರುವುದು ಕಾಣಬರುವುದಿಲ್ಲ. ಗೊಂಡರು 'ಗೊಂಡಿ' ಭಾಷೆಯನ್ನು ಮಾತನಾಡಿದರೆ, ದುರುಗಮುರಗಿಯವರು 'ತೆಲುಗು' ಭಾಷೆಯನ್ನು ಮಾತನಾಡುತ್ತಾರೆ.

**ಕೆ ಆರ್ ದುರ್ಗಾದಾಸ್ :** "ದೇವಿಯನ್ನು ಹೊತ್ತು ತಿರುಗುತ್ತಾ, ದೇವಿಯ ಮಹಿಮೆ ಗುಣಗಾನ ಮಾಡುತ್ತಾ ಆಟವಾಡುತ್ತ ಅಲೆಯುವ ದುರುಗ ಮುರಗಿಯರು ಅಲೆಮಾರಿ ಜನಾಂಗದವರಾಗಿದ್ದಾರೆ. ಮೂಲತಃ ಆಂಧ್ರದವರೆಂದು ಹೇಳಿಕೊಳ್ಳುವ ಇವರು ಬಹಳ ಹಿಂದೆಯೇ ಕರ್ನಾಟಕದಲ್ಲಿ ವಲಸೆ ಬಂದರಂತೆ".[೧೧]

ದುರುಗ ಮುರಗಿಯವರು ಮೂಲತಃ ಆಂಧ್ರದವರೇ ಆಗಿದ್ದಾರೆಂದು ಮಾಹಿತಿದಾರರು ಕ್ಷೇತ್ರಕಾರ್ಯದಲ್ಲಿ ಹೇಳುವುದರಿಂದ, ಇವರ ವಲಸೆಯಬಗ್ಗೆ ವಿಚಾರಿಸಿದಾಗ ಹೊಟ್ಟೆಪಾಡಿಗೆ ಹಾಗೂ ಅವರು ಕರ್ನಾಟಕಕ್ಕೆ ಆಗಮಿಸಿದವರಾಗಿದ್ದೆವೆ ಎಂದು ಹೇಳುತ್ತಾರೆ.

**ಅರ್ಜುನ ಗೋಳಸಂಗಿ :** ಉತ್ತರ ಕರ್ನಾಟಕದ ಬಹುತೇಕ ಅಲೆಮಾರಿ ವೃಂದದ ಮನೆಮಾತು ತೆಲುಗು ಆಗಿರುವುದು ಕಂಡು ಬರುತ್ತದೆ. ಉದಾ ಹರಣೆಗೆ ವಡ್ಡರು, ಹೆಳವರು, ದುರುಗಮುರಗಿ, ಕೊಂಡಮಾಮಗಳು ಇತ್ಯಾದಿ. ಮೂಲತಃ ಈ ಗುಂಪಿನವರು ಆಂಧ್ರಪ್ರದೇಶದಿಂದ ಕರ್ನಾಟಕದ ಅನೇಕ ಭಾಗಗಳಲ್ಲಿ ವೃತ್ತಿಗಾಗಿ ಆಗಾಗ ಬಂದು ಹೋಗುತ್ತಿದ್ದರು. ಕಾಲಾಂತರದಲ್ಲಿ ಇವರುಗಳು ತಮ್ಮ ಅನುಕೂಲಕ್ಕಾಗಿ ಕರ್ನಾಟಕದ ವಿವಿಧ ಕಡೆಗಳಲ್ಲಿ ನೆಲೆನಿಂತಂತೆ ತೋರುತ್ತದೆ.[೧೨]

ಇಲ್ಲಿನ ಅನೇಕ ಜಾನಪದ ವಿದ್ವಾಂಸರು ದುರುಗಮುರಗಿ, ಬುರ್ರಬುರ್ರಚಾ, ಸುಂಕಲಮ್ಮ, ಕೂಗಮ್ಮನ ಆಡಿಸುವರು ಇತ್ಯಾದಿ ನಾಮ, ಕುಲದೇವರ ಧಾರ್ಮಿಕ ಭಿಕ್ಷಾಟನೆ, ಆಚರಣೆಯ ಬಗೆಗೆ ಕಿರುಲೇಖನಗಳು ರಚಿಸಿದ್ದಾರೆ. ಆದರೆ ಈ ಸಮುದಾಯದ ತೀದ ನಿಲುವುಗಳ ಬಗೆಗೆ ಗಮನಹರಿಸಲು ಸಾಧ್ಯವಾಗಿಲ್ಲ. ಆದಕಾರಣ ಇವರುಗಳು ರಚಿಸಿರುವ ಕಿರುಲೇಖನಗಳು ಈ ಸಮುದಾಯವನ್ನು ಗುರುತಿಸಲು ಸಹಕಾರಿ ಆಗಿದೆ. ಇದುವರೆಗಿನ ಅಧ್ಯಯನಗಳ ದೃಷ್ಟಿಕೋನದಲ್ಲಿ ಈ ಬರೆಹಗಳನ್ನು ತಾತ್ವಿಕ ಚಿಂತನೆಗಳೆಂದು ಪರಿಗಣಿಸಬೇಕಾಗಿದೆ. ಇವು ಹೊಸ ಸಂಶೋಧನೆಗೆ ಮಾರ್ಗ ಸೂಚಿಯಾಗಬಲ್ಲವು.

**ಮಾಹಿತಿದಾರರ ಅನಿಸಿಕೆ :** ಕರ್ನಾಟಕದ ಸಿಂಧೋಳ್ಳು ಸಮುದಾಯವನ್ನು ಇಲ್ಲಿನ ಜನರು ಸಿಂಧೋಳ್ಳುರು ಎಂದು ಕರೆಯದೆ, ಸಿಂಧೋಳ್ಳುರ ವೃತ್ತಿಗಳಿನುಗುಣವಾಗಿ ಕರೆಯುತ್ತಿದ್ದರು. ಮತ್ತು ಆಯಾ ಪ್ರಾಂತ್ಯಗಳಲ್ಲಿ ಸಿಂಧೋಳ್ಳುರ ಕಸುಬುಗಳ ಆಧಾರದ ಮೇಲೆ ಅವರನ್ನು ದುರುಗಮುರುಗಿಯರು, ಬುರ್ರ ಬುರ್ರ ಪೋಚಮ್ಮ, ಬುರ್ರ ಬುರ್ರಚ್ಚ, ಸುಂಕಲಮ್ಮನ ಆಡಿಸುವರು. ಕೂಗಮ್ಮನ ಆಡಿಸುವರು, ಪೋತರಾಜ, ಬುರ್ರಮಾರಿಯರು, ಉರಿಮಾರಿಯರು ಮತ್ತು ಪೆಟ್ಟಿಗೆ ಆಡಿಸುವರು ಹೀಗೆ ಹತ್ತಾರು ಹೆಸರುಗಳಿಂದ ಕರೆಯುವುದುಂಟು. ಇಲ್ಲಿನ ವಕ್ತೃಗಳು ನಾವು 'ದುರುಗ ಮುರುಗಿ'ಯರು ಅಲ್ಲ, ಆಂಧ್ರ ಮೂಲದ ಸಿಂಧೋಳ್ಳುರೆಂದು ಹೇಳಿಕೊಳ್ಳುತ್ತಾರೆ.[೧೩] ಹಾಗೂ ಕರ್ನಾಟಕದ ಸಿಂಧೋಳ್ಳುರ ಮತ್ತು ಆಂಧ್ರದ ಸಿಂದ್‌ಮಾದಿಗರು ಒಂದೇ ರೂಪ ಮತ್ತು ಚಹರೆಗಳನ್ನೊಳಗೊಂಡಿದ್ದಾರೆ. ಹೀಗಾಗಿ ಒಂದು ಕಾಲದಲ್ಲಿ 'ಸಿಂದ್‌ಮಾದಿಗರ' ಗುಂಪು ಕರ್ನಾಟಕದಲ್ಲಿ ವಲಸೆ ಬಂದಿರಬಹುದು. ಆಂಧ್ರ ಪ್ರದೇಶದಲ್ಲಿ ಉನ್ನತ ಸಮುದಾಯಗಳಿಂದ ಅನೇಕ ಸಮಸ್ಯೆಗಳನ್ನು ಅನುಭವಿಸಿ ಕಿರುಕುಳ ತಾಳಲಾರದೆ ಕರ್ನಾಟಕದ ಬಳ್ಳಾರಿ ಜಿಲ್ಲೆಯ 'ಕಂಪ್ಲಿ'ಗೆ ಬಂದು ನೆಲೆಗೊಂಡಿರುವುದರ ಬಗೆಗೆ ಪ್ರತೀತಿ ಇದೆ. ಹಾಗೂ ಅಲ್ಲಿನ ಜನರು ವಲಸೆಯ ಮೂಲಕ ಕರ್ನಾಟಕದ ಗಡಿಭಾಗಗಳಾದ ಚಿಂಚೋಳಿ, ಸೇಡಮ್, ಯರಗೇರಾ, ತೆಕ್ಕಲಕೋಟೆ, ಮೊಳಕಾಲ್ಮೂರು, ಪಾವಗಡ, ರಾಯಲಪಾಡು, ಆನೇಕಲ್ ಇತ್ಯಾದಿ ಪ್ರದೇಶಗಳಲ್ಲಿ ಭಿಕ್ಷಾಟನೆಗಾಗಿ ಪ್ರವಾಸ ಮಾಡಿ, ಅಂತಿಮವಾಗಿ ಕರ್ನಾಟಕದಲ್ಲಿಯೇ ವಾಸಿಸಲು ತೊಡಗಿದರು.

**ಸಂಘಟನೆಯ ಮನವಿ**

ದಿನಾಂಕ ೧೫ ಮಾರ್ಚ್ ೨೦೦೫ರಂದು "ಸಿಂಧೋಳ್ಳು ಸಮಾಜ ಕಲ್ಯಾಣ ಸಂಘ"ವನ್ನು ಸ್ಥಾಪಿಸಲಾಗಿದ್ದು ಶ್ರೀನಾಗಪ್ಪನವರು ಈ ಸಂಘದ ಅಧ್ಯಕ್ಷರಾಗಿದ್ದಾರೆ. ಸಂಘದ ಪದಾಧಿಕಾರಿಗಳು ಕರ್ನಾಟಕದಾದ್ಯಂತ ಸಿಂಧೋಳ್ಳು ಸಮುದಾಯದ ಬಗೆಗೆ ಮಾಹಿತಿಯನ್ನು ತೆಗೆದುಕೊಂಡು ಇನ್ನು ಮುಂದೆ ನಮ್ಮ ಸಮುದಾಯವನ್ನು ದುರುಗಮುರುಗಿ, ಬುರ್ರ ಬುರ್ರಚಾ, ಕೂಗಮ್ಮ ಆಡಿಸುವರು, ಸುಂಕಲಮ್ಮನ ಆಡಿಸುವರು ಮತ್ತು ಪೋತರಾಜ ಎಂಬ ಇತ್ಯಾದಿ ಹೆಸರಗಳಿಂದ ಕರೆಯದೆ "ಸಿಂಧೋಳ್ಳುರು" ಎಂದು ಕರೆಯಬೇಕೆಂದು ಮನವಿ ಮಾಡಿಕೊಂಡಿದ್ದಾರೆ.[೧೪]

**ಪರಿಶಿಷ್ಟ ಜಾತಿ ಪ್ರಮಾಣ ಪತ್ರ ನೀಡಿಕೆ**

ಬಳ್ಳಾರಿ ಜಿಲ್ಲೆಯ ಬಳ್ಳಾರಿ ತಾಲ್ಲೂಕು ಕಾರ್ಯಾಲಯದಲ್ಲಿ ಸಿಂಧೋಳ್ಳು ಸಮುದಾಯ ಪ್ರಮುಖ ಗಣ್ಯ ವ್ಯಕ್ತಿಯಾದ ಶ್ರೀ ಸಿಂಗಾರಪ್ಪನವರಿಗೆ ಪರಿಶಿಷ್ಟ ಜಾತಿ ಪ್ರಮಾಣ ಪತ್ರ ನೀಡಲಾಗಿದೆ (ಅನುಬಂಧ:೧). ಅಲ್ಲಿಂದಾಚೆಗೆ ಸಿಂಧೋಳ್ಳು ಸಮುದಾಯಕ್ಕೆ ಉಸಿರು ಬಂದದಂತಾಗಿದೆ. ಸಮುದಾಯ ಜನರು ನಾವು ಭಿಕ್ಷೆಗೆ ಹೋಗುವ ಸಂದರ್ಭದಲ್ಲಿ ನಮ್ಮನ್ನು ಅನೇಕ ಹೆಸರುಗಳಿಂದ ಕರೆಯುತ್ತಾರೆ. ಅದು ತಪ್ಪೇನಿಲ್ಲಾ ನಮ್ಮ ವೃತ್ತಿಗಳ ಆಧಾರದ ಮೇಲೆ ದುರುಗಮ್ಮನ ಆಡಿಸುವರು, ಮಾರಮ್ಮನ ಆಡಿಸುವರು ಎಂದು ಕರೆಯುತ್ತಾರೆ. ದುರುಗ ಮುರುಗಿ ಎಂಬುದು ನಮ್ಮ ಸಮುದಾಯಕ್ಕೆ ಬಂದಿರುವ ಕಳಂಕಿತ ಪದ ಎನ್ನುತ್ತಾರೆ.[೧೫]

**ದಿನ ಪತ್ರಿಕೆಯಲ್ಲಿ ಪ್ರಕಟಣೆ**

'ಜನಪದ' ಜುಲೈ ೨೦೦೪ರ ದಿನಪತ್ರಿಕೆಯಲ್ಲಿ 'ಸಿಂಧೋಳ್ಳು ಜನಾಂಗ ಬವಣೆ' ಡಬ್ಲ್ಯೂ.

ಬಸವರಾಜ್, ಕಂಪ್ಲಿಯವರು ಕಿರುಲೇಖನವನ್ನು ಪ್ರಕಟಿಸಿದ್ದಾರೆ. ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ತಾಲ್ಲೂಕಿನ ಕಂಪ್ಲಿ ಪಟ್ಟಣದ ಎಂ.ಡಿ.ಕ್ಯಾಂಪಿನಲ್ಲಿ ಗುಡಾರ ಹಾಕಿಕೊಂಡಿರುವ ಸಿಂಧೋಳ್ಳು ಜನಾಂಗದವರ ಮುಖಂಡರಾದ ರಾವಲ್ ನಾಗಪ್ಪ ಮತ್ತು ಚಿನ್ನೆಯಲ್ಲಪ್ಪನವರನ್ನು ಮಾತನಾಡಿಸಿದಾಗ "ಸ್ವಾಮಿ ನಮಗೆ ಭಿಕ್ಷೆ ಒಂದೇ ದಾರಿ ಐತಿ. ಜನ್ರು ನಮಗೆ ರೊಕ್ಕ ಕೊಡಂಗಿಲ್ಲ ರ್‍ರೀ, ನಾವೇ ಕಾಡಿ ಬೇಡಿ ರೊಕ್ಕ ಇಸಕಂತೀವಿ ದಿನಾ ನಮ್ಮ ಹೊಟ್ಟೆ ತುಂಬೊದು ಕಷ್ಟ ಆಗೈತಿ ಮನೇಲಿ ಮಕ್ಕಳಮರಿ, ಒಪ್ಪತ್ತಿನ ಗಂಜಿಗೆ ಊರೂರು ಅಲಿಯಬೇಕು ಸರ್ಕಾರ ನಮ್ಮನ್ನು ಕಣ್ ತೆಗೆದು ಇನ್ನು ನೋಡಿಲ್ಲ ರ್‍ರೀ".[೧೯] ಎಂದು ತಮ್ಮ ಬವಣೆಯನ್ನು ತೋಡಿಕೊಳ್ಳುತ್ತಾರೆ (ಅನುಬಂಧ:೨).

**ಶೋಧನೆಯ ಅಂಶಗಳು**

ಕರ್ನಾಟಕದ ಸಿಂಧೋಳ್ಳುರು ಮತ್ತು ಆಂಧ್ರದ ಸಿಂಗ್‌ಮಾದಿಗರ ವ್ಯತ್ಯಾಸಗಳು ಈ ರೀತಿ ಕಂಡುಬರುತ್ತವೆ.

**ಕರ್ನಾಟಕದ ಸಿಂಧೋಳ್ಳುರು**

೧. ಈಚಲ ಮರ ಮನೆ ದೇವರು, ಆದಕಾರಣ 'ಇಚಲದ್ಯಾವ್ರ' ಎಂದು ಇಂದಿಗೂ ಕರೆಯುತ್ತಾರೆ. ಇಚಲಮರದ ರಸ ಇವರಿಗೆ ಬಹಳ ಪ್ರಿಯಾವಾದುದರಿಂದ 'ಸಿಂದಿರಸ' ಅಥವಾ 'ನೀರಾ'ವನ್ನು ಮಡಿಕೆಯಲ್ಲಿಟ್ಟು, ಪೂಜೆ ಮಾಡುತ್ತಾರೆ. ಅನಾದಿಕಾಲದಲ್ಲಿ ನಮ್ಮ ಹಿರಿಯರು ಈಚಲಮರದ ಕೆಳಗೆ ವಾಸಿಸುತ್ತಿದ್ದರಂತೆ ಆ ಕಾರಣಕ್ಕಾಗಿ ಈ ಪದ್ಧತಿ ನಮ್ಮಲ್ಲಿ ಸಂಸ್ಕೃತಿಯ ಅಂಗವಾಗಿ ಬೆಳೆದುಬಂದಿದೆ ಎಂದು ಕಂಪ್ಲಿಯ ನಾಗಪ್ಪನವರು ಅಭಿಪ್ರಾಯಪಡುತ್ತಾರೆ.

೨. ಸಿಂಧೋಳ್ಳುರ ಮಾತೃ ಭಾಷೆ ತೆಲುಗು.

೩. ಮುನಿಸ್ವಾಮಿ, ಈರನಾಗಮ್ಮ, ಪೋತರಾಜ ಸಿಂಧೋಳ್ಳು ಸಮುದಾಯದ ದೇವರಗಳು ಮತ್ತು ಸಾಂಸ್ಕೃತಿಕ ಮೂಲ ಪುರುಷರಾಗಿ ಕಂಡುಬರುತ್ತಾರೆ.

೪. ಕುಲದೇವತೆಗಳಾದ ದುರುಗಮ್ಮ ಮಾರಮ್ಮ, ಕೂಗಮ್ಮ, ಜಂಬಲಮ್ಮ ಇತ್ಯಾದಿ ಮೂರ್ತಿಗಳನ್ನು ಪೆಟ್ಟಿಗೆಯಲ್ಲಿ ಹಾಕಿಕೊಂಡು, ಭಿಕ್ಷೆಗೆ ಹೋಗುತ್ತಾರೆ. ಪೋತರಾಜನ ಕೈಯಲ್ಲಿ ಲಡ್ಡು ಹಿಡಿದಿರುತ್ತಾನೆ. ಹೆಂಡತಿಯ ಕೊರಳಿನಲ್ಲಿ ಬುರ್ರ ಬುರ್ರವಾದ್ಯ ಇರುತ್ತದೆ.

೫. ಎಲ್ಲಾ ಸಮುದಾಯಗಳಿಗೆ ಆಶ್ರಯಿಸಿದ ಭಿಕ್ಷುಕ ಜಾನಪದ ಗಾಯಕರಾಗಿರುವುದರಿಂದ ಇವರನ್ನು ದುರುಗಮ್ಮ ಆಡಿಸುವರು, ಮಾರಮ್ಮ ಆಡಿಸುವರು, ಕೂಗಮ್ಮ ಆಡಿಸುವರೆಂಬ ವಿಶೇಷ ಖ್ಯಾತಿಗೆ ಪಾತ್ರರಾಗಿದ್ದಾರೆ.

೬. ಭಿಕ್ಷೆಗೆ ಹೋಗುವಾಗ ಪೋತರಾಜನು ತಮ್ಮ ಮುಖಕ್ಕೆ ಕುಂಕುಮ, ಸೊಂಟಕ್ಕೆ ಬೇವಿನ ಸೊಪ್ಪು, ಕಾಲಿಗೆ ಗೆಜ್ಜೆ ಹಾಕಿಕೊಂಡು ಕೈಯಲ್ಲಿ, ಕತ್ತಾಳೆ ನಾರಿನ ಲಡ್ಡು ಹಿಡಿದಿರುತ್ತಾನೆ.

**ಆಂಧ್ರದ ಸಿಂದ್‌ಮಾದಿಗರು**

೧. ತಂಗಡಿ ಗಿಡ ಇವರ ಮನೆ ದೇವರು, ಆದಕಾರಣ ತಂಗಡಿ ದ್ಯಾವ್ರ ಎಂದು ಕರೆಯುತ್ತಾರೆ. ಮದುವೆ ಕಾರ್ಯಕ್ರಮಗಳಲ್ಲಿ ತಂಗಡಿ ದ್ಯಾವ್ರ ಹತ್ತಿರ ಗೆಜ್ಜೆ ಕುಣಿತದಿಂದ ಚಿಂದು ಕುಣಿಯುವುದು.

೨. ಸಿಂದ್ ಮಾದಿಗರ ಮಾತೃಭಾಷೆ ತೆಲುಗು.

೩. ಆದಿಜಾಂಬವ ಮುನಿ, ಮಾತಂಗ ಸಿಂದ್‌ಮಾದಿಗರ ಸಾಂಸ್ಕೃತಿಕ ಮೂಲ ಪುರುಷ.

೪. ಕುಲದೇವತೆಯಾದ 'ಅಂಕಮ್ಮ' ಮೂರ್ತಿಯನ್ನು ಪೆಟ್ಟಿಗೆಯಲ್ಲಿ ಇಟ್ಟುಕೊಂಡು ಭಿಕ್ಷೆ ಬೇಡಲು ಹೋಗುತ್ತಾರೆ. ಇವರ ಕೈಯಲ್ಲಿ ಮದ್ದಳೆ, ಹಾರ್ಮೋನಿಯಂ, ತಾಳ, ಹಲಗೆ ಇರುವುದು ಕಂಡುಬರುತ್ತದೆ.

೫. ಮಾದಿಗ ಸಮುದಾಯವನ್ನು ಆಶ್ರಯಿಸಿದ ಭಿಕ್ಷುಕ ಜಾನಪದ ಗಾಯಕರು ಇವರಾಗಿರುವುದರಿಂದ 'ಚಿಂದು ಭಾಗವತ'ರೆಂಬ ವಿಶೇಷ ಖ್ಯಾತಿಗೆ ಪಾತ್ರರಾಗಿದ್ದಾರೆ.

೬. ಭಿಕ್ಷೆಗೆ ಹೋಗುವಾಗ ಪೂಜಾರಿ ತನ್ನ ಮುಖಕ್ಕೆ, ಮೈ, ಕೈಗಳಿಗೆ ಬಣ್ಣ ಬಳಿದುಕೊಂಡು, ಕೈಯಲ್ಲಿ 'ಕೊಂಗುವಾಲ ಕತ್ತಿ' ಹಿಡಿದು ಚಿಂದು ನಾಟ್ಯವನ್ನು ಕುಣಿಯುತ್ತಾನೆ.

ಈ ಮೇಲಿನ ಅಂಶಗಳಿಂದ ಕರ್ನಾಟಕದ ಸಿಂಧೋಳ್ಳುರು ಮತ್ತು ಆಂಧ್ರದ ಸಿಂದ್‌ಮಾದಿಗರೂ ಶೈವ ಪದ್ಧತಿಗಳನ್ನು ಅನುಸರಿಸುತ್ತಾ ಬಂದಿದ್ದಾರೆ. ಅವರು ನಂಬಿದ ದೇವರಗಳನ್ನು ಬಿಡುವುದಿಲ್ಲ. ಇವರ ಹಿರಿಯರ ಆರಾಧನೆ ಮತ್ತು ಮಾರ್ಗದರ್ಶನದಿಂದ ಆಚರಣೆಗಳನ್ನು ಮಾಡಿಕೊಳ್ಳುತ್ತಾ ಬಂದಿದ್ದಾರೆ. ಅದಕ್ಕಿಂತ ಹೆಚ್ಚಾಗಿ ಸಿಂಧೋಳ್ಳುರ ಮತ್ತು ಸಿಂದ್‌ಮಾದಿಗರಲ್ಲಿ ಒಂದು ಭಿನ್ನತೆ ಕಂಡುಬಂದರೂ, ಅಂಕಮ್ಮ, ಮಾರಮ್ಮ, ದುರುಗಮ್ಮ ಮತ್ತು ಜಂಬಲಮ್ಮಗಳನ್ನು ಆರಾಧಿಸುತ್ತಾರೆ. ಆಂಧ್ರಪ್ರದೇಶದಲ್ಲಿ ಮಾರಮ್ಮ, ದುರುಗಮ್ಮ, ಸವಾರೆಮ್ಮ ಮುಂತಾದ ಶಕ್ತಿ ದೇವತೆಗಳನ್ನು ಆರಾಧನೆ ಕೂಡಾ ಮಾಡುತ್ತಿದ್ದಾರೆ. ಹೀಗಾಗಿ ಸಿಂಧೋಳ್ಳು ಮತ್ತು ಸಿಂದ್‌ಮಾದಿಗರ ಆಚರಣಾ ಪದ್ಧತಿಗಳಲ್ಲಿ ಸಾಮ್ಯತೆಗಳು ಇರುವುದು ಗೋಚರವಾಗುತ್ತದೆ. ಈ ಅಂಶಗಳ ಆಧಾರದ ಮೇಲೆ ಸಿಂದ್ ಮಾದಿಗರ ಒಂದು ಗುಂಪು ಕರ್ನಾಟಕಕ್ಕೆ ವಲಸೆ ಬಂದಿರುವ ಸಾಧ್ಯತೆಗಳಿವೆ ಎಂದು ಹೇಳಬಹುದು. ಆಂಧ್ರಪ್ರದೇಶದಲ್ಲಿ ರೆಡ್ಡಿ ಸಮುದಾಯದವರು ಸಿಂಧೋಳ್ಳು ಸಮುದಾಯಕ್ಕೆ ಕಿರುಕುಳ ನೀಡತೊಡಗಿದ್ದು ಈ ಸಮುದಾಯವು ಕಿರುಕುಳ ತಾಳಲಾರದೆ ಕರ್ನಾಟಕದ ಬಳ್ಳಾರಿ ಜಿಲ್ಲೆಯ 'ಕಂಪ್ಲಿ'ಗೆ ಬಂದು ನೆಲೆಸಿರಬಹುದು. ಹಾಗೆಯೇ ಆಂಧ್ರಪ್ರದೇಶದಲ್ಲಿ ಸಂಭವಿಸಿದ ಪ್ರಕೃತಿ ವಿಕೋಪಗಳಿಂದಾಗಿ ಅಂದರೆ ಬರಗಾಲದ ಹಾವಳಿಯಿಂದ ಈ ಗುಂಪು ಕರ್ನಾಟಕ ಗಡಿ ಭಾಗಗಳಾದ ರಾಯದುರ್ಗ, ಮೊಳಕಾಲ್ಮೂರು, ಪಾವಗಡ, ಚಳ್ಳಗುರ್ಕಿ, ಆದೋನಿ ಮೊದಲಾದ ಸ್ಥಳಗಳಿಗೆ ಬಂದು ನೆಲೆಯೂರಿರಬಹುದು. ಅಂತಿಮವಾಗಿ ಇವರು ಕರ್ನಾಟಕದಲ್ಲಿ ವಾಸಿಸಲು ತೊಡಗಿದರು. ಕರ್ನಾಟಕದಲ್ಲಿ ಅಧಿಕ ಜನರು ಭಿಕ್ಷೆಕೊಡುವುದರಿಂದ ಇಲ್ಲಿನ ವಸ್ತುಗಳ ಕಡಿಮೆದರದಲ್ಲಿ, ದೊರೆಯುತ್ತಿದ್ದುದರಿಂದ ಇಲ್ಲಿನ ಜನರ ಪ್ರೋತ್ಸಾಹದಿಂದ ಈ ಗುಂಪು ಸ್ಥಿರವಾಗಿ ವಾಸಮಾಡತೊಡಗಿದರು. ಅಂದಿನಿಂದ ಇಂದಿನವರೆಗೆ ಭಿಕ್ಷೆ ಬೇಡುವ ಸಮುದಾಯವೆಂದೇ ಹೇಳಿಕೊಳ್ಳುತ್ತಿದ್ದಾರೆ.

ಸಿಂಧೋಳ್ಳುರ ಮೂಲದ ಬಗೆಗೆ ಖಚಿತವಾಗಿ ಹೇಳಲಾಗದಿದ್ದರೂ, ಆಂಧ್ರಪ್ರದೇಶದಿಂದ ವಲಸೆ ಬಂದಿರಬಹುದೆಂಬುದು ಹಲವಾರು ವಿದ್ವಾಂಸರ ಅಭಿಪ್ರಾಯವಾಗಿದೆ. ಇಲ್ಲಿ ಚರ್ಚೆಗೊಳಪಡಬಹುದಾದ ಇನ್ನೊಂದು ವಿಚಾರವೆಂದರೆ, ಕರ್ನಾಟಕದ ಸಿಂಧೋಳ್ಳುರ ಶಾರೀರಿಕ ಲಕ್ಷಣಗಳನ್ನು ಹೋಲುವ ಜನ ರಾಯದುರ್ಗದಲ್ಲಿ ವಾಸಿಸುತ್ತಿದ್ದಾರೆ. ಇದೇ ಗುಂಪಿನ ಕೆಲವರು ಬಳ್ಳಾರಿ ಜಿಲ್ಲೆಯ ಕಂಪ್ಲಿಗೆ ಬಂದು

ನೆಲೆಸಿರಬಹುದೆಂದು ಊಹಿಸಲಾಗಿದೆ. ಇಲ್ಲಿಂದ ಬೇರೆ ಬೇರೆ ಕಡೆಯ ಸಿಂಧೋಳ್ಳುರೊಡನೆ ರಕ್ತ ಸಂಬಂಧ ಹೊಂದಿರುವುದನ್ನು ಕಾಣಬಹುದಾಗಿದೆ.

ಈ ಸಮುದಾಯದ ಬಗ್ಗೆ ಯಾವುದೇ ಶಾಸನಗಳಲ್ಲಾಗಲೀ ಪ್ರಾಚೀನ ಕೃತಿಗಳಲ್ಲಾಗಲೀ ಉಲ್ಲೇಖಗಳು ಕಾಣಬರುವುದಿಲ್ಲ. ಆದರೆ ಸಿಂಧೋಳ್ಳರ ವೃತ್ತಿಯನ್ನು ಗಮನಿಸಿ ಅನೇಕ ವಿದ್ವಾಂಸರು ಬಿಡಿ ಬಿಡಿ ಲೇಖನಗಳಿಂದ, ಹಲವು ಚರ್ಚೆಗಳು ಇತ್ತೀಚೆಗೆ ನಡೆದಿವೆ. ಗೀತಾನಾಗಭೂಷಣ ಅವರ ಉಪಸಂಸ್ಕೃತಿಯ ಮಾಲೆಯಿಂದ ಇವರ ಬದುಕಿನ ಚಿತ್ರಣ ಕುರಿತು ಅಧ್ಯಯನ ನಡೆಸಿರುವುದು ಗಮನಾರ್ಹ ಸಂಗತಿ. ಈ ಎಲ್ಲಾ ಕಾರಣಗಳಿಂದ ಸಿಂಧೋಳ್ಳರನ್ನು ಆಂಧ್ರ ಮೂಲದವರೆಂದು ನಿರ್ಧರಿಸಬಹುದು.

## ೩. ಪ್ರಸಾರ ಮತ್ತು ಜನಸಂಖ್ಯೆ

ಸಿಂಧೋಳ್ಳುರು ಹಿಂದೆ ಜೀವನೋಪಾಯಕ್ಕಾಗಿ ಊರಿಂದ ಊರಿಗೆ ತಂಡೋಪ ತಂಡವಾಗಿ ಅಲೆಯುವ ಅಲೆಮಾರಿಯಾಗಿದ್ದರು. ಅವರು ಬಹುತೇಕ ಭಿಕ್ಷೆಕೊಡುವ ಸ್ಥಳಗಳನ್ನು ಹೆಚ್ಚಾಗಿ ಆಯ್ಕೆ ಮಾಡಿಕೊಳ್ಳು ತ್ತಿದ್ದರು. ಇವರ ಆಯ್ಕೆ ಮಾಡಿದ ತಂಡಗಳು ಊರಿನ ಗೌಡ್ರ ಹತ್ತಿರ ಹೋಗಿ ನಾವು ದುರುಗ ಮುರಗಿ ಅಥವಾ ಊರಿನ ಪೋತರಾಜರು ಬಂದಿದ್ದೇವೆ, ನಿಮ್ಮ ಗ್ರಾಮದಲ್ಲಿ ವಾರೋಪ್ಪತ್ತು ದಿನವಿದ್ದು, ಮುಂದಿನ ಊರಿಗೆ ನಾವು ಹೋಗುತ್ತೇವೆ ಎಂದು ಚೀಟಿ ಬರೆಸುತ್ತಿದ್ದರಂತೆ.[೭] ಅಲ್ಲಿ ಬಂದಿರುವ ತಂಡ ಗುಡಾರ ನಿರ್ಮಿಸಿಕೊಂಡು, ಅಂದು ಕಾಲಕಳೆಯುತ್ತಿದ್ದರು. ದುರುಗಮುರುಗಿ ಬಂದಿರುವ ವ್ಯಕ್ತಿಯ ಬಗೆಗೆ ಊರು ತುಂಬೆಲ್ಲಾ ಡಂಗುರ ಸಾರುತ್ತಾರೆ. ಅಂದು ಊರಿನ ಗೌಡರು, ಶ್ಯಾನಭೋಗ, ತಳವಾರ ಅನೇಕ ಗಣ್ಯ ವ್ಯಕ್ತಿಗಳು ಮತ್ತು ಊರಿನ ಜನರು ಬಂದು ಸೇರುತ್ತಾರೆ. ಪೋತರಾಜನ ಹಾ ಹಾ ಹಾ ಹಾ... ದೇವಿ.... ಹೆಂಡತಿ ಬಾಲ ಬೇಲು ಎಂದಾಗ, ತನ್ನ ಮೈಮೇಲೆಗೆ ಚಾಟಿಯಿಂದ ಹೊಡೆದುಕೊಳ್ಳುತ್ತಾನೆ. ಒಂದು ಸುತ್ತು ಬುರ್ರ ಬುರ್ರವಾದ್ಯದೊಂದಿಗೆ ಕುಣಿಯುತ್ತಾ ತನ್ನ ಧಾರ್ಮಿಕ ಭಿಕ್ಷಾಟನಾ ಪ್ರದರ್ಶನ ತೋರಿಸುತ್ತಾನೆ.

ಪ್ರದರ್ಶನ ನೋಡಿದ ವ್ಯಕ್ತಿಗಳು ಪೋತರಾಜನಿಗೆ ದವಸ, ಧಾನ್ಯ, ಉಪ್ಪು, ಮೆಣಸಿನಕಾಯಿ, ಈರುಳ್ಳಿ ಅನೇಕ ವಸ್ತುಗಳನ್ನು ಕಾಣಿಕೆಯಾಗಿ ನೀಡುತ್ತಿದ್ದರು. ಅಂದು ರಾತ್ರಿ ಗೌಡರ ಮನೆಯಲ್ಲಿ ಊಟ ಮಾಡುವುದುಂಟು. ಹೀಗೆ ವಾರದ ದಿನಗಳಲ್ಲಿ ಭಿಕ್ಷೆ ಬೇಡಿದ ನಂತರ ಮತ್ತೊಂದು ಊರಿಗೆ ಹೋಗುವ ಸಂದರ್ಭದಲ್ಲಿ ಹಳೆಬಟ್ಟೆಗಳು, ಬೆಳ್ಳಿ ಆಭರಣ ಸ್ವೀಕರಿಸಿಕೊಳ್ಳುತ್ತಿದ್ದರು. ಬಂದಿರುವ ಬೆಳ್ಳಿ ಅಭರಣಗಳನ್ನು ದೊಡ್ಡ ಪೆಟ್ಟಿಗೆ ಸುತ್ತಲೂ ಕಟ್ಟುತ್ತಿದ್ದರು.

ಸ್ವಾತಂತ್ರ್ಯ ಸುವರ್ಣಮಹೋತ್ಸವ ಆಚರಿಸಿದರೂ ಧಾರ್ಮಿಕ ಭಿಕ್ಷಾಟನೆ ಇನ್ನು ತಪ್ಪಿಲ್ಲ. ಅಲೆಮಾರಿ ಜೀವನಕ್ಕೆ ವಿದಾಯ ಹೇಳಿ, ಇಂದು ಊರಿನ ಬಯಲು ಸ್ಥಳಗಳು, ನೀರು ಹರಿಯುವ ಸ್ಥಳ, ಶಾಲೆ ಮೈದಾನ, ಬಸ್ ನಿಲ್ದಾಣ, ರೈಲ್ವೆ ನಿಲ್ದಾಣ ಮತ್ತು ಸಂತೆ ಮೈದಾನ ಸ್ಥಳಗಳಲ್ಲಿ ಪುಟ್ಟವಾದ ಗುಡಾರ ಹಾಕಿಕೊಂಡಿರುತ್ತಾರೆ. ಇವರ ಸಂಸ್ಕೃತಿಯ ಮೂಲ ಸ್ವರೂಪವನ್ನು ಅವರ ಬದುಕಿನಿಂದ ಅನುಸರಿಸುವ ಕಟ್ಟುಪಾಡುಗಳಿಂದ ಕಾಣಬಹುದು. ಸಿಂಧೋಳ್ಳುರು ಆಂಧ್ರಪ್ರದೇಶದಿಂದ ಕರ್ನಾಟಕಕ್ಕೆ ವಲಸೆ ಬಂದು, ನೆಲೆಸಿದ್ದಾರೆಂದು ತಿಳಿದು ಬರುತ್ತದೆ. ಹೀಗೆ ವಲಸೆ ಮೂಲಕ ಬಂದ ಸಿಂಧೋಳ್ಳುರು ತಮ್ಮ ಭಿಕ್ಷೆಬೇಡುವ ಕಾಯಕದ ಅನುಕೂಲಕ್ಕೆ ತಕ್ಕಂತೆ, ಕರ್ನಾಟಕದಾದ್ಯಂತ ನೆಲೆಸಿದರು. ಭೌಗೋಳಿಕವಾಗಿ ತಮಗೆ

ಅನುಕೂಲವಾದ ಆಯಕಟ್ಟಿನ ಪ್ರದೇಶಗಳನ್ನು ಇವರು ಆಯ್ಕೆ ಮಾಡಿಕೊಂಡರು. ಇವರು ತಮ್ಮ ನೆಲೆಯನ್ನು ಆಯ್ಕೆ ಮಾಡಿಕೊಳ್ಳುವಾಗ, ಭಿಕ್ಷೆ, ಆಹಾರ, ದವಸಧಾನ್ಯ ಮತ್ತು ಎಲ್ಲಾ ಸೌಲಭ್ಯಗಳು ಸಿಗುವಂತಹ ನೆಲೆಗಳಿಗೆ ಹತ್ತಿರ ಸಂಬಂಧದ ಬೆಳವಣಿಗೆ, ರಾಜ್ಯದ ಗಡಿಭಾಗಗಳು ಭೌಗೋಳಿಕವಾಗಿ ಹತ್ತಿರ ಇರುವಂತಹ ಪ್ರದೇಶಗಳನ್ನು ಆಯ್ಕೆ ಮಾಡಿಕೊಂಡರು. ಏಕೆಂದರೆ ಭಿಕ್ಷೆ ಮತ್ತು ತಮ್ಮ ರಕ್ತ ಸಂಬಂಧ ಹಾಗೂ ಆ ಪ್ರದೇಶದ ಸಮುದಾಯದ ಸಂಬಂಧವನ್ನು ಬೇಗನೆ ಕಳೆದುಕೊಳ್ಳಲು ಅಸಾಧ್ಯ. ಸಂದರ್ಭಾನುಸಾರ ಇವರು ತಮ್ಮ ಮೂಲ ಪ್ರದೇಶಗಳಿಗೆ ಹೆಚ್ಚಾಗಿ ಹೋಗಿ ಬರುವುದುಂಟು.

ಕರ್ನಾಟಕದಲ್ಲಿ ಇವರು ಬಾಗಲಕೋಟೆ, ಬಳ್ಳಾರಿ, ಬೆಳಗಾವಿ, ಬೀದರ್, ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ, ಗದಗ, ಗುಲ್ಬರ್ಗಾ, ಹಾಸನ, ಹಾವೇರಿ, ಕೊಪ್ಪಳ, ಮಂಡ್ಯ, ಮೈಸೂರು, ರಾಯಚೂರು, ವಿಜಾಪುರ, ಶಿವಮೊಗ್ಗ, ತುಮಕೂರು ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ನೆಲೆಸಿದ್ದಾರೆ. ಗುಲ್ಬರ್ಗಾ, ಬಳ್ಳಾರಿ, ಬೆಳಗಾವಿ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಹೆಚ್ಚಾಗಿದ್ದಾರೆ. ಸಿಂಧೋಳ್ಳುರು ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮೀಣ ಭಾಗದಲ್ಲಿಯೂ ನೆಲೆಸಿದ್ದಾರೆ. ೧೯೧೧ರಲ್ಲಿ ಸಿಗುವ ಮಾಹಿತಿಯಂತೆ ಈ ಹಿಂದೆ ಗುಲ್ಬರ್ಗಾ, ಹಾವೇರಿ ಮತ್ತು ಬಳ್ಳಾರಿ ಜಿಲ್ಲೆಗಳಲ್ಲಿ ಅತಿ ಹೆಚ್ಚಾಗಿ ನೆಲೆಸಿರುವುದು ಕಾಣಬರುತ್ತದೆ. ಆದರೆ ಈಗ ಕರ್ನಾಟಕದ ಬಹುತೇಕ ಜಿಲ್ಲೆಗಳಲ್ಲಿಯೂ ಇವರ ಬಿಡಾರಗಳನ್ನು ಕಾಣಬಹುದು.

ಪ್ರಸ್ತುತ ಅಧ್ಯಯನದ ವ್ಯಾಪ್ತಿ ಇಡೀ ಕರ್ನಾಟಕ ರಾಜ್ಯಕ್ಕೆ ಸಂಬಂಧಿಸಿದ್ದು ಕರ್ನಾಟಕ ರಾಜ್ಯಾದ್ಯಾಂತ ಕ್ಷೇತ್ರಕಾರ್ಯಮಾಡಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಕರ್ನಾಟಕದಲ್ಲಿ ಸಿಂಧೋಳ್ಳುರು ಕೆಲವು ಕಡೆ ಪ್ರತ್ಯೇಕವಾದ ನೆಲೆಯಲ್ಲಿ ನೆಲೆಸಿರುವುದು ಕಂಡುಬರುತ್ತದೆ. ಹಾಗೆಯೇ ಕೆಲವು ಕಡೆ ಇತರೆ ಬುಡಕಟ್ಟು ಸಮುದಾಯಗಳೊಂದಿಗೆ ನೆಲಸಿರುವುದು ಕಂಡು ಬರುವುದುಂಟು. ಕರ್ನಾಟಕದಲ್ಲಿ ಒಟ್ಟು ೮೮೮ ಕುಟುಂಬಗಳು ನೆಲೆಸಿರುವುದು ಕಂಡು ಬಂದಿದೆ. ಈ ಮಾಹಿತಿಯ ಪ್ರಕಾರ ಸಿಂಧೋಳ್ಳುರು ೨೧ ಜಿಲ್ಲೆಯ, ತಾಲ್ಲೂಕು, ಹೋಬಳಿ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ನೆಲೆಸಿರುವುದು ಕಾಣಬರುತ್ತದೆ. ಇವರ ನೆಲೆಗಳನ್ನು ಕೋಷ್ಟಕದ ಮೂಲಕ ಈ ರೀತಿ ಗುರುತಿಸಬಹುದು. (ಆಯಾ ಜಿಲ್ಲೆಯ ಬಗ್ಗೆ ಮಾತ್ರ ಜನಗಣತಿಯನ್ನು ನೀಡಲಾಗಿದೆ. ತಾಲ್ಲೂಕು, ಗ್ರಾಮೀಣ ಜನಗಣತಿಯನ್ನು ಸಂಕ್ಷಿಪ್ತವಾಗಿ ಕೋಷ್ಟಕದಲ್ಲಿ ತಿಳಿಸಲಾಗಿದೆ)

ಕೋಷ್ಟಕ ೨.೨ ಪ್ರಸಾರ ಮತ್ತು ಜನಸಂಖ್ಯೆ

| ಕ್ರ.ಸಂ. | ಜಿಲ್ಲೆಗಳು | ಕುಟುಂಬಗಳು | ಗಂಡು | ಹೆಣ್ಣು | ಒಟ್ಟು |
|---|---|---|---|---|---|
| ೦೧ | ಬಾಗಲಕೋಟೆ | ೪೨ | ೧೦೭ | ೮೧ | ೧೮೮ |
| ೦೨ | ಬಳ್ಳಾರಿ | ೦೫ | ೨೧೮ | ೨೦೦ | ೪೧೮ |
| ೦೩ | ಬೆಳಗಾವಿ | ೭೫ | ೧೯೯ | ೧೭೩ | ೩೭೨ |
| ೦೪ | ಬೀದರ | ೨೫ | ೬೬ | ೩೩ | ೯೯ |
| ೦೫ | ವಿಜಾಪುರ | ೫೧ | ೧೧೮ | ೯೦ | ೨೦೮ |
| ೦೬ | ಚಿಕ್ಕಮಗಳೂರು | ೨ | ೩ | ೪ | ೭ |

| | | | | | |
|---|---|---|---|---|---|
| ೦೭ | ಚಿತ್ರದುರ್ಗ | ೦೪ | ೦೯ | ೧೦ | ೧೯ |
| ೦೮ | ದಾವಣಗೆರೆ | ೧೯ | ೪೨ | ೩೫ | ೭೭ |
| ೦೯ | ಧಾರವಾಡ | ೮೪ | ೨೪೪ | ೧೬೬ | ೪೧೦ |
| ೧೦ | ಗದಗ | ೩೧ | ೮೨ | ೫೮ | ೧೪೦ |
| ೧೧ | ಗುಲ್ಬರ್ಗಾ | ೧೦೨ | ೩೦೧ | ೨೦೭ | ೫೦೮ |
| ೧೨ | ಹಾಸನ | ೦೫ | ೧೭ | ೧೫ | ೩೨ |
| ೧೩ | ಹಾವೇರಿ | ೮೫ | ೨೫೦ | ೧೩೪ | ೩೮೪ |
| ೧೪ | ಕೊಪ್ಪಳ | ೧೯ | ೫೩ | ೩೯ | ೯೨ |
| ೧೫ | ಮಂಡ್ಯ | ೩೪ | ೮೯ | ೭೪ | ೧೬೩ |
| ೧೬ | ಮೈಸೂರು | ೧೩ | ೩೨ | ೨೩ | ೫೫ |
| ೧೭ | ರಾಯಚೂರು | ೪೭ | ೯೮ | ೭೯ | ೧೭೭ |
| ೧೮ | ಶಿವಮೊಗ್ಗ | ೫೩ | ೧೨೧ | ೯೪ | ೨೧೫ |
| ೧೯ | ತುಮಕೂರು | ೨೨ | ೬೧ | ೩೭ | ೯೮ |
| ೨೦ | ಉತ್ತರ ಕನ್ನಡ | ೧೭ | ೩೩ | ೨೮ | ೬೧ |
| | ಒಟ್ಟು | ೮೪೪ | ೨,೧೨೫ | ೧,೫೬೬ | ೩,೬೯೧ |

ಮೇಲಿನ ಕೋಷ್ಟಕವನ್ನು ಗಮನಿಸಿದಾಗ ಗುಲ್ಬರ್ಗಾ ಜಿಲ್ಲೆಯಲ್ಲಿ ಈ ಸಮುದಾಯುವು ಹೇರಳವಾಗಿರುವುದು ಸ್ಪಷ್ಟವಾಗುತ್ತದೆ. ಬಳ್ಳಾರಿ ಮತ್ತು ಹಾವೇರಿ ಜಿಲ್ಲೆಗಳಲ್ಲಿ ಕ್ರಮವಾಗಿ ಈ ಸಮುದಾಯ ಅಧಿಕವಾಗಿರುವುದನ್ನು ಗಮನಿಸಿಬಹುದು. ಉಳಿದ ಜಿಲ್ಲೆಗಳಾದ ಬೆಳಗಾವಿ, ಬಿಜಾಪುರ, ಧಾರವಾಡ, ಗದಗ, ಹುಬ್ಬಳ್ಳಿ, ಶಿವಮೊಗ್ಗ, ರಾಯಚೂರು ಮತ್ತು ಮಂಡ್ಯ, ಬೀದರ, ಚಿಕ್ಕಮಗಳೂರು, ದಾವಣಗೆರೆ, ಕೊಪ್ಪಳ, ಮೈಸೂರು, ತುಮಕೂರು, ಉತ್ತರ ಕನ್ನಡ ಮತ್ತು ಚಿತ್ರದುರ್ಗ, ಹಾಸನದಲ್ಲಿ ಸಾಧಾರಣವಾಗಿ ನೆಲೆಸಿರುವುದು ಕಂಡುಬರುತ್ತದೆ.

## ೪. ಸೃಷ್ಟಿ ಪುರಾಣಗಳು

ಸೃಷ್ಟಿ ಪುರಾಣಗಳು ಆಯಾ ಸಮುದಾಯಗಳ ಸಾಂಸ್ಕೃತಿಕ ಚರಿತ್ರೆಯಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತವೆ. ಆಯಾ ಸಮುದಾಯದ ಪರಿಸರವನ್ನು ಕುರಿತು ಆ ಸಮುದಾಯ ಕಂಡುಕೊಂಡ ದರ್ಶನ, ಅವರು ಕಾಪಾಡಿಕೊಂಡು ಬಂದ ವೌಲ್ಯಗಳಿಗೆಲ್ಲಾ ಸೃಷ್ಟಿ ಪುರಾರಣಗಳೇ ಮೂಲ ಆಕಾರಗಳಾಗಿರುತ್ತವೆ ಎಂಬುದು ಗಮನಾರ್ಹ ಸಂಗತಿಯಾಗಿದೆ. ಸೃಷ್ಟಿಪುರಾಣಗಳು ಆಯಾ ಸಮುದಾಯಗಳ ಮೇಲಿನ ಚಿತ್ರಣ ನೀಡುವುದಲ್ಲದೆ, ಮೂಲದ ಬಗೆಗೆ ಬೆಳಕು ಚಲ್ಲುತ್ತವೆ. “ಇವುಗಳ ಪ್ರಕೃತಿಯಲ್ಲಿ, ಸಮಾಜದಲ್ಲಿ, ಮತ್ತು ಸಮುದಾಯದಲ್ಲಿ ಸ್ಥಾಪಿತವಾದ ಕಟ್ಟು-ಕಟ್ಟಳೆಗಳನ್ನು ಸ್ಥಿರಗೊಳಿಸುವುದು. ನಂಬಿಕೆಗಳನ್ನು ದೃಢಪಡಿಸುವುದು ಮತ್ತು ದೇವತೆಗಳನ್ನು ಸಮರ್ಥಿಸುವುದು”[೨೮] ಎಂಬ ಅಂಶಗಳು ಸೃಷ್ಟಿಪುರಾಣಗಳ ಮಹತ್ವವನ್ನು ಹೇಳುತ್ತವೆ.

ಬುಡಕಟ್ಟಿನ ಸಂಸ್ಕೃತಿಯ ಕುರಿತು ಅಧ್ಯಯನ ಮಾಡುವ ಸಂದರ್ಭದಲ್ಲಿ ಸೃಷ್ಟಿಪುರಾಣಗಳು ಮಹತ್ವ ಪಾತ್ರವಹಿಸುತ್ತದೆ. ಸಮುದಾಯಗಳು ತಮ್ಮದೇ ಆದ ಆಚರಣೆಗಳನ್ನು ರೂಢಿಸಿಕೊಂಡು ಬಂದಿವೆ. ಇದಕ್ಕೆ ಇವರು ನಂಬಿರುವ ಸೃಷ್ಟಿಪುರಾಣಗಳು, ಅವರಲ್ಲಿನ ದೃಢವಾದ ನಂಬಿಕೆಗಳು ಕಾರಣವಾಗಿರುತ್ತವೆ. ಸಮುದಾಯದಲ್ಲಿಯೂ ಇಂಥ ಸೃಷ್ಟಿಪುರಾಣಗಳನ್ನು ಕಾಣಬಹುದಾಗಿದೆ. ಇವುಗಳ ಮೇಲಿನ ನಂಬಿಕೆ, ಆಚಾರ, ವಿಚಾರ ಮತ್ತು ಸಂಪ್ರದಾಯಗಳಿಗೆ ಪುರಾಣಗಳು ಸಮರ್ಥನೆ ನೀಡುತ್ತದೆ. ಸಿಂಧೋಳ್ಳು ಸಮುದಾಯದ ಪುರಾಣಗಳು ಅವರ ಸಾಮಾಜಿಕ, ಧಾರ್ಮಿಕ ಮತ್ತು ವೃತ್ತಿಗಳ ಮೇಲೆ ಬೆಳಕು ಚೆಲ್ಲುತ್ತದೆ. ಈ ದೃಷ್ಟಿಯಿಂದ "ಸೃಷ್ಟಿಪುರಾಣಗಳು ತನ್ನ ಸಮಾಜದಲ್ಲಿ ಸಕ್ರೀಯವಾದ ಪಾತ್ರವಹಿಸುತ್ತದೆ; ಜೀವಂತ ಶಕ್ತಿಯಾಗಿರುತ್ತದೆ. ಪುರಾಣಗಳು ಒಂದು ಸಮಾಜದ ಅಥವಾ ಬುಡಕಟ್ಟಿನ ಜನರಿಗೆ ಪರಮ ಪವಿತ್ರವಾದವುಗಳಾಗಿವೆ"[೨೦] ಹೀಗೆ ಸಿಂಧೋಳ್ಳುರ ಕಸುಬು ಮತ್ತು ಸಮುದಾಯಿಕ ಮೂಲ ದೈವರಾಧನೆ ಇವರಲ್ಲಿನ ಗಾಢವಾದ ನಂಬಿಕೆಗೆ ಕಾರಣವಾಗಿದೆ. ಈ ಸಮುದಾಯಕ್ಕೆ ಸಂಬಂಧಪಟ್ಟಂತೆ ಅಂತಹ ಕೆಲವು ಸೃಷ್ಟಿಪುರಾಣಗಳು ಹೀಗಿವೆ.

ಸೃಷ್ಟಿಪುರಾಣ ಒಂದು : ಒಂದು ದಿನ ಶಿವಪಾರ್ವತಿಯರು ನಂದಿಯ ಮೇಲೆ ಕುಳಿತುಕೊಂಡು ಭೂಲೋಕದಲ್ಲಿ ಹೊರಟಿದ್ದರು. ಅವರು ಸಂಚರಿಸುವ ಸ್ಥಳಗಳಲ್ಲಿ ಯಜ್ಞಯಾಗಾದಿಗಳು, ಆಶ್ರಮ ವ್ಯಾಸಂಗ, ಜನರ ವೃತ್ತಿಗಳು ಮತ್ತು ರಾಜರ ಆಳ್ವಿಕೆಯನ್ನು ನೋಡುತ್ತಾ, ಹೋಗುತ್ತಿದ್ದರು. ಹೋಗುವ ಮಾರ್ಗದಲ್ಲಿ ಅನೇಕ ಕೆಲಸ ಕಾರ್ಯಗಳು ನಡೆಯುತ್ತಿದ್ದವು. ಜನ ಅವರವರ ಕೆಲಸ ಕಾರ್ಯಗಳಲ್ಲಿ ಮಗ್ನರಾಗಿದ್ದರು. ಆ ಕಾಯಕ ಕೆಲಸದಲ್ಲಿ ಸಿಂಧೋಳ್ಳು ಸಮುದಾಯದ ವ್ಯಕ್ತಿ ಏನೂ ಕೆಲಸಮಾಡದೇ, ಸುಮ್ಮನೆ ಕುಳಿತುಕೊಂಡು ಕಾಲಹರಣ ಮಾಡುತ್ತಿದ್ದ. ಶಿವಪಾರ್ವತಿಯರು ಈ ವ್ಯಕ್ತಿಯನ್ನು ಕಂಡು ಏನೂ ಕೆಲಸ ಮಾಡದೇ ಸುಮ್ಮನೆ ಕುಳಿತುಕೊಂಡಿರುವ ದೃಶ್ಯವನ್ನು ನೋಡಿ ಬೇಸರಪಟ್ಟರಂತೆ. ಹಾಗೂ ಶಿವ ತಕ್ಷಣ ಯೋಚನೆ ಮಾಡಿ, ಇವನು ಭೂಲೋಕದಲ್ಲಿರುವ ಜನಗಳ ಉದ್ಧಾರಕ್ಕಾಗಿ ಅಥವಾ ಅಭಿವೃದ್ಧಿಗೋಸ್ಕರ ಧಾರ್ಮಿಕ ಭಿಕ್ಷೆ ಬೇಡು ಎಂದು ತಥಾಸ್ತು ಆಶೀರ್ವದಿಸಿ ಬುಟ್ಟಿಯ ದೇವರನ್ನು ನೀಡಿದರಂತೆ, ಆ ಬುಟ್ಟಿಯಲ್ಲಿ ದೇವಿಮೂರ್ತಿ, ಚಾಟಿ ಮತ್ತು ಬೇವಿನ ಸೊಪ್ಪು ಇತ್ತಂತೆ. ಹೀಗೆ ಸಿಂಧೋಳ್ಳುರು ದೇವರ ಬುಟ್ಟಿ ಹೊತ್ತುಕೊಂಡು ಜನಗಳ ಉದ್ಧಾರಕ್ಕಾಗಿ ನಿರಂತರವಾಗಿ ಅಲೆದಾಡಿದರು. ಪ್ರತಿ ಮನೆಗೂ ಹೋಗುವ ಸಂದರ್ಭದಲ್ಲಿ ಭಿಕ್ಷೆ ನೀಡುವರನ್ನು ಹರಸುತ್ತ, ಅವರ ಮಕ್ಕಳ ಮುಖದ ಮೇಲೆ ಬೇವಿನ ಸೊಪ್ಪಿನಿಂದ ಇಳಿಸುವುದು ಇವರ ಕಾಯಕವಾಗಿತ್ತು. ಇದರ ಜೊತೆಯಲ್ಲಿ ಹಾಡಿನ ಮೂಲಕ ಹೇಳುತ್ತಾ -

"ನಿಮ್ಮ ಮನೆಗೆ ರೋಗ ರುಜಿನುಗಳು ತೊಲಗಲಿ
ನಿಮ್ಮ ಮಕ್ಕಳಿಗೆ ಒಳ್ಳೆಯದಾಗಲಿ
ಮಳೆ-ಬೆಳೆ ವೃದ್ಧಿಸಲಿ
ಗಡಿಗೆ ನಿಮ್ಮ ಮನೆಯಲ್ಲಿ ತುಂಬಿ ತುಳುಕಲಿ
ಈರನಾಗಮ್ಮ ನಿಮಗೆ ಕರುಣಿಸಲಿ
ನಿಮ್ಮನ್ನು ಮಾರಮ್ಮ ಕಾಪಾಡುತ್ತಾಳೆ"

ಇತ್ಯಾದಿಯಾಗಿ ಹೇಳುತ್ತಾ, ಹರಸುತ್ತಾನೆ. ಇವನ ವಂಶಜರೇ ತಾವು ಎಂದು ಸಿಂಧೋಳ್ಳರು ಹೇಳುವರು. ಅಂತೆಯೇ ಬುಟ್ಟಿಯ ಆರಾಧನೆ ಮತ್ತು ಶಿವಪಾರ್ವತಿಯರು ನಮಗೆ ದಾರಿ ತೋರಿಸಿದವರೆಂದು ಹೇಳಿಕೊಳ್ಳುತ್ತಾರೆ.

**ಸೃಷ್ಟಿಪುರಾಣ ಎರಡು :** ಈ ಪ್ರಪಂಚವೆಲ್ಲ ನೀರಿನಿಂದ ಮುಳುಗಿ ಹೋಗಿತ್ತು. ಎಲ್ಲಿ ನೋಡಿದರೂ ನೀರೆ ತುಂಬಿತ್ತು. ಒಂದು ಕ್ರಿಮಿಕೀಟವೂ ಪ್ರಪಂಚದ ಮೇಲಿರಲಿಲ್ಲ. ನೀರಿನಲ್ಲಿ ಒಂದು ಈಚಲಮರದ ಗಿಡ ತೇಲುತ್ತಿತ್ತು. ಈ ಮರ ತೇಲುತ್ತ ತೇಲುತ್ತ ಒಂದು ಅಗಲವಾದ ಭೂಮಿ ಇರುವ ಸ್ಥಳದಲ್ಲಿ ನಿಂತಿತು. ಈ ಈಚಲಮರ ಬೆಳೆದು ದೊಡ್ಡದಾದ ಮೇಲೆ, ಅದರ ಸುಳಿಯಲ್ಲಿ ಒಂದು ಗಂಡು ಒಂದು ಹೆಣ್ಣು ಹೊರಗೆ ಬಂದಿತು. ಸುಳಿಯಿಂದ ಬಂದವರಿಬ್ಬರೂ ಅಣ್ಣ ತಂಗಿಯರಾಗಿದ್ದರು. ಈ ಅಣ್ಣ ತಂಗಿಯರಿಬ್ಬರೂ ತಮ್ಮ ತಮ್ಮ ಮುಷ್ಟಿಗಳಲ್ಲಿ ಮಣ್ಣು ಹಿಡಿದುಕೊಂಡು ಒಂದು ಗಂಡು ಒಂದು ಹೆಣ್ಣು ಸೃಷ್ಟಿಸಿದರು. ಇವರಿಬ್ಬರಿಂದ ಸಿಂಧೋಳ್ಳು ಸಂತತಿ ಬೆಳೆಯಿತು. ಸಿಂಧೋಳ್ಳರಾದ ನಾವೇ ಅವರ ವಂಶಸ್ಥರು ಎಂದು ಹೇಳಿಕೊಳ್ಳುತ್ತಾರೆ.

ಸೃಷ್ಟಿಗೆ ಸಂಬಂಧಿಸಿದ ಸುರಳಿಪೂಜೆ ಮಾಡಿಕೊಳ್ಳುತ್ತಾರೆ. ಈ ಸುರುಳಿಯನ್ನು ಗುಡಾರಗಳಲ್ಲಿ ತಂದು, ಕುಲದೇವತೆಗಳ ಪಕ್ಕದಲ್ಲಿಟ್ಟು ಪೂಜಿಸುತ್ತಾರೆ. ಇದು ಸೃಷ್ಟಿ ಶಕ್ತಿಯ ಸೂಚನೆಯನ್ನು ಸಂಕೇತಿಸುವುದಾಗಿದೆ. ಸಿಂಧೋಳ್ಳರು ಈಚಲಮರ ಮತ್ತು ಅವರ ಸೃಷ್ಟಿಗೆ ಸಂಬಂಧ ಕಲ್ಪಿಸುವರು. ಎಲ್ಲಿ ಈಚಲಮರಗಳು ಕಂಡು ಬರುವವು, ಅಲ್ಲಿ ಪೂಜೆ ಮಾಡಿಕೊಂಡು, ಬುರ್ರ ಬುರ್ರವಾದ್ಯದೊಂದಿಗೆ ಅದೇ ಸ್ಥಳದಲ್ಲಿ ನೃತ್ಯಮಾಡಿಕೊಂಡು ಬರುವುದುಂಟು.[೨೦] ಈ ಈಚಲಮರವನ್ನು ಆಶ್ರಯಿಸಿ ನಮ್ಮ ಸಂತತಿ ಬೆಳಯಿತು ಎಂಬುದು ಇವರ ನಂಬಿಕೆಯಾಗಿದೆ.

**ಸೃಷ್ಟಿಪುರಾಣ ಮೂರು :** ಒಂದು ಕಾಲದಲ್ಲಿ ಸಿಂಧೋಳ್ಳರಾದ ಜಂಬಣ್ಣ, ಮುನಿಸ್ವಾಮಿ ಮತ್ತು ಈರನಾಗಮ್ಮ ಕುಲದ ಆರಾಧ್ಯ ದೈವವಾಗಿದ್ದರು. ಇವರಲ್ಲಿ ಜಂಬಣ್ಣ ಎಂಬುವನು ತನ್ನ ಕುಟುಂಬದಲ್ಲಿ ಯಾವುದೇ ಕೆಲಸ ಮಾಡದೇ ಸೋಮಾರಿಯಾಗಿದ್ದನು. ಹಾಗೂ ನಿಷ್ಪ್ರಯೋಜಕನಾಗಿದ್ದನು. ಅಂತಹ ಸಂದರ್ಭದಲ್ಲಿ ಕುಟುಂಬದ ಸದಸ್ಯರು ಜಂಬಣ್ಣ ನೀನು ಯಾವುದೇ ಕೆಲಸ ಮಾಡದೆ ದಿನಾಲೂ ತಿರುಗಿದರೆ ನಿನಗೆ ಕೂಳು ಹಾಕುವವರು ಯಾರು ಎಂದು ಗದರಿಸಿದರಂತೆ. ಈ ಮಾತಿನಿಂದ ಮನಸ್ಸಿಗೆ ಬೇಸರವಾಗಿ ಕುಟುಂಬದವರು ನನ್ನ ಮುಖ ನೋಡುವುದು ಬೇಡವೆಂದು ಮನೆಬಿಟ್ಟು ಹೋದನು. ಜಂಬಣ್ಣ ತನ್ನ ಮುಖಕ್ಕೆ ವಿವಿಧ ಬಣ್ಣ ಬಳಿದುಕೊಂಡು ಸೊಂಟಕ್ಕೆ ಬೇವಿನ ಎಲೆಗಳನ್ನು ಕಟ್ಟಿಕೊಂಡು ಒಂದು ಪುಟ್ಟಿಯಲ್ಲಿ ದೇವರ ಮೂರ್ತಿಯನ್ನು ಹೊತ್ತುಕೊಂಡು ಬಂದನು. ಚಾಟಿಯನ್ನು ತೆಗೆದುಕೊಂಡು ತಮ್ಮ ಮೈಯಿಗೆ ಹೊಡೆದುಕೊಳ್ಳುತ್ತಾ ಆವೇಶದಿಂದ ಕುಣಿಯುತ್ತಾ, ಊರೂರು ಅಲೆದು ಕಾಳುಕಡಿಗಳನ್ನು ಸಂಗ್ರಹಿಸಿಕೊಂಡು ಇದೇ ವೃತ್ತಿಯನ್ನು ರೂಢಿಸಿಕೊಂಡನು. ಹೀಗೆ ಕ್ರಮೇಣ ವೃತ್ತಿಯ ಆಧಾರದ ಮೇಲೆ ನಮ್ಮ ಸಂತತಿ ಬೆಳೆಯಿತೆಂದು ಹೇಳಿಕೊಳ್ಳುತ್ತಾರೆ.[೨೧]

**ಸೃಷ್ಟಿಪುರಾಣ ನಾಲ್ಕು :** ಶಿವನ ಹೆಂಡತಿಯಾದ ಪಾರ್ವತಿಯು ದುರ್ಗೆಯ ಅವತಾರವೆಂದು ಕರೆಯಲಾಗುತ್ತದೆ. ಭಕ್ತರ ಪ್ರಾರ್ಥನೆಯಂತೆ ಈ ದೇವಿಯ ನಾನಾ ಅವತಾರಗಳನ್ನು ತಳೆದಿರುವಳು.

ಈಕೆಯನ್ನು ಆರ್ಯದುರ್ಗಾ, ವೇದಗರ್ಭಾ, ಅಂಬಿಕಾ, ಭದ್ರಕಾಳಿ, ಭದ್ರಕ್ಷೇಮಾಚೂರಿ ಇತ್ಯಾದಿ ಹೆಸರುಗಳಿಂದ ಕರೆದರೆ ಸಿಂಧೋಳ್ಳುರು ದುರುಗಮ್ಮ, ಮಾರಮ್ಮ, ಮರಗಮ್ಮ, ಕೂಗಮ್ಮ, ರೇಣುಕಾ ಎಲ್ಲಮ್ಮ ಮತ್ತು ಗಾಳೆಮ್ಮ ಮುಂತಾದ ಹನ್ನೆರಡು ಹೆಸರುಗಳಿಂದ ಕರೆಯುವುದುಂಟು. ಈ ದೇವತೆಗಳಿಗೆ ಶ್ರದ್ಧಾ ಭಕ್ತಿಯಿಂದ ಪೂಜಿಸಲಾಗುತ್ತದೆ. ದಕ್ಷಿಣ ಭಾರತದಲ್ಲಿ ಈಕೆಯನ್ನು ಭಯಂಕರವಾದ ಆಕಾರಗಳಲ್ಲಿ ಪೂಜಿಸಲಾಗುತ್ತದೆ.

ಒಂದು ದಿನ ಮುನಿಸ್ವಾಮಿ ಕುಲದ ಹನ್ನೆರಡು ದೇವತೆಗಳನ್ನಿಟ್ಟುಕೊಂಡು, ಬೀದಿ ಬೀದಿಗಳನ್ನು ಸುತ್ತುವ ಮೂಲಕ ಭಿಕ್ಷೆ ಬೇಡಲು ಹೋಗುತ್ತಿದ್ದನು. ಕುಲದ ದೇವತೆಗಳ ಎದುರಿಗೆ ತನ್ನ ಮೈಯಿಗೆ ಚಾಟಿಯಿಂದ ಹೊಡೆದುಕೊಳ್ಳುವುದು, ಮುಂಗೈನಿಂದ ಚೂಪಾದ ಕತ್ತಿ ಆಡಿಸಿ ರಕ್ತ ಚಿಮ್ಮಿಸುತ್ತಾನೆ. ರಕ್ತ ಚಿಮ್ಮಿಸುವ ಕಾರ್ಯ ನಿರಂತರ ನಡೆಯುತ್ತಲೇ ಇರುತ್ತದೆ. ದೇವಿಗೆ ರಕ್ತ ಚಿಮ್ಮಿಸಿದರೆ ತೃಪ್ತಿಪಡುವಳಂತೆ. ಒಮ್ಮೆ ಮುನಿಸ್ವಾಮಿ ಮುಂಗೈನಿಂದ ರಕ್ತ ಚಿಮ್ಮಿಸಿ ನಂತರ ಕುಲದೇವತೆಗಳಿಗೆ ಮೈಲಿಗೆ ಮಾಡುತ್ತಾನೆ. ಈತನ ವರ್ತನೆ ನೋಡಿ, ಬುಟ್ಟಿಯ ದೇವತೆಗಳು ಉಗ್ರರೂಪ ತಾಳುತ್ತಾರೆ. ಕೊನೆಗೂ ಮುನಿಸ್ವಾಮಿ ಎಚ್ಚರ ತಪ್ಪಿ ಬೀಳುತ್ತಾನೆ. ಅಷ್ಟರಲ್ಲಿ ಹನ್ನೆರಡು ದೇವತೆಗಳು ಬುಟ್ಟಿಯಲ್ಲಿ ಮಾಯವಾಗುತ್ತವೆ. ನಂತರ ಮುನಿಸ್ವಾಮಿ ಎಚ್ಚರಗೊಂಡಾಗ ಬುಟ್ಟಿ ಎಲ್ಲಿ ಎಂದು ನೋಡುತ್ತಾನೆ. ಬುಟ್ಟಿ ಹೋಯಿತಿಲ್ಲಾ ಎಂದು ಗೋಳಾಟ ಮಾಡುತ್ತಾನೆ. ಕೊನೆಗೂ ಮುನಿಸ್ವಾಮಿ ಕುಲದೇವತೆಗಳ ಜ್ಞಾಪಕ ಶಕ್ತಿಯ ಮೇರೆಗೆ ದೇವಿ ರೂಪಗಳನ್ನು ಮಾಡಿ, ಭಿಕ್ಷಾಟನೆ ಮಾಡುತ್ತಾನೆ. ಇಂದಿಗೂ ರಕ್ತ ಚಿಮ್ಮಿರುವ ಕೈಯಿಂದ ಕುಲದೇವತೆಗಳನ್ನು ಮುಟ್ಟುವುದಿಲ್ಲವಂತೆ. ಇದರ ಅನುಕರಣೆಯಿಂದ ನಮ್ಮ ಸಂತತಿ ಹುಟ್ಟಿಕೊಂಡಿತ್ತು ಎಂದು ಹೇಳಿಕೊಳ್ಳುತ್ತಾರೆ.[೨೨]

ಸೃಷ್ಟಿಪುರಾಣ ಐದು : ಭೂಲೋಕದಲ್ಲಿ ನರ ಮನುಷ್ಯರೆ ಇರಲಿಲ್ಲ. ಒಂದು ಸಲ ಪಾರ್ವತಿ ಪರಮೇಶ್ವರರು ಭೂಲೋಕಕ್ಕೆ ಬಂದರು. ಭೂಲೋಕದಲ್ಲಿ ಸಂಚರಿಸುತ್ತಿದ್ದಾಗ ಬರಡಾದ ಈ ಭೂಮಿಯ ಮೇಲೆ ಮಾನವ ಜೀವಿಯನ್ನು ಸೃಷ್ಟಿಸಲು ಯೋಚಿಸಿದರು. ಪಾರ್ವತಿ ಪರಮೇಶ್ವರರು ತಮ್ಮ ಬೆವರಿನಿಂದ ನೀರು ತೆಗೆದುಕೊಂಡು ಮಣ್ಣನ್ನು ಕಲಿಸಿ ಹೆಣ್ಣು-ಗಂಡು ಎಂಬ ಗೊಂಬೆ ತಯಾರಿಸಿ ಅವುಗಳಿಗೆ ಜೀವ ಕೊಟ್ಟರು. ಅವರೇ ಮುನಿಸ್ವಾಮಿ ಮತ್ತು ಈರನಾಗಮ್ಮ ಅವರಿಂದಲೇ ಸಿಂಧೋಳ್ಳುರ ವಂಶ ಬೆಳೆಯಿತು ಎಂದು ಹೇಳುತ್ತಾರೆ.[೨೩]

ಹೀಗೆ ಸಿಂಧೋಳ್ಳುರು ತಮ್ಮ ವೃತ್ತಿಗಳ ಮೇಲೆ ತನ್ನ ಮೂಲವನ್ನು ಹೇಳುವ ಸೃಷ್ಟಿಪುರಾಣಗಳು ಸಮುದಾಯದ ವೃತ್ತಿ, ಧಾರ್ಮಿಕ ನಂಬಿಕೆ ಇತ್ಯಾದಿ ಅಂಶಗಳ ಮೇಲೆ ಬೆಳಕು ಚಲ್ಲುತ್ತವೆ.

**೫. ಸಾಂಸ್ಕೃತಿಕ ವೀರರು**

ಮೂಲತಃ ಸಿಂಧೋಳ್ಳುರು ಶೈವ ಪರಂಪರೆಗೆ ಸೇರಿದವರಾಗಿದ್ದಾರೆ. ಒಂದು ಕಾಲಕ್ಕೆ ಭಿಕ್ಷಾಟನೆಯೇ ಇವರ ಜೀವನಕ್ಕೆ ಮುಖ್ಯ ಆಧಾರವಾಗಿತ್ತು. "ಎಲ್ಲಿ ಅನ್ನ ಐತೋ; ಭಿಕ್ಷೆ ಕೊಡುವ ಜನ ಐತೋ; ಅದೇ ನಮ್ಮ ಗುಡಾರಮಾರು" ಎಂಬುದೇ ಇವರ ಜೀವನ ಸಿದ್ಧಾಂತ. ಹೀಗಾಗಿ ಇವರು ಒಂದು

ಪ್ರದೇಶದಿಂದ ಮತ್ತೊಂದು ಪ್ರದೇಶದಲ್ಲಿ ಸದಾ ಅಲೆಮಾರಿಗಳಾಗಿದ್ದರು. ತಮ್ಮ ಧಾರ್ಮಿಕ ದೇವತೆಗಳನ್ನು ನಂಬಿಕೊಳ್ಳುತ್ತಾ, ಅಲೆಯುತ್ತಾ, ಆಯಾ ಪ್ರದೇಶದ ಜನಗಳೊಂದಿಗೆ ಬೆರೆತುಕೊಂಡು, ಸೌಜನ್ಯದಿಂದ ಜೀವನ ಮಾಡುತ್ತಾ, ಅಲ್ಲಲ್ಲಿ ಪ್ರಾಣಿಗಳನ್ನು ಬೇಟೆಯಾಡುತ್ತಾ, ಕಾಲಕಳೆಯುತ್ತಿದ್ದರು. ತಾವು ವಾಸಿಸುವ ನೆಲೆಗಳಲ್ಲಿ ತಮ್ಮ ಭಿಕ್ಷಾಟನಾ ಕಲೆಯನ್ನು ಪ್ರದರ್ಶನ ಮಾಡಿ, ಶಭಾಸ್ ಎಂದು ಗುರುತಿಸಿಕೊಂಡರು. ಇಂತಹ ಭಿಕ್ಷಾಟನಾ ಸಂಸ್ಕೃತಿಯ ಹಿನ್ನೆಲೆಯಲ್ಲಿ ಬಂದವರು ಮುನಿಸ್ವಾಮಿ, ಈರನಾಗಮ್ಮ, ಪೋತರಾಜ ಮುನಿಸ್ವಾಮಿ ಇವರನ್ನು ಸೈದ್ಧಾಂತಿಕ ನಾಯಕರೆಂದು ಗುರುತಿಸಬಹುದಾಗಿದೆ. ಸಿಂಧೋಳ್ಳು ಸಮುದಾಯಕ್ಕೊಂದು ಸಾಂಸ್ಕೃತಿಕ ಸಂವಿಧಾನವನ್ನು ಕೊಟ್ಟವರು. ಕುಲಾಚಾರದ ಆಚರಣೆಗಳನ್ನು ರೂಪಿಸಿದವರು. ಹೀಗಾಗಿ ಇವರು ಆರಾಧನಾ ವ್ಯಕ್ತಿಗಳಾಗಿ ರೂಪುಗೊಂಡಿದ್ದಾರೆ. ಈ ಸಮುದಾಯದ ಪಾಲಿಗೆ ಪುರಾಣವಾದವರು. ಸಿಂಧೋಳ್ಳು ಸಮುದಾಯ ಪಿತೃ ಪ್ರಧಾನ ಸಮಾಜದಲ್ಲಿ ವಸ್ತುವಾದವರು. ಪಿತೃ ಪ್ರಧಾನ ಸಂಸ್ಕೃತಿಯ ಆರಾಧಕರಾದ ಸಿಂಧೋಳ್ಳುರಲ್ಲಿ ಈ ಮಹಾಪುರುಷರು ಈ ಸಮುದಾಯದ ಜನರ ಪೂಜಾರ್ಹರಾಗಿದ್ದಾರೆ.

### ದಂತಕಥೆಯ ನಾಯಕರು

ಸಿಂಧೋಳ್ಳುರ ಸಾಂಸ್ಕೃತಿಕ ಪರಂಪರೆಯಲ್ಲಿ ಮೌಖಿಕ ದಂತ ಕಥೆಗಳು ದಾಖಲಾಗಿವೆ. ಇವು ಸಮುದಾಯದ ಪೌರಾಣಿಕ ಪುಣ್ಯಕಥೆಗಳೆಂಬಂತೆ ವರ್ಣಿಸಲ್ಪಟ್ಟಿವೆ. ದಂತಕಥೆಗಳ ನಾಯಕರು ಪೌರಾಣಿಕ ವೀರರಂತೆ ಅದ್ಭುತಗಳನ್ನು ಸಾಧಿಸಿದ್ದಾರೆ. ಪವಾಡಗಳನ್ನು ಮೆರೆದಿದ್ದಾರೆ. ಈ ದಂತ ಕಥೆಗಳ ಮೂಲಕ ಧಾರ್ಮಿಕ ಸಂಬಂಧಗಳನ್ನು ಗುರುತಿಸಬಹುದಾಗಿದೆ. ಪೌರಾಣಿಕವನ್ನು ಐತಿಹಾಸಿಕಗೊಳಿಸುವ ಪ್ರಯತ್ನ ಮಾಡಬಹುದಾಗಿದೆ.

ಮುನಿಸ್ವಾಮಿ : ಪ್ರಚಲಿತನಾಗಿರುವ ದಂತಕಥೆಗಳ ಸಾಲಿನಲ್ಲಿ ಮುನಿಸ್ವಾಮಿ ಸಿಂಧೋಳ್ಳುರ ಮೂಲ ಪುರುಷ. ಈತನ ಸಹೋದರಿ ಈರನಾಗಮ್ಮ. ತಂದೆ ತಾಯಿಗಳಿಲ್ಲದೆ ದೈವಾಂಶ ಸಂಬೋತ ಹುಟ್ಟನ್ನು ಪಡೆದವರು. ಶಿವನ ಆಶೀರ್ವಾದದಿಂದ ಭಿಕ್ಷಾಟನೆ ಬುಟ್ಟಿ ಮತ್ತು ಮುಖವಾಡ ಸೃಷ್ಠಿಯಾಯಿತಂತೆ. ಈ ಬುಟ್ಟಿಯ ಜತೆಯಲ್ಲಿ ಪರಮಾತ್ಮನ ಪ್ರಸಾದದಿಂದ ಒಂದು ಗಂಡು-ಹೆಣ್ಣು ಜನಿಸಿದರು. ಪರಮೇಶ್ವರ ಪಾರ್ವತಿ ದೇವಿಯೂ ಈ ಮಗುವನ್ನು ಕಂಡು ಸಂತೋಷಪಟ್ಟರಲ್ಲದೆ ಮುನಿಸ್ವಾಮಿ ಮತ್ತು ಈರನಾಗಮ್ಮ ಎಂದು ನಾಮಕರಣ ಮಾಡಿದರು. ಜನಪದರ ಪ್ರಕಾರ ಬುಟ್ಟಿಯಲ್ಲಿ ಜನಿಸಿದುದದರಿಂದ 'ಬುಟ್ಟಗಲೋರ' ಎಂದು ಕರೆಯಲಾಯಿತು.[೨೫] ಮುಂದೆ ಮುನಿಸ್ವಾಮಿ ಹಸುಕರುಗಳೊಂದಿಗೆ ಕಾಡಿನಲ್ಲಿ ವಾಸಿಸತೊಡಗಿದನು. ವಯಸ್ಕನಾದಂತೆ ಮುನಿಸ್ವಾಮಿ ಮದುವೆ ಆಗಲು ಯೋಚಿಸಿದನು. ಕಾಡಿನ ಪ್ರಾಂತ್ಯದಲ್ಲಿ ಸುಂದರ ಲಕ್ಷಣವುಳ್ಳ ಹೆಣ್ಣನ್ನು ನೋಡಿದನು. ಅವಳ ಹೆಸರು ನಾಗಮ್ಮ ಇವರಿಬ್ಬರಿಗೆ ಮದುವೆಯಾದ ಮೇಲೆ ಸಿಂಧೋಳ್ಳು ಸಂತತಿ ವೃದ್ಧಿಯಾಯಿತು. ಮುನಿಸ್ವಾಮಿ ತಮ್ಮ ಸಮುದಾಯದ ಪುರಾಣ ಪುರುಷನಾಗಿದ್ದಾನೆ ಎಂಬ ಪ್ರತೀತಿ ಇದೆ.

ಮುಂದೆ ಮುನಿಸ್ವಾಮಿ ಹೆಂಡತಿ ನಾಗಮ್ಮ ದೈವಭಕ್ತಳಾಗಿ ಗಂಡನೊಂದಿಗೆ ಅನ್ಯೋನ್ಯವಾಗಿ ಜೀವಿಸುತ್ತಿದ್ದಳು. ಮುನಿಸ್ವಾಮಿ ತನ್ನ ಮಣ್ಣಿನ ಕುಲದ ದೇವತೆಯ ಮೂರ್ತಿಯನ್ನು ತೆಗೆದುಕೊಂಡು

ಭಿಕ್ಷೆಬೇಡಲು ಹೋಗುತ್ತಿದ್ದನು. ಪ್ರತಿನಿತ ಇಬ್ಬರು ಕಾಡಿನಲ್ಲಿ ಗಡ್ಡೆಗೆಣಸು ತಿನ್ನುತ್ತಾ, ನದಿಯಲ್ಲಿ ಸ್ನಾನ ಮಾಡಿ, ಬುಟ್ಟಿಯಲ್ಲಿ ಕುಲದೇವತೆಗಳನ್ನು ಪೂಜಿಸುತ್ತಿದ್ದರು. ಕಾಡಿನಲ್ಲಿ ಮಲಗಿರುವಾಗ ಕುಲದ ದೇವತೆ ಕನಸಿನಲ್ಲಿ ಬಂದು, ನಿಮ್ಮಗೆ ಪರಮಾತ್ಮನ ಕೃಪೆಯಿಂದ ಸಂತಾನ ಪ್ರಾಪ್ತಿಯಾಗುತ್ತದೆ ಎಂದು ಹೇಳಿದಳು. ನಾಗಮ್ಮ ಗರ್ಭಾವತಿಯಾದಳು. ಇವಳನ್ನು ಮುನಿಸ್ವಾಮಿ ಅಕ್ಕರೆಯಿಂದ ನೋಡಿಕೊಳ್ಳುತ್ತಾನೆ. ಒಂಬತ್ತು ತಿಂಗಳು ಒಂಬತ್ತನೇ ದಿವಸದಲ್ಲಿ ಗಂಡು ಮಗುವಿಗೆ ಜನ್ಮ ನೀಡಿದಳು. ಅವನೇ ಪೋತರಾಜ. ಈ ಸಮುದಾಯದ ಮೂಲ ಪುರುಷ. ಬುಟ್ಟಿಯಲ್ಲಿ ಜನಿಸಿರುತ್ತಾನೆ. ಇವರ ಸೃಷ್ಠಿ ಶಿವ ಮತ್ತು ಪಾರ್ವತಿಯಿಂದಲೇ ಆಯಿತು ಎಂಬ ಕಲ್ಪನೆ ಇದೆ.

**ಈರನಾಗಮ್ಮ :** ಈರನಾಗಮ್ಮ ಸಿಂಧೋಳ್ಳುರ ಕುಲದೇವತೆ. ಸಿಂಧೋಳ್ಳುರ ಗುಡಾರ ದೇವತೆ, ಶಕ್ತಿ ದೇವತೆಯು ಹೌದು ಎಂದು ಬಣ್ಣಿಸುತ್ತಾರೆ. ಮುನಿಸ್ವಾಮಿಯ ಸಹೋದರಿಯಾದ ಈರನಾಗಮ್ಮ ಸೂರ್ಯದೇವನ ಆರಾಧಕಳಾಗಿದ್ದಳು. ಸೂರ್ಯದೇವರನ್ನು ಪಡೆಯಲು ಪ್ರಾರ್ಥಿಸಿದಳು. ಪತಿಯಾಗಬೇಕೆಂದು ಪರಿಪರಿ ಬೇಡಿಕೊಂಡಳು. ಆದರೆ ಸೂರ್ಯದೇವರು ಈರನಾಗಮ್ಮನ ಮೋಹಕ್ಕೆ ಸೋಲಲಿಲ್ಲ ಸಹೋದರಿ ಈರನಾಗಮ್ಮ ಬೇಟೆಯಾಡಲು ಇಚ್ಛೆಪಟ್ಟಳಲ್ಲದೆ, ಬಿಲ್ಲುಬಾಣಗಳಿಂದ ತರಬೇತಿ ಪಡೆದಳು. ಪಶುಪಾಲಕರೊಂದಿಗೆ ಅರಣ್ಯಕ್ಕೆ ಹೋಗುತ್ತಿದ್ದಳು. ಅಣ್ಣ ಅತ್ತಿಗೆಯವರಿಗೆ ಬಹಳ ಆನಂದವಾಯಿತು. ಹಾವೇರಿ ಪ್ರದೇಶದಲ್ಲಿ ಸಂಚರಿಸಿ ಗಡ್ಡೆಗಣೆಸು ಸಂಗ್ರಹಿಸುತ್ತಿದ್ದಳು. ನಿರ್ಭಿತಿಯಿಂದ ಬೇಟೆಯಾಡಿ ಕಾಡಿನ ನಿವಾಸಿಗಳೊಂದಿಗೆ ಮಧುರ ಬಾಂಧವ್ಯ ಸಾಧಿಸಿದಳು. ಇದು ತೃಪ್ತಿ ನೀಡದೇ ಮತ್ತೊಮ್ಮೆ ಸೂರ್ಯದೇವರನ್ನು ಪ್ರಾರ್ಥಿಸುತ್ತಾಳೆ. ಅಲ್ಲಿಗೂ ಉತ್ತರ ಸಿಗದ ಕಾರಣ ಅಗ್ನಿ ಕುಂಡದಲ್ಲಿ ಬಿದ್ದು ಮರಣ ಹೊಂದುತ್ತಾಳೆ. ಸಿಂಧೋಳ್ಳುರು ಈರನಾಗಮ್ಮನ ಪತಿ ಸೂರ್ಯದೇವರು ಎಂದು ಹೇಳುತ್ತಾರೆ. ಈರನಾಗಮ್ಮನನ್ನು ಶ್ರದ್ಧೆಯಿಂದ ಭಕ್ತಿಯಿಂದ ಪೂಜಿಸುತ್ತಾರೆ. ಈರನಾಗಮ್ಮನನ್ನು ಕೆಲವರು ಗ್ರಾಮದೇವತೆಯ ರೂಪವೆಂದು ಮತ್ತೆ ಕೆಲವರು ಸಮುದಾಯದ ಮಗಳು ಎಂದು ಭಾವಿಸಿದ್ದಾರೆ.

**ಪೋತರಾಜ :** ಶರಣನಂತೆ ಸ್ಥಾನಪಡೆದ ಪೋತರಾಜ ಸಾಮಾನ್ಯ ಪಶುಪಾಲಕನಾಗಿದ್ದ. ಈತನು ಮುನಿಸ್ವಾಮಿಯ ಮಗ. ಚಿಕ್ಕ ವಯಸ್ಸಿನಲ್ಲಿಯೇ ದನ ಕಾಯುತ್ತಿದ್ದ. ಸೊಂಟಕ್ಕೆ ಬೇವಿನ ಸೊಪ್ಪು ಕಟ್ಟಿಕೊಳ್ಳುವುದು ಉದ್ದನೆಯ ಚಾಟಿ ಮಾಡಿಕೊಳ್ಳುವುದು ಈತನ ಹವಾಸ್ಯವಂತೆ. ತಂದೆಯಂತೆಯೇ ಸ್ಥಳೀಯ ಜನನಾಯಕನೂ, ಆಡಳಿತಗಾರನೂ ಆಗಿದ್ದನು. ಸ್ಥಳೀಯ ಆಡಳಿತದಲ್ಲಿ ಪ್ರಮುಖನಾಗಿದ್ದನು. ಇತರೆ ಸಮುದಾಯದೊಂದಿಗೆ ನೇರಸಂಬಂಧವನ್ನಿರಿಸಿಕೊಂಡಿದ್ದನು. ಆದರೆ ಪೋತರಾಜ ಜೀವಿಸಿದ್ದ ಕಾಲವಾಗಲಿ, ಸ್ಥಳನಾಮ ಎಲ್ಲಿಯೂ ದಾಖಲಾಗಿಲ್ಲ. ಬೇಡರರಲ್ಲಿ ಗಾವು ಜಗಿಯುವ ಪೋತರಾಜ ಗ್ರಾಮ ದೇವತೆಗಳಲ್ಲಿ ಕಂಡು ಬಂದರೇ ಭಿಕ್ಷೆ ಬೇಡುವ ಸಂದರ್ಭದಲ್ಲಿ ಪೋತರಾಜ ಸಿಂಧೋಳ್ಳು ಸಮುದಾಯದಲ್ಲಿ ಕಂಡುಬರುತ್ತಾನೆ. ಆದರೆ ಬೇಡರ ಪೋತರಾಜ ಮತ್ತು ಸಿಂಧೋಳ್ಳು ಪೋತರಾಜನಿಗೂ ಯಾವುದೇ ಸಂಬಂಧವಿರುವುದಿಲ್ಲ. ಪೋತರಾಜ ಸಿಂಧೋಳ್ಳು ಸಮುದಾಯದ ಸಾಂಸ್ಕೃತಿಕ ವೀರ.

ಪೋತರಾಜ ತನ್ನ ಜೀವಿತ ಅವಧಿಯಲ್ಲಿ ಭಿಕ್ಷಾಟನೆಯನ್ನು ಕಾಯಕವನ್ನಾಗಿ ಮಾಡಿಕೊಂಡಿದ್ದ ಶರಣ. ತಲೆಗೆ, ಸೊಂಟಕ್ಕೆ ಬೇವಿನ ಸೊಪ್ಪು ಕಟ್ಟಿಕೊಂಡು ಮಣ್ಣಿನ ಮೂರ್ತಿಯೊಂದನ್ನು ಬುಟ್ಟಿಯಲ್ಲಿ

ಇಟ್ಟುಕೊಂಡು ಬೀದಿ ಬೀದಿ ತಿರುಗುತ್ತ, ಅಲ್ಲಲ್ಲಿ ಚಾಟಿಯಿಂದ ತನ್ನ ಮೈಯಿಗೆ ಹೊಡೆದುಕೊಳ್ಳುತ್ತಾ ಕುಣಿಯುತ್ತಿದ್ದನು. ಕಾಯಕದ ಮಾರ್ಗವನ್ನು ನಂಬಿಕೊಂಡು ಜನಗಳಿಗೆ ಹಾಡುಗಳಿಂದ ಹಾರೈಸುವುದರ ಮೂಲಕ ಜನತೆಗೆ ಬೋಧಿಸುತ್ತಿದ್ದನು.

"ಅವ್ವ ಗೌಡ್ರರಿಗೆ ಕಷ್ಟವನ್ನು ನಿವಾರಣ ಮಾಡವ್ವ
ಶ್ಯಾನಭೋಗರಿಗೆ ಸುಖವನ್ನು ಕೊಡವ್ವ
ತಳವಾರನಿಗೆ ಶಕ್ತಿಯನ್ನು ನೀಡವ್ವ
ಅಗಸನಿಗೆ ದಣಿವು ನೀಡವ್ವ
ಆಚಾರ್ಯರಿಗೆ ದೈವ ಬಲನೀಡವ್ವ
ಮಾದಿಗನಿಗೆ ಕಾಳು ಕಡಿ ನೀಡವ್ವ
ಊರಿನಲ್ಲಿ ಸುಖವನ್ನು ಕೊಡವ್ವ
ಎಲ್ಲರಿಗೂ ಮಕ್ಕಳ ಸಂತಾನ ಕೊಡವ್ವ
ರೋಗರುಜನಿಗಳಿಗೆ ನಿವಾರಣ ಮಾಡವ್ವ"

ಎಂಬ ಹಾಡುಗಳನ್ನು ಹಾಡುತ್ತಾ, ಜನಗಳಿಗೆ ಸಂಪ್ರೀತನಾಗಿದ್ದನು. ಅದರಲ್ಲಿಯೇ ದಾಸೋಹವನ್ನು ಸಾಗಿಸುತ್ತಿದ್ದ. ಮೌಖಿಕ ವಚನಗಳನ್ನು ರಚಿಸಿದನು.

### ಅಧ್ಯಯನಕಾರರ ದೃಷ್ಠಿಯಲ್ಲಿ ಕರ್ನಾಟಕದ ಬುಡಕಟ್ಟುಗಳು

ದೇಶಿಯ ನೆಲದಲ್ಲಿ ಬ್ರಿಟಿಷ್‌ರ ಆಗಮನದ ನಂತರದಲ್ಲಿ ಬುಡಕಟ್ಟುಗಳ ಅಧ್ಯಯನ ಆರಂಭವಾಯಿತು ಎಂದರೆ ತಪ್ಪಾಗಲಾರದು. ಬ್ರಿಟಿಷ್ ಅಧಿಕಾರಿಗಳು ಮತ್ತು ಪಾದ್ರಿಗಳು ತಮ್ಮ ಅನುಕೂಲತೆಗಾಗಿ ಬುಡಕಟ್ಟುಗಳ ಅಧ್ಯಯನಗಳನ್ನು ಕೈಗೊಂಡರು. ಬ್ರಿಟಿಷ್ ಅಧಿಕಾರಿಗಳು ಬುಡಕಟ್ಟು ಸಮುದಾಯಗಳು ಇರುವ ಸ್ಥಳಗಳಲ್ಲಿ ಹೋದರೆ, ಕಂದಾಯ ವಸೂಲಿ ಮಾಡಲು ಅಥವಾ ತಮ್ಮನ್ನು ಬಂಧಿಸಿ ಗುಲಾಮರನ್ನಾಗಿ ಮಾಡಿಕೊಳ್ಳಲು ಬಂದಿದ್ದಾರೆ ಎಂದು ಭಯಪಟ್ಟು ಕಾಡಿನಲ್ಲಿ ತಲೆಮಾರಿಸಿಕೊಂಡು ಓಡಾಡುತ್ತಿದ್ದರು. ಒಮ್ಮೆ ಬ್ರಿಟಿಷ್ ಅಧಿಕಾರಿಗಳು ಬುಡಕಟ್ಟು ಸಮುದಾಯದಲ್ಲಿ ಭಾಗವಹಿಸಿ ಅವರ ರೂಢಿ ಸಂಪ್ರದಾಯಗಳು, ಆಚಾರ ವಿಚಾರಗಳ ಕುರಿತು ಮಾಹಿತಿ ಸಂಗ್ರಹಿಸುವುದು ಅತ್ಯಂತ ಕಠಿಣ ಕೆಲಸವಾಗಿತ್ತು. ತಮ್ಮ ಸಂಗತಿಗಳನ್ನು ಆ ಜನ ಅಷ್ಟು ಸುಲಭವಾಗಿ ಬಿಟ್ಟುಕೊಡುವುದಿಲ್ಲ. ಹೊರಗಿನವರೆಲ್ಲರನ್ನು ಅವರು ಸಂಶಯದಿಂದಲೇ ಕಾಣುತ್ತಾರೆ. ಇಂಥ ವಾತಾವರಣದಲ್ಲಿಯೂ ಸ್ಥಳೀಯರು ವಿದೇಶೀಯರಿಗೆ ಸಹಕಾರ ನೀಡದೆ ಹೋದದ್ದರಿಂದ ಮಾಹಿತಿ ಸಂಗ್ರಹಣೆಯಲ್ಲಿ ತೊಡಕುಂಟಾಗಿರಬೇಕೆಂದು[39] ಪಡುತ್ತಾರೆ.

ಆರಂಭದಲ್ಲಿ ಬುಡಕಟ್ಟು ಸಮುದಾಯಗಳ ಬಗೆಗೆ ಭಾರತದಲ್ಲಿ ಅದರಲ್ಲಿಯೂ ಉತ್ತರ ಭಾರತದಲ್ಲಿ ತೀವ್ರವಾದ ಮತ್ತು ವ್ಯಾಪಕವಾದ ಅಧ್ಯಯನಗಳು ನಡೆದವು. ಇಂಥ ಅಧ್ಯಯನಗಳಲ್ಲಿ ಪ್ರಮುಖ ಪಾತ್ರವಹಿಸಿದ ವ್ಯಕ್ತಿ ವೆರಿಯರ್ ಎಲ್ವಿನ್. ಈತ ಇಂಗ್ಲೆಂಡಿನಿಂದ ಕ್ರೈಸ್ತಧರ್ಮ ಪ್ರಚಾರಕ್ಕಾಗಿ ಬಂದ ಪಾದ್ರಿ. ಬುಡಕಟ್ಟುಗಳ ಅಧ್ಯಯನವನ್ನು ಆರಂಭ ಮಾಡಿಕೊಂಡು ನಂತರ ತನ್ನ ಧರ್ಮ ಪ್ರಚಾರ

ಕಾರ್ಯವನ್ನೇ ಕೈ ಬಿಟ್ಟಂತ ವ್ಯಕ್ತಿ. ಬುಡಕಟ್ಟು ಸಂಸ್ಕೃತಿಯಲ್ಲಿ ಆಸಕ್ತಿ ಮೂಡಿ ಅವರ ಏಳಿಗೆ, ಸಮಸ್ಯೆ ಇತ್ಯಾದಿಗಳಿಗೆ ಸ್ಪಂದಿಸುತ್ತಾ, ಬುಡಕಟ್ಟು ಕನ್ಯೆಯನ್ನು ಮದುವೆ ಮಾಡಿಕೊಂಡರು. ಬುಡಕಟ್ಟು ಜನರ ಸಂಸ್ಕೃತಿಯನ್ನು ಉಳಸಿಕೊಂಡು, ಸ್ವಾತಂತ್ರ್ಯವಾಗಿ ಜೀವಿಸಿದ್ದಲ್ಲಿ ಮುಂದೆ ನಿಧಾನವಾಗಿ ಬದಲಾವಣೆ ಹೊಂದುತ್ತಾರೆ. ಎಂದು ಹೇಳಿದರು. ಇಂದು ತಮ್ಮ ಸ್ವಂತಶಕ್ತಿ ಮೇರೆಗೆ ಬುಡಕಟ್ಟು ಸಮುದಾಯಗಳು ಬದಲಾವಣೆ ಹೊಂದುತ್ತಿವೆ ಎಂದು ಹೇಳುತ್ತಾರೆ. ಇವರು ದಕ್ಷಿಣ ಭಾರತದಲ್ಲಿ ನೀಲಗಿರಿಯ ತೋಡರ ಬಗ್ಗೆ ಮತ್ತು ನಾಗಾ ಸಂಸ್ಕೃತಿಯನ್ನು ಅಧ್ಯಯನ ಮಾಡಿದ್ದಾರೆ. ಇವರಲ್ಲದೇ ಮಿಲ್ಸ್ ಸ್ಮಿತ್, ಜಿ.ಎಚ್. ಹಟ್ಟನ್, ಜೆ.ಪಿ.ಮಿಲ್ಸ್ ಹೈಮನ್ ಡಾರ್ಫೆ ಇಂಥವರೆಲ್ಲ ಉತ್ತರ ಭಾರತದ ಬುಡಕಟ್ಟುಗಳಾದ ಹಂಗಾಮಿ, ನಾ, ಸೆಯಾ ಕುರಿತು ಅಧ್ಯಯನಗಳನ್ನು ನಡೆಸಿದ್ದಾರೆ.

ದಕ್ಷಿಣ ಭಾರತದಲ್ಲಿ ಬುಡಕಟ್ಟುಗಳ ಅಧ್ಯಯನ ಹೆಚ್ಚಾಗಿ ನಡೆಯಲಿಲ್ಲ ಎಂದೇ ಹೇಳಬಹುದು. ಕ್ರಿ.ಶ. ೧೯೦೦ರಲ್ಲಿ ಎಡ್ಗರ್ ಥರಸ್ಟನ್ ಮತ್ತು ಕೆ. ರಂಗಾಚಾರಿ ಅವರ "Castes and Tribes of Southern India" ಎಂಬ ಕೃತಿಯು ದಕ್ಷಿಣ ಭಾರತದಲ್ಲಿ ಹಲವು ಸಮುದಾಯ, ಬುಡಕಟ್ಟುಗಳ ಸ್ಥೂಲ ವಿವರಣೆಯನ್ನು ಒಳಗೊಂಡಿದೆ. ಥರಸ್ಟನ್ ಅವರ ಒಟ್ಟು ಏಳು ಸಂಪುಟಗಳಲ್ಲಿ ಬುಡಕಟ್ಟುಗಳ ಪರಿಚಯ ಮಾಡಿಕೊಟ್ಟಿದ್ದಾರೆ.

ಕರ್ನಾಟಕದಲ್ಲಿ ಇಂಥದೇ ಒಂದು ಕಾರ್ಯ ಅನಂತಕೃಷ್ಣ ಅಯ್ಯಾರ್ ಮತ್ತು ಎಚ್.ಜಿ. ನಂಜುಂಡಯ್ಯ ಅವರಿಂದ ಮಾನವಶಾಸ್ತ್ರೀಯ ಅಧ್ಯಯನ ಸಮೀಕ್ಷೆ ನಡೆಯಿತು. ಕರ್ನಾಟಕದಲ್ಲಿ ಯಾವುದೇ ವಿದ್ವಾಂಸರು ಮತ್ತು ಸಂಶೋಧಕರು ಬುಡಕಟ್ಟುಗಳ ಬಗ್ಗೆ ಅಧ್ಯಯನವನ್ನು ಕೈಗೊಳ್ಳಬೇಕಾದರೆ ಅಯ್ಯಾರ್ ಮತ್ತು ನಂಜುಂಡಯ್ಯನವರ "The Mysore Castes and Tribes" ಕೃತಿ ಮೂಲಕವಾಗಿಯೇ ಪ್ರವೇಶ ಪಡೆಯಬೇಕು. ಈ ಇಬ್ಬರೂ ಮಹಾನಾಯಕರು ಆಗಿನ ಮೈಸೂರು ಪ್ರಾಂತ್ಯದಲೆಲ್ಲ ಪ್ರವಾಸ ಮಾಡಿ, ಎಲ್ಲ ಬುಡಕಟ್ಟುಗಳ ಮುಖಂಡರನ್ನು ಭೇಟಿ ಮಾಡಿ ಮಾಹಿತಿ ಸಂಗ್ರಹಿಸಿ, ನಾಲ್ಕು ಸಂಪುಟಗಳನ್ನು ಹೊರತಂದಿದ್ದಾರೆ.

ಮೈಸೂರಿನಲ್ಲಿರುವ 'Anthropolgical Survey of India' ಸಂಸ್ಥೆಯು ಮಾನವಶಾಸ್ತ್ರಜ್ಞರು ಸೋಲಿಗರು, ಇರುಳರು, ಜೇನುಕುರುಬರು ಮೊದಲಾದ ಬುಡಕಟ್ಟುಗಳ ಬಗ್ಗೆ ಮಾನವಶಾಸ್ತ್ರದ ದೃಷ್ಟಿಯಿಂದ ಸಂಶೋಧನಾ ಅಭ್ಯಾಸ ನಡೆಸಿದ್ದಾರೆ. ಈ ಹಿನ್ನೆಲೆಯಲ್ಲಿ ಬುಡಕಟ್ಟುಗಳ ಅಧ್ಯಯನ ವೈಜ್ಞಾನಿಕ ನೆಲೆಗಳನ್ನು ಕುರಿತು ಅಧ್ಯಯನ ಮಾಡುವುದು ಈ ಪ್ರಬಂಧದ ಮುಖ್ಯ ಉದ್ದೇಶವಾಗಿದೆ.

ಸ್ವಾತಂತ್ರ್ಯ ನಂತರ ಬುಡಕಟ್ಟು ಸಮುದಾಯಗಳ ಬಗ್ಗೆ ಸಂಶೋಧನಾ ಅಧ್ಯಯನಗಳು ಆರಂಭಗೊಂಡಿವೆ. ಎಲ್.ಜಿ.ಹಾವನೂರು ಅವರು ಸಿದ್ಧಪಡಿಸಿರುವ "ಕರ್ನಾಟಕ ಬ್ಯಾಕ್‌ವರ್ಡ್ ಕಮಿಷನ್ ರಿಪೋರ್ಟ್ ೧೯೭೩"ನ ವರದಿಯಲ್ಲಿ ಹಿಂದುಳಿದ ವರ್ಗಗಳು ಸಾಮಾಜಿಕವಾಗಿ, ರಾಜಕೀಯವಾಗಿ, ಆರ್ಥಿಕವಾಗಿ ಸುಧಾರಣೆಗೊಳ್ಳಲು ಸಲಹೆಗಳನ್ನು ನೀಡಿದ್ದಾರೆ. ಅವರಿಗೆ ಉತ್ತಮ ರೀತಿಯ ಸೌಲಭ್ಯಗಳನ್ನು ಕಲ್ಪಿಸಿಕೊಡುವುದರ ಬಗೆಗೆ ವಿವರಿಸಿದ್ದಾರೆ.

ನಮ್ಮ ರಾಜ್ಯದ ಎಲ್ಲಾ ವಿಶ್ವವಿದ್ಯಾಲಯಗಳಲ್ಲಿ ಕನ್ನಡ ಮತ್ತು ಜಾನಪದ ವಿಭಾಗಗಳಲ್ಲಿ ಬುಡಕಟ್ಟು

ಸಮುದಾಯಗಳ ಬಗ್ಗೆ ಅಧ್ಯಯನ ಮಾಡುತ್ತಿದ್ದಾರೆ. ಅದರಲ್ಲೂ ಕನ್ನಡ ವಿಶ್ವವಿದ್ಯಾಲಯದಲ್ಲಿ ಬುಡಕಟ್ಟು ಅಧ್ಯಯನ ವಿಭಾಗ ಇರುವುದರಿಂದ ಬುಡಕಟ್ಟು ಸಮುದಾಯಗಳ ಬಗೆಗೆ ಹೆಚ್ಚಿನ ರೀತಿಯಲ್ಲಿ ಅಧ್ಯಯನ ಮಾಡಲು ಅನುಕೂಲವಾಗಿದೆ. ಅನೇಕ ಸಂಶೋಧಕರು ಬುಡಕಟ್ಟು ಸಮುದಾಯಗಳ ಸಂಶೋಧನ ಅಧ್ಯಯನ ನಡೆಸಿದ್ದಾರೆ. ಡಾ. ತೀ.ನಂ.ಶಂಕರನಾರಾಯಣ ಅವರು 'ಕಾಡುಗೊಲ್ಲರ ಸಂಪ್ರದಾಯಗಳು ಮತ್ತು ನಂಬಿಕೆಗಳು' ಎಂಬ ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. ಪ್ರೊ. ಹಿ.ಚಿ.ಬೋರಲಿಂಗಯ್ಯ ಅವರು 'ಬುಡಕಟ್ಟುಗಳ ಲೋಕದೃಷ್ಟಿಕೋನ' ಎಂಬ ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. ಡಾ. ಕಾಳೇಗೌಡ ನಾಗವಾರ ಅವರು 'ಕಾಡುಗೊಲ್ಲರ ಬುಡಕಟ್ಟಿನ ಒಂದು ಹಟ್ಟಿ'ಯ ಬಗ್ಗೆ ವಿವರವಾದ ಅಧ್ಯಯನ ಮಾಡಿದ್ದಾರೆ. ಹಾಗೆಯೇ 'ಜುಂಜಪ್ಪ ಕಾವ್ಯ'ದ ಬಗ್ಗೆ ಡಾ. ಮೀರಾಸಾಬಿ ಹಳ್ಳಿ ಶಿವಣ್ಣ ಸಂಶೋಧನೆ ಮಾಡಿದ್ದಾರೆ. 'ಉತ್ತರ ಕನ್ನಡ ಜಿಲ್ಲೆಯ ಗೊಂಡ'ರ ಬಗ್ಗೆ ಡಾ. ಸಯ್ಯದ್ ಜಮೀರುಲ್ಲಾ ಷರೀಪ್ ಅವರು ವಿವರವಾದ ಸಾಂಸ್ಕೃತಿಕ ಪ್ರೌಢ ಪ್ರಬಂಧ ಬರೆದಿದ್ದಾರೆ. ಡಾ. ಪಿ.ಕೆ. ಖಂಡೋಬಾರವರು 'ಕರ್ನಾಟಕ ಲಂಬಾಣಿಗರು ಸಂಸ್ಕೃತಿ' ಬಗ್ಗೆ ಪ್ರೌಢ ಪ್ರಬಂಧವನ್ನು ರಚಿಸಿದ್ದಾರೆ. ಶ್ರೀ ಕೃಷ್ಣಮೂರ್ತಿ ಹನೂರು ಅವರು 'ಮ್ಯಾಸಬೇಡರ' ಬಗ್ಗೆ ಸಂಶೋಧನಾ ಮಾಡಿದ್ದಾರೆ. ಡಾ. ಕೆ.ಎಂ.ಮೈತ್ರಿಯವರು 'ಬೀದರ ಜಿಲ್ಲೆಯ ಗೊಂಡರು ಒಂದು: ಸಮಾಜಶಾಸ್ತ್ರೀಯ ಅಧ್ಯಯನ' ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. ಡಾ. ಕೇಶವನ ಪ್ರಸಾದ್‌ರವರು 'ಜನಪದ ಊಟೋಪಚಾರಗಳು' ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. 'ದಕ್ಷಿಣ ಕನ್ನಡ ಹಾಗೂ ಕಾಸರಗೋಡಿನ ದೇವಾಂಗ ಸಮುದಾಯದ ಅಧ್ಯಯನ' ಎಂಬ ವಿಷಯದ ಮೇಲೆ ಡಾ. ಮೀನಾಕ್ಷಿ ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. 'ಗೋಸಂಗಿ ಸಮುದಾಯ ಒಂದು: ಅಧ್ಯಯನ' ಎಂಬ ವಿಷಯದ ಮೇಲೆ ಡಾ. ವಿ.ಎಸ್.ಮಾರುತಿ ಅವರ ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. 'ಬಳ್ಳಾರಿ ಮತ್ತು ಆಂಧ್ರ ಗಡಿ ಭಾಗದ ಹಗಲು ವೇಷಗಾರರು: ಒಂದು ಅಧ್ಯಯನ' ಎಂಬ ವಿಷಯವನ್ನಾಧರಿಸಿ ಡಾ. ವೆಂಕಟಗೌಡ ಪ್ರೌಢ ಪ್ರಬಂಧವನ್ನು ಬರೆದಿದ್ದಾರೆ. ಹೀಗೆ ಸಮುದಾಯಗಳ ಬಗ್ಗೆ ಸಮಾಜಶಾಸ್ತ್ರಜ್ಞರು, ಮಾನವಶಾಸ್ತ್ರಜ್ಞರು, ಅರ್ಥಶಾಸ್ತ್ರಜ್ಞರು, ಜಾನಪದ ವಿದ್ವಾಂಸರು, ಬುಡಕಟ್ಟು ಸಮುದಾಯಗಳ ಅಧ್ಯಯನವನ್ನು ಕೈಗೊಂಡಿದ್ದಾರೆ.

ಕರ್ನಾಟಕ ಸಾಹಿತ್ಯ ಆಕಾಡೆಮಿ ೧೯೯೩ರಲ್ಲಿ ಕನ್ನಡದಲ್ಲಿ ಉಪಸಂಸ್ಕೃತಿಗಳ ಅಧ್ಯಯನವನ್ನು ಆರಂಭಿಸಿದೆ. ಬುಡಕಟ್ಟು ಸಮುದಾಯಗಳ ಕುರಿತು ವಿಶಿಷ್ಠ ರೀತಿಯಲ್ಲಿ ಅಧ್ಯಯನವನ್ನು ಕೈಗೊಂಡು, ಸುಮಾರು ೩೬ ಕೃತಿಗಳನ್ನು ಹೊರ ತಂದಿದ್ದಾರೆ. ಬರಗೂರು ರಾಮಚಂದ್ರಪ್ಪನವರು ಸಾಹಿತ್ಯ ಆಕಾಡೆಮಿಯ ಅಧ್ಯಕ್ಷರಾಗಿದ್ದ ಅವಧಿಯಲ್ಲಿ ಅವರ ವೈಯಕ್ತಿಕ ಪ್ರಯತ್ನ ಹಾಗೂ ಸಮುದಾಯದ ಕಾಳಜಿಯಿಂದ ಉಪಸಂಸ್ಕೃತಿ ಮಾಲೆಗಳನ್ನು ಹೊರತಂದಿದ್ದಾರೆ. ಅವುಗಳಲ್ಲಿ ದುರುಗಮುರುಗಿ ಸಂಸ್ಕೃತಿ, ಸಿಂದ್‌ಮಾದಿಗರ ಸಂಸ್ಕೃತಿ, ಸೋಲಿಗರ ಸಂಸ್ಕೃತಿ, ಹಾಲಕ್ಕಿ ಒಕ್ಕಲಿಗರ ಸಂಸ್ಕೃತಿ, ದೊಂಬರ ಸಂಸ್ಕೃತಿ, ಸಿದ್ದಿಯರ ಸಂಸ್ಕೃತಿ, ಹಗಲುವೇಷಗಾರ ಸಂಸ್ಕೃತಿ ಹೀಗೆ ೩೬ ಬುಡಕಟ್ಟು ಸಮುದಾಯಗಳನ್ನು ಕುರಿತು "ಬುಡಕಟ್ಟು ಉಪ ಸಂಸ್ಕೃತಿ ಮಾಲೆ" ಎಂಬ ಶೀರ್ಷಿಕೆಯಲ್ಲಿ ಹೊರತಂದಿದ್ದಾರೆ.

ಕರ್ನಾಟಕದ ಜಾನಪದ ಮತ್ತು ಯಕ್ಷಗಾನ ಆಕಾಡೆಮಿಯು ಪ್ರೊ. ಎಚ್.ಜೆ. ಲಕ್ಕಪ್ಪಗೌಡ ಇವರ ಅಧಯಕ್ಷತೆಯಲ್ಲಿ ಕರ್ನಾಟಕ ಬುಡಕಟ್ಟುಗಳು ಎಂಬ ಶೀರ್ಷಿಕೆಯಲ್ಲಿ ೨ ಸಂಪುಟಗಳನ್ನು

ಹೊರ ತಂದಿದ್ದಾರೆ. ಹಲಸಿಗರು, ಸಿದ್ದಿಯರು, ಯೆರವರು, ಹಕ್ಕಿಪಿಕ್ಕಿಯವರು ಇತ್ಯಾದಿ ಸಮುದಾಯಗಳ ಬಗ್ಗೆ ಅಧ್ಯಯನ ನಡೆಸಿದ್ದಾರೆ.

ಭಾರತ ಸರ್ಕಾರವು ಕರ್ನಾಟಕದಲ್ಲಿ ಸುಮಾರು ೬೩ ಪರಿಶಿಷ್ಟ ಬುಡಕಟ್ಟುಗಳಿವೆ ಎಂಬುದಾಗಿ ಸೂಚಿಸುತ್ತದೆ. ಈ ಪಟ್ಟಿಗೆ ಸೇರದಿರುವ ಕೆಲವು ಬುಡಕಟ್ಟುಗಳನ್ನು 'ಅಲೆಮಾರಿ ಬುಡಕಟ್ಟು'(Nomadic Tribes)ಗಳೆಂದು ಇನ್ನೂ ಕೆಲವು ಬುಡಕಟ್ಟುಗಳನ್ನು 'ಅರೆ ಅಲೆಮಾರಿ ಬುಡಕಟ್ಟು'(Seminomadic Tribes)ಗಳೆಂದು ಇವುಗಳನ್ನು ಇತರೆ ಹಿಂದುಳಿದ ಬುಡಕಟ್ಟುಗಳೆಂದು ಪರಿಗಣಿಸಲಾಗಿದೆ. ಸಿಂಧೋಳ್ಳು ಸಮುದಾಯದ ಬಗ್ಗೆ ಕರ್ನಾಟಕ, ಮಹಾರಾಷ್ಟ್ರ ಹಾಗೂ ಆಂಧ್ರ ಪ್ರದೇಶದಲ್ಲಿ Scheduled Caste ಪಟ್ಟಿಯಲ್ಲಿರುವರು. ಈ ಸಮುದಾಯದ ಬಗ್ಗೆ ಕೆಲವೊಂದು ಲೇಖನಗಳು, ಉಪಸಂಸ್ಕೃತಿ ಮಾಲೆಯಲ್ಲಿ ಪ್ರಕಟಗೊಂಡಿರುವುದು ಗಮನಾರ್ಹ.

'The Scheduled Caste and The Scheduled Tribes' ಕೆ.ಎಸ್.ಸಿಂಗ್ ಅವರು ಸಿಂಧೋಳ್ಳು ಸಮುದಾಯದ ಬಗ್ಗೆ ಲೇಖನವನ್ನು ಇಂಗ್ಲೀಷ್‌ನಲ್ಲಿ ಪ್ರಕಟಿಸಿದ್ದಾರೆ.

ದಾಸನೂರು ಕೂಸಣ್ಣನವರು "ಶೋಷಿತ ಜಂಗಮರ ಮೀಸಲಾತಿ" ಎಂಬ ಕೃತಿಯಲ್ಲಿ ಸಿಂಧೋಳ್ಳು ಸಮುದಾಯದ ಬಗ್ಗೆ ಉಲ್ಲೇಖಿಸಿದರೆ, ಸಿಂಧೋಳ್ಳು ಎಂಬ ಪದ ಸಂಸ್ಕೃತದ 'ಸೈರೇಂದ್ರಿ'(Common Women) ಎಂಬ ಪದದಿಂದ ನಿಷ್ಪತ್ತಿಯಾಗಿದೆ ಎಂದು ಹೇಳಿದ್ದಾರೆ. ಆಂಧ್ರ ಪ್ರದೇಶದಲ್ಲಿ ಮಾದಿಗ ಸಮುದಾಯ ಹಬ್ಬ ಮತ್ತು ಮದುವೆ ಆಚರಣೆಗಳಲ್ಲಿ ಸಿಂಧೋಳ್ಳುರು ಬುರ್ರ ಬುರ್ರವಾದ್ಯ, ವೇಷ ಹಾಕಿಕೊಂಡು ನರ್ತಿಸುವ ನೃತ್ಯಗಾರ್ತಿಯರು ಎಂದು ಹೇಳಿದ್ದಾರೆ.

ಗೀತಾನಾಗಭೂಷಣ ಅವರು 'ದುರುಗ ಮುರುಗಿಯರ ಸಂಸ್ಕೃತಿ' ಎಂಬ ಕೃತಿಯನ್ನು ರಚಿಸಿದ್ದಾರೆ. ಇದು ಈ ಸಮುದಾಯದ ಬಗೆಗೆ ಉಪಯುಕ್ತ ಮಾಹಿತಿಯನ್ನು ನೀಡುತ್ತದೆ. ಇವರು ವಾಸಿಸುವ ಪ್ರದೇಶ, ಭಿಕ್ಷಾಟನೆಯ ಚಿತ್ರಣ, ಮದುವೆ ಆಚರಣೆಗಳು, ಮೌಖಿಕ ಸಾಹಿತ್ಯ ಕುರಿತು ಅಧ್ಯಯನ ಮಾಡಿದ್ದಾರೆ.

ಡಾ. ಚೆನ್ನಣ್ಣವಾಲೀಕಾರ ಅವರು 'ಸಮಗ್ರ ಜಾನಪದ ಸಂಪ್ರಬಂಧ ಸಂಪುಟ'ದ ದುರುಗ ಮುರುಗಿ ಎಂಬ ಲೇಖನವನ್ನು ಬರೆದಿದ್ದಾರೆ. ಈ ಲೇಖನದಲ್ಲಿ ದುರುಗ-ಮುರುಗಿಯರು ವಾಸಿಸುವ ಪ್ರದೇಶ, ಆಡುಭಾಷೆ, ನಂಬಿಕೆ, ಸಂಪ್ರದಾಯಗಳು, ಹಬ್ಬ ಹರಿದಿನ, ವೇಷಭೂಷಣಗಳು ಕುರಿತು ೬ ಪುಟಗಳಷ್ಟು ದೀರ್ಘಲೇಖನವನ್ನು ಬರೆದಿದ್ದಾರೆ.

ಡಾ. ಕೆ.ಆರ್.ದುರ್ಗಾದಾಸ್ ಅವರು 'ಕರ್ನಾಟಕ ಬುಡಕಟ್ಟುಗಳ ಸಂಪುಟ'ದಲ್ಲಿ ದುರುಗ ಮುರುಗಿಯರ ಬಗೆಗೆ ಲೇಖನವನ್ನು ರಚಿಸಿದ್ದಾರೆ. ಇವರು ಈ ಸಮುದಾಯ ವಾಸಿಸುವ ನೆಲೆಗಳು, ಸಾಮಾಜಿಕ ಜೀವನ, ಕಸುಬು, ಮದುವೆ, ಬಾಲ್ಯವಿವಾಹ ಮೊದಲಾದ ಅಂಶಗಳ ಕಡೆಗೆ ಈ ಲೇಖನ ಗಮನಹರಿಸಿದೆ. ಡಿ. ಲೋಕರಾಜ ಅವರು 'ಬಳ್ಳಾರಿ ಜಿಲ್ಲೆಯ ದುರುಗ ಮುರುಗಿಯರು ಒಂದು ಸಮಾಜಶಾಸ್ತ್ರೀಯ ಅಧ್ಯಯನ ಎಂಬ ವಿಷಯದ ಮೇಲೆ ಎಂ.ಫಿಲ್ ಪದವಿಗಾಗಿ ಸಲ್ಲಿಸಿದ ನಿಬಂಧವು ಅವರ ಸಾಂಸ್ಕೃತಿಕ ಚರಿತ್ರೆಯ ಮೇಲೆ ಬೆಳಕು ಚಲ್ಲುತ್ತದೆ. ದುರುಗಮುರಗಿಯರು ಮೂಲತಃ

ಆಂಧ್ರಪ್ರದೇಶದಿಂದ ಕರ್ನಾಟಕಕ್ಕೆ ವಲಸೆಬಂದಿದ್ದು ಇವರನ್ನು ಸಿಂಧೋಳ್ಳುರು ಎಂದು ಗುರುತಿಸಲಾಗಿದೆ. ಸಂಪ್ರಬಂಧದಲ್ಲಿ ಕ್ಷೇತ್ರಕಾರ್ಯ ಮಾಹಿತಿಯನ್ನು ಉಪಯೋಗಿಸಿಕೊಳ್ಳಲಾಗಿದೆ. ದುರುಗಮುರಗಿಯರ ಆಚಾರ-ವಿಚಾರ, ಭಿಕ್ಷಾವೃತ್ತಿ, ಪೋತರಾಜನ ಗಾವು ಜಿಗಿಯುವ ದೃಶ್ಯ ಮೊದಲಾದ ಸಂಗತಿಗಳನ್ನು ಈ ಸಂಪ್ರಬಂಧದಲ್ಲಿ ಚರ್ಚಿಸಲಾಗಿದೆ.

**ಅಡಿಟಿಪ್ಪಣಿಗಳು**

೧. ಭೈರೆಗೌಡ ಎಂ., ಇರುಳಿಗರ ಜಾನಪದ ಅಧ್ಯಯನ, ಸಿ.ವಿ.ಜಿ. ಪಬ್ಲಿಕೇಷನ್ ಬೆಂಗಳೂರು, ೨೦೦೧, ಪು.೧೪

೨. Thurston E., Castes and Tribes of Southern India, Vol.VI, Govt Press, P. 388

೩. ಯಾದಗಿರಿ ಶರ್ಮ., ಜಾನಪದ ಭಿಕ್ಷುಕ ಗಾಯಕಲು, ಉಸ್ಮಾನಿಯ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿರುವ ಅಪ್ರಕಟಿತ ಸಂಶೋಧನ ಪ್ರಬಂಧ, ಪು. ೫೫೯

೪. ತೆಲುಗು ನಿಘಂಟು, ತೆಲುಗು ವಿಶ್ವವಿದ್ಯಾಲಯ, ಹೈದರಾಬಾದ್, ಪು.೩೦೪

೫. ವಕ್ತೃ: ರಾಮಯ್ಯ (೬೦) ತಂದೆ ದುರುಗಪ್ಪ, ಸಿದ್ದೇಶ್ವರ ನಗರ ಹುಬ್ಬಳ್ಳಿ, ಸಂದರ್ಶನ ದಿ. ೧೯.೦೫.೨೦೦೩

೬. ವಕ್ತೃ: ದುರುಗಮ್ಮ (೪೨) ಗಂಡ ದಿ. ಕಣಪ್ಪ, ಎಲ್ಲಮ್ಮ ಕಾಲೋನಿ, ಕೊಳಗೇರಿರಸ್ತೆ, ರೈಲ್ವೇನಿಲ್ದಾಣ ಹತ್ತಿರ, ಮೈಸೂರು, ಸಂದರ್ಶನ ದಿ. ೦೫.೦೮.೨೦೦೪

೭. ವಕ್ತೃ: ಸಿಂಗಾರೆಪ್ಪ (೬೦) ತಂದೆ ರಾಜಪ್ಪ, ಗುಡಾರನಗರ, ಬಳ್ಳಾರಿ

೮. ಗೀತಾನಾಗಭೂಷಣ., ದುರುಗಮುರಗಿಯರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಆಕಾಡೆಮಿ, ಬೆಂಗಳೂರು, ಪು.೫

೯. ಡಾ. ಚಂದ್ರಶೇಖರ ಕಂಬಾರ., ಕರ್ನಾಟಕ ಜಾನಪದ ವಿಶ್ವಕೋಶ (ದುರುಗಮುರಗಿಯರ ಲೇಖನವನ್ನು ಆಯ್ಕೆ ಮಾಡಿಕೊಳ್ಳಲಾಗಿದೆ) ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ಪು. ೧೦೩೮-೩೯

೧೦. ಚನ್ನಣ್ಣವಾಲೀಕಾರ., ಸಮಗ್ರ ಜಾಪನದ ಸಂಪ್ರಬಂಧ ಸಂಪುಟ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಬಡೇಪುರ ಕಾಲೋನಿ, ಗುಲ್ಬರ್ಗಾ, ಪು. ೧೪೪

೧೧. ಕೆ.ಆರ್.ದುರ್ಗಾದಾಸ್., ಕರ್ನಾಟಕ ಬುಡಕಟ್ಟುಗಳ ಸಂಪುಟ-೨, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡೆಮಿ, ಬೆಂಗಳೂರು, ಪು. ೪೪೮

೧೨. ಅರ್ಜುನ ಗೊಳಸಂಗಿ., ದಲಿತರ ಬದುಕು ಮತ್ತು ಸಂಸ್ಕೃತಿಯ ಜಾನಪದೀಯ ಅಧ್ಯಯನ, ವಿಮೋಚನ ಪ್ರಕಾಶನ, ಅಥಣಿ, ೨೦೦೦, ಪು.೯೪

೧೩. ವಕ್ತೃ: ರಾಹುಲ್ ನಾಗಪ್ಪ, (೪೦) ಅಧ್ಯಕ್ಷರು, ಸಿಂಧೋಳ್ಳು ಸಮಾಜ ಕಲ್ಯಾಣ ಸಂಘ, ಸಿಂಧೋಳ್ಳು ಆಶ್ರಯ ಕಾಲೋನಿ, ಕಂಪ್ಲಿ, ಸಂದರ್ಶನ ದಿ. ೧೫.೦೮.೨೦೦೪

೧೪. ಅವರೇ

೧೫. ವಕ್ತೃ: ಸಿಂಗಾರೆಪ್ಪ (೬೦) ತಂದೆ ರಾಜಪ್ಪ ಗುಡಾರನಗರ, ಬಳ್ಳಾರಿ

೧೬. ಬಸವರಾಜ ಡಬ್ಬ್ಲ್ಯು., 'ಸಿಂಧೋಳ್ಳು ಜನಾಂಗದ ಬವಣೆ', ಜನಪದ, ಜುಲೈ-೨೦೦೪, ಪು. ೫೦

೧೭. ವಕ್ತೃ: ಸಿಂಗಾರೆಪ್ಪ (೬೦) ತಂದೆ ರಾಜಪ್ಪ, ಗುಡಾರನಗರ, ಬಳ್ಳಾರಿ

೧೮. ಗಂಗಾಧರ ದೈವಜ್ಞ., ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೨

೧೯. ಶಂಕರನಾರಾಯಣ ತಿ.ನಂ., ಕಾಡುಗೊಲ್ಲರ ನಂಬಿಕೆಗಳು ಮತ್ತು ಆಚರಣೆಗಳು, ಪ್ರಸಾರಾಂಗ ಮೈಸೂರು ವಿಶ್ವವಿದ್ಯಾಲಯ, ಮೈಸೂರು, ಪು.

೨೦. ವಕ್ತೃ: ಜಂಬಣ್ಣ (೪೦) ತಂದೆ ಎಲ್ಲಪ್ಪ, ತೆಕ್ಕಲಕ್ಕೋಟೆ, ಶಿರಗುಪ್ಪ ತಾ. ಬಳ್ಳಾರಿ ಜಿಲ್ಲೆ.

೨೧. ವಕ್ತೃ: ಹುಸೇನಪ್ಪ ಮತ್ತು ನಾಗಪ್ಪ, ಭಾಗ್ಯನಗರ ಕೀರ್ತಿಕಾಲೋನಿ, ಕೊಪ್ಪಳ ಜಿ. ಸಂದರ್ಶನ ದಿನಾಂಕ ೧೭.೦೫.೨೦೦೩

೨೨. ವಕ್ತೃ: ದಿ. ವೆಂಕಟಪ್ಪ (೭೦) ಶಂಕ್ರಪ್ಪ ೪೦ ದರ್ಗಾಹತ್ತಿರ, ಕೂಡ್ಲಿಗಿ ತಾ. ಬಳ್ಳಾರಿ ಜಿ.

೨೩. ಅವರೇ

೨೪. ವಕ್ತೃ: ನಾಗಪ್ಪ ಡಿ., (೪೦) ಸಿಂಧೋಳ್ಳು ಆಶ್ರಯಕಾಲೋನಿ, ಕಂಪ್ಲಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.

೨೫. ವೀಣಾ., ಮನೆ ಸಮಾಜ ಮತ್ತು ಸಂಸ್ಕೃತಿ, ನೆಲೆಮನೆ ಪ್ರಕಾಶನ, ಮಂಡ್ಯ, ಶ್ರೀರಂಗಪಟ್ಟಣ, ಪು. ೬

## ಅಧ್ಯಾಯ - ೩

# ಸಮಾಜೋ - ಆರ್ಥಿಕ ಮತ್ತು ಶೈಕ್ಷಣಿಕ ಅಧ್ಯಯನ

೧. ಸಾಮಾಜಿಕತೆ

೨. ಆರ್ಥಿಕತೆ

೩. ಶೈಕ್ಷಣಿಕತೆ



# ಸಮಾಜೋ - ಆರ್ಥಿಕ ಮತ್ತು ಶೈಕ್ಷಣಿಕ ಅಧ್ಯಯನ

ಜಾಗತಿಕ ಸಮಾಜದಲ್ಲಿ ಹಲವು ಬಗೆಯ ಸಾಂಸ್ಕೃತಿಕ ವಿಚಾರಧಾರೆಗಳಿವೆ. ಆದಿಮ ಕಾಲದಿಂದ ಮೊದಲು ಮಾಡಿಕೊಂಡು ಅನುಸರಿಸಿಕೊಂಡು ಬಂದ ಅಥವಾ ನಂಬಿಕೊಂಡು ಬಂದ ರೂಢಿ ಸಂಪ್ರದಾಯಗಳನ್ನು ಕೆಲವು ಸಮುದಾಯಗಳು ಕಾಲಗರ್ಭದಲ್ಲಿ ಪರಿವರ್ತನೆಯ ಹೆಜ್ಜೆಯನ್ನು ಇಟ್ಟಿವೆ. ಇನ್ನೂ ಕೆಲವು ಸಮುದಾಯಗಳು ಆ ಮೂಲ ಪರಿಸರದ ವ್ಯಾಪ್ತಿಯಲ್ಲಿಯೇ ಜೀವಿಸುತ್ತಿವೆ. ಹೀಗೆ ಒಂದು ಸಮಾಜ ತನ್ನ ಮೂಲ ಸಾಂಸ್ಕೃತಿಕ ಚಹರೆಗಳನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡ ಅಥವಾ ಉಳಿಸಿಕೊಂಡು ಬಂದರೆ ಅಂಥಹ ಸಮುದಾಯವನ್ನು ಬುಡಕಟ್ಟು ಸಮುದಾಯವೆಂದು ಗುರುತಿಸ ಲಾಗುವುದು. ಸಾಮಾಜಿಕ ಜೀವನದ ಮೌಲ್ಯಗಳು ಸಮುದಾಯಿಕ ನೆಲೆಗಳಲ್ಲಿ ಇನ್ನು ಜೀವಂತವಾಗಿದೆ. ಏಣಿ ಶ್ರೇಣೀಕರಣ ವ್ಯವಸ್ಥೆಯಲ್ಲಿ ಇದು ಬುಡಕಟ್ಟು ಸಮುದಾಯಗಳ ಅನನ್ಯತೆಯ ಕುರುಹೂ ಹೌದು. ಬುಡಕಟ್ಟು ಜನರು ಬದುಕುತ್ತಾ, ತಮ್ಮ ಮೌಲ್ಯಗಳನ್ನು ಇಂದಿನವರೆಗೂ ಉಳಿಸಿಕೊಂಡು ಬಂದಿದ್ದಾರೆ. ಆ ಕಾರಣಕ್ಕಾಗಿಯೇ ಇಂಥ ಸಮುದಾಯವನ್ನು 'ಬುಡಕಟ್ಟು' ಸಮಾಜ ಎಂದು ಕರೆಯಲಾಗವುದು.

ಆರಂಭದ ಕಾಲದಲ್ಲಿ ಮಾನವ ಆಹಾರಕ್ಕಾಗಿ ಶೋಧನಡೆಸುತ್ತಿದ್ದ. ಇದು ಅಂದಿನ ಮಾನವನ ಆದ್ಯ ಕರ್ತವ್ಯವಾಗಿತ್ತು. ಜೀವಿಗಳ ವಿಕಾಸಕ್ರಮದ ಚರಿತ್ರೆಯನ್ನು ಅವಲೋಕಿಸಿದಾಗ ಪ್ರಾಣಿಗಳ ಹಾಗೆ ಮಾನವನು ಸಹ ಆಹಾರಕ್ಕಾಗಿ ಹುಡುಕುವುದನ್ನೇ ನಿತ್ಯ ಕಾಯಕ ಮಾಡಿಕೊಂಡಿದ್ದ. ಜೊತೆಗೆ ಕಾಲಕ್ಕೆ ತಕ್ಕಂತೆ ಬದಲಾಗುತ್ತಿದ್ದರಿಂದ ಹವಮಾನದಿಂದ ಉಂಟಾಗುತ್ತಿದ್ದ ತೊಂದರೆಗಳಿಂದ ತಪ್ಪಿಸಿಕೊಳ್ಳುವುದು ಅಂದಿನ ಮಾನವನಿಗೆ ಒಂದು ಪ್ರಶ್ನೆಯಾಗಿ ಪರಿಣಮಿಸಿತ್ತು. ಅಂದಿನ ಕಾಲದ ಮನುಷ್ಯನು ಹಣ್ಣು-ಹಂಪಲುಗಳನ್ನು ತಿಂದು, ಹಸಿಮಾಂಸ ಬೇಯಿಸಿಕೊಂಡು, ಎಲೆ-ಚರ್ಮಗಳನ್ನು ಹೊದ್ದುಕೊಂಡು ಗುಂಪಿನಲ್ಲಿ ವಾಸಮಾಡುತ್ತಿದ್ದ. ತದನಂತರ ಆಹಾರಕ್ಕಾಗಿ ಬೇಟೆಯಾಡುವುದು, ಮೀನು ಹಿಡಿಯುವುದು ಮುಂತಾದ ಕೆಲಸಗಳನ್ನು ಕೈಗೊಂಡು ಸಾಮಾಜಿಕ ಜೀವನವನ್ನು ನಡೆಸಲು ಪ್ರಾರಂಭಿಸಿದನು.

ಕಾಲ ಬದಲಾದಂತೆ ಒಂದೇ ಸ್ಥಳದಲ್ಲಿ ನಿಂತು ಸಾಧು ಪ್ರಾಣಿಗಳನ್ನು ಸಲುಹಿದನು. ಅವುಗಳನ್ನು ಕೃಷಿ ಉತ್ಪಾದನೆಗೆ ಬಳಸಿಕೊಂಡು ಸ್ವತಃ ಆಹಾರ ತಯಾರಿಕೆಯನ್ನು ಕಂಡುಕೊಂಡ. ಅನ್ಯ ವೃತ್ತಿಗಳೊಂದಿಗೆ ಧಾರ್ಮಿಕ ಭಿಕ್ಷಾಟನೆಯನ್ನು ಸಹ ಜೀವನ ರೂಪಿಸಿಕೊಳ್ಳಲು ಉಪಯೋಗಿಸಿಕೊಂಡನು. ನಾಗರಿಕತೆ ಬೆಳೆದಂತೆಲ್ಲ ಬುಡಕಟ್ಟು ಜನರು ತಮ್ಮ ಸಾಂಸ್ಕೃತಿಕ ಸೊಗಡನ್ನು ಬಿಡದೆ ತಮ್ಮ ಸಾಮಾಜಿಕ ನೆಲೆಯಲ್ಲಿಯೇ ಜೀವನ ಮಾಡಲು ಪ್ರಾರಂಭಿಸಿದರು. ಬುಡಕಟ್ಟು ಸಮುದಾಯವಾದ ಸಿಂಧೋಳ್ಳುರು ಕೂಡ ಸಾಮಾಜಿಕ ಜೀವನ ರೂಪಿಸಿಕೊಂಡಿದ್ದು ಕಾಡಿನಲ್ಲಿಯೇ. ಸಿಂಧೋಳ್ಳುರದ್ದು ಪಿತೃಪ್ರಧಾನ ಸಮಾಜ

ವ್ಯವಸ್ಥೆಯಾಗಿದೆ. ಕುಟುಂಬದಲ್ಲಿ ತಲೆದೋರುವ ಸಾಂಸಾರಿಕ ತೊಡಕುಗಳು, ಇಕ್ಕಟಿನ ಪರಿಸ್ಥಿತಿ ಹಾಗೂ ಒಬ್ಬರಿಗೆ ಅನ್ಯಾಯವಾದಾಗ ಸತ್ಯದ ಮಾರ್ಗೋಪಾಯಗಳನ್ನು ತಿಳಿಹೇಳುವುದು ಕುಲದ ಮುಖ್ಯಸ್ಥನ ಕರ್ತವ್ಯವಾಗಿದೆ.

ಗುಡಾರದಲ್ಲಿ ಏನಾದರೂ ಆರೋಗ್ಯದ ತೊಂದರೆಗಳು ಸಂಭವಿಸಿದರೆ, ತಮ್ಮ ಪಾರಂಪರಿಕ ವೈದ್ಯ ಪದ್ಧತಿಯಿಂದ ಗುಣಪಡಿಸಿಕೊಳ್ಳುವುದುಂಟು. ಇಂಥಹ ಸಂದರ್ಭದಲ್ಲಿ ಅನ್ಯರ ಹತ್ತಿರ ಔಷಧೋಪಚಾರ ಗಳನ್ನು ಸ್ವೀಕರಿಸಿದರೆ, ತಮ್ಮ ಕುಲದ ಪಾವಿತ್ರ್ಯತೆಗೆ ಧಕ್ಕೆಯುಂಟಾಗುತ್ತದೆ ಎಂಬುದು ಇವರ ನಂಬಿಕೆ. ಇದು ಕೆಲವು ಸಂದರ್ಭಗಳಲ್ಲಿ ನಿಷೇಧವೂ ಹೌದು. ಅದಕ್ಕಾಗಿಯೇ ಒಳ್ಳೆಯ ವೈದ್ಯಪದ್ಧತಿಯನ್ನು ಈ ಸಮುದಾಯ ರೂಢಿಸಿಕೊಂಡು ಬಂದಿದೆ. ಸಂಸಾರದ ನೆಲೆಯಲ್ಲಿ ಏನಾದರೂ ತೊಂದರೆಗಳು ಅನುಭವಿಸಿದಾಗ ಔಷಧಿಗಳನ್ನು ನೋಡಿಕೊಳ್ಳುವಂತೆ ಸಾಮಾಜಿಕವಾಗಿ ಆಸ್ಥೆವಹಿಸ ಲಾಗುವುದು. ಅವರದೇ ಆದ ಪ್ರತ್ಯೇಕ ಉಡುಗೆ ತೊಡಗೆಗಳು ಇವೆ. ಆದರೆ ಇಂದು ಅವೆಲ್ಲಾ ಅಷ್ಟು ಕಟ್ಟುನಿಟ್ಟಾಗಿ ಚಾಲನೆ ಯಲ್ಲಿಲ್ಲ. ಅವರ ಸಾಮಾಜಿಕ ಜೀವನ ಅತಂತ್ರ ಸ್ಥಿತಿಯನ್ನು ತಲುಪಿದೆ. ಅವರಿಗೆ ಊಟ ಮಾಡುವುದಕ್ಕೆ ಇನ್ನೊಬ್ಬರ ಮೇಲೆ ಆಶ್ರಯಿಸಬೇಕಾಗಿದೆ. ಭಿಕ್ಷೆ ಸಂಗ್ರಹದಿಂದಲೇ ಶುಭಕಾರ್ಯಕ್ರಮಗಳನ್ನು ನಿರ್ವಹಿಸ ಬೇಕಾಗಿದೆ. ಏನೆಲ್ಲಾ ಸಮಸ್ಯೆ ಕಂಡು ಬಂದರೂ ತಮ್ಮ ಸಾಮಾಜಿಕ ಜೀವನ ಕಾಂಕ್ರೀಟ್ ಶೈಲಿಯಲ್ಲಿ ಅನೂಚಾನವಾಗಿ, ಅನುಸರಿಸಿಕೊಂಡು ಹೋಗುತ್ತಿದ್ದಾರೆ.

ಸಿಂಧೋಳ್ಳು ಸಮುದಾಯ ಹಲವು ಸಾಮಾಜಿಕ ವಿಶಿಷ್ಟ ಚಹರೆಗಳನ್ನು ಹೊಂದಿದೆ. ಅನ್ಯ ಸಮುದಾಯಗಳೊಂದಿಗೆ ವಾಸಿಸುತ್ತಿದ್ದು, ಒಂದಡೆ ಸ್ಥಿರವಾಗಿ ನೆಲೆ ನಿಂತ ಮೇಲೆ ಗುಡಾರ, ಗುಡಿಸಲು, ಹಂಚಿನಮನೆ, ಆಶ್ರಯಮನೆ, ವಸತಿ ವ್ಯವಸ್ಥೆಯನ್ನು ರೂಢಿಸಿಕೊಂಡಿರುವುದು ಕಂಡುಬರುತ್ತದೆ. ಜಟಿಲವಾದ ಬದುಕು ಇವರದಲ್ಲ. ತಂದೆಯೇ ಕುಟುಂಬದ ಮುಖ್ಯಸ್ಥ. ಇತರ ಸಮುದಾಯಗಳೊಂದಿಗೆ ಜೀವನವನ್ನು ನಡೆಸುತ್ತಿದ್ದು, ಯಾವುದೇ ಸಮುದಾಯದ ಪ್ರಭಾವಕ್ಕೆ ಒಳಗಾಗದೆ ತಮ್ಮ ಮೂಲ ಸಾಂಸ್ಕೃತಿಕ ಪರದಿ ಯಲ್ಲಿಯೇ ಜೀವನ ನಡೆಸುವುದನ್ನು ಕಾಣಬಹುದಾಗಿದೆ. ಹಾಗಾಗಿ ಸಾಂಸ್ಕೃತಿಕ ಚಹರೆಗಳ ಹಿನ್ನೆಲೆಯಲ್ಲಿ ವೈಶಿಷ್ಟ್ಯತೆಯನ್ನು ಪಡೆಯುತ್ತದೆ. ಹಾಗೆಯೇ ಇವರ ಸಂಸ್ಕೃತಿಗೆ ಪ್ರಾಚೀನತೆಯೂ ಕೂಡ ಇದೆ. ಯಾವುದೇ ಕಾರಣಕ್ಕೂ ತಮ್ಮ ಸಾಮಾಜಿಕ ಜೀವನವನ್ನು ಬದಲಾಯಿಸಿಕೊಳ್ಳುವ ಮಟ್ಟಿಗೆ ಇತರರ ಪ್ರಭಾವಕ್ಕೆ ಒಳಾಗಿರುವುದಿಲ್ಲ. ಭಿಕ್ಷಾರ್ಥಿಗಳಾದ ಇವರು ಎಲ್ಲ ಜನರೊಂದಿಗೆ, ಹೊಂದಿಕೊಂಡು ತಮ್ಮ ಕಲಾವಂತಿಕೆ ಯನ್ನು ಪ್ರದರ್ಶನಮಾಡಿ ಜನಗಳಿಂದ 'ಶಭಾಶ್' ಎಂದು ಬೆನ್ನು ಚಪ್ಪರಿಸಿಕೊಂಡಿದ್ದಾರೆ. ಇವರ ಕಲಾವಂತಿಕೆಗೆ ಜನರು ಬೆರಗಾಗುವುದುಂಟು. ಜೊತೆಗೆ ಜನರಿಂದ ಪ್ರೋತ್ಸಾಹವೂ ದೊರಕುತ್ತಿದೆ. ಹೀಗಾಗಿ ಕಲಾಪ್ರದರ್ಶನದ ಮುಖೇನ ಭಿಕ್ಷಾಟನೆ ಕಸುಬು ಈಗಲೂ ಜೀವಂತವಾಗಿದೆ.

### ಕುಟುಂಬ ಪದ್ಧತಿ

ಕುಟುಂಬ ಸಮುದಾಯದ ಕೇಂದ್ರಬಿಂದು. ಇದು ತನ್ನ ಸದಸ್ಯರ ಮೇಲೆ ಸಾಮಾಜಿಕ, ಆರ್ಥಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಬೇಡಿಕೆಗಳನ್ನು ಈಡೇರಿಸುತ್ತದೆ. ಮಾನವನು ತನ್ನ ಮೂಲಭೂತ ಬೇಡಿಕೆಗಳಾದ ಲೈಂಗಿಕ ತೃಷೆ, ಸಂತಾನೋತ್ಪತ್ತಿ, ಶಿಶುಪಾಲನೆ, ಪ್ರೀತಿ, ವಾತ್ಸಲ್ಯ ಇತ್ಯಾದಿ ಪರಿಕಲ್ಪನೆಗಳನ್ನು

ಕುಟುಂಬದಿಂದ ಪಡೆದುಕೊಳ್ಳುತ್ತಾನೆ. ಹೀಗಾಗಿ ಕುಟುಂಬ ಒಂದು ಸಮುದಾಯಿಕ ಚೌಕಟ್ಟಿನಲ್ಲಿ ರೂಪುತಾಳುತ್ತದೆ. ಸಿಂಧೋಳ್ಳು ಸಮುದಾಯದಲ್ಲಿ ಅವಿಭಕ್ತ ಕುಟುಂಬಗಳೇ ಹೆಚ್ಚಾಗಿ ಇರುವುದನ್ನು ಕಾಣಬಹುದಾಗಿದೆ. ಅಲ್ಲಲ್ಲಿ ವಿಭಕ್ತ ಕುಟುಂಬಗಳಿದ್ದರೂ ಅಲ್ಪ ಪ್ರಮಾಣದಲ್ಲಿವೆ. ಅವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಸಾಮಾನ್ಯವಾಗಿ ೧೦-೧೫ರ ವರೆಗೆ ಜನಸಂಖ್ಯೆಯಿರುತ್ತದೆ. "ಅವಿಭಕ್ತ ಕುಟುಂಬವು ಜನರ ಸಮೂಹವಾಗಿದ್ದ ಅವರು ಒಂದೇ ಮನೆಯಲ್ಲಿ ವಾಸಿಸುತ್ತಿದ್ದು, ಅಡಿಗೆ ಮಾಡುವುದು, ಆಹಾರ ಸೇವಿಸುವುದು, ಪೂಜೆಯನ್ನು ಜೊತೆಗೂಡಿ ಮಾಡುವುದು ಹಾಗೂ ಆಸ್ತಿಯನ್ನು ಒಟ್ಟಾಗಿ ಹೊಂದಿರುತ್ತಾರೆ".[೧] ಇವರಲ್ಲಿ ಹಿರಿಯ ಯಜಮಾನ ಮನೆಯ ಕಾರ್ಯವೈಖರಿಗಳನ್ನು ನಿರ್ವಹಿಸುತ್ತಾನೆ. ಆತನೆ ಮನೆಯ ಮುಖ್ಯಸ್ಥ. ಮನೆಯ ಉಳಿದ ಸದಸ್ಯರು ಇವನನ್ನು ಅನುಸರಿಸಬೇಕು. ಯಾವುದೇ ತೀರ್ಮಾನ ತೆಗೆದುಕೊಳ್ಳುವಾಗ ಮುಖ್ಯಸ್ಥನ ನಿರ್ಣಯವೇ ಅಂತಿಮವಾದುದು. ಕೆಲವೊಮ್ಮೆ ಹಿರಿಯ ಮಗನೊಂದಿಗೆ ಸಮಾಲೋಚನೆ ಮಾಡಲಾಗುತ್ತದೆ. ಇವರ ಕುಟುಂಬಗಳಲ್ಲಿ ಏಕಸ್ವಾಮ್ಯತ್ವವಿದೆ. ತಂದೆ ತೀರಿಕೊಂಡ ಬಳಿಕ ಕುಟುಂಬದ ಯಾಃಮಾನಿಕೆ ಮಗನಿಗೆ ಹೋಗುತ್ತದೆ. ಕೆಲವೊಮ್ಮೆ ಕಿರಿಯವ ಅಣ್ಣಗಿಂತಲೂ ಬುದ್ಧಿವಂತನಾಗಿದ್ದಲ್ಲಿ, ಮನೆಯ ಯಜಮಾನ ಆತನೆ ಆಗುತ್ತಾನೆ. ಕುಟುಂಬದ ಮುಖ್ಯಸ್ಥ ಮಾಡಿಹೋದ ಸಾಲವನ್ನು ಮಕ್ಕಳು ಪ್ರಮಾಣಿಕವಾಗಿ ಒಪ್ಪಿಕೊಳ್ಳಬೇಕು.

ಕುಟುಂಬದಲ್ಲಿ ನಡೆಯುವ ಶುಭ ಆಚರಣೆಗಳಾದ ಋತುಮತಿ, ಮದುವೆ ಮೊದಲಾದ ಕಾರ್ಯಾಚರಣೆಗಳು ಮುಖ್ಯಸ್ಥನಿಂದಲೇ ನಡೆಯುತ್ತವೆ. ಕುಟುಂಬದಲ್ಲಿ ತಂದೆ ತಾಯಿ ಪಾತ್ರ ಬಹಳ ಜವಾಬ್ದಾರಿಯುತವಾದುದು. ಇತರ ಸದಸ್ಯರನ್ನೆಲ್ಲಾ ಸರಿದಾರಿಯಲ್ಲಿ ತೆಗೆದುಗೊಂಡು ಹೋಗುಬೇಕಾದ ಹೊಣೆಗಾರಿಕೆ ಇವರ ಮೇಲಿರುತ್ತದೆ. ಇಲ್ಲಿ ಉಂಟಾಗುವ ಆಂತರಿಕ ಭಿನ್ನಾಭಿಪ್ರಾಯಗಳನ್ನು ಮನೆಯ ಮುಖ್ಯಸ್ಥನೆ ಬಗೆಹರಿಸಬೇಕು. ಈ ಕುಟುಂಬಗಳಲ್ಲಿ ರಕ್ತ ಸಂಬಂಧದ ಸಂಬಂಧಗಳಿಗೆ ಹೆಚ್ಚು ಮಹತ್ವ ನೀಡಲಾಗುವುದು.

೧. ವಿಭಕ್ತ ಕುಟುಂಬ : ಸಿಂಧೋಳ್ಳು ಸಮುದಾಯದ ವಿಭಕ್ತ ಕುಟುಂಬ ವ್ಯವಸ್ಥೆಯಲ್ಲಿ ಪತಿ-ಪತ್ನಿ ಮತ್ತು ಮಕ್ಕಳಿರುತ್ತಾರೆ. ಇಲ್ಲಿ ಮೊದಲನೇ ಮಗನೇ ಮುಖ್ಯಸ್ಥನಾಗಿರುತ್ತಾನೆ. ಹಿರಿಯ ಮಗನು ವಿವಾಹ ಮಾಡಿಕೊಂಡ ಬಳಿಕ ಬೇರೆ ಕುಟುಂಬ ನಿರ್ಮಾಣ ಮಾಡಲು ಹಂಬಲಿಸುತ್ತಾನೆ. ಮದುವೆಯಾಗಿ ಕೆಲವೇ ದಿನಗಳಲ್ಲಿ ಬೇರೆ ಗುಡಾರ ಮನೆಮಾಡಿಕೊಳ್ಳುವ ಮೂಲಕ ಪ್ರತ್ಯೇಕ ಜೀವನ ಸಾಗಿಸಲಾಗುವುದು. ಹೀಗೆ ಬಹುಬೇಗ ಕುಟುಂಬವನ್ನು ಬಿಟ್ಟು ಬೇರೆಯಾಗುವುದಕ್ಕೆ ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ, ಸಾಮಾಜಿಕ ಕಾರಣ ಹಾಗೂ ಇತರೆ ಕಾರಣಗಳು ಇರಬಹುದಾದರೂ, ಈ ಮನೆಯ ಗಾತ್ರ ಕಿರಿದಾಗಿದ್ದು, ಹೊಸದಾಗಿ ಮದುವೆಯಾದ ಪತಿ-ಪತ್ನಿಯರು ಸಂಸಾರಿಕ ಜೀವನ ನಡೆಸಲು ಏಕಾಂತ ಸ್ಥಳವನ್ನು ಬಯಸುವುದು ಇದಕ್ಕೆ ಪ್ರಧಾನ ಕಾರಣವಾಗಿರಬಹುದು. ಕುಟುಂಬದಲ್ಲಿ ಮಗ ಭಿಕ್ಷೆ ಬೇಡದೇ, ಸೋಮಾರಿಯಾಗಿ ಅಲೆಯುತ್ತಿದ್ದರೆ, ಅವನಿಗೆ ತಂದೆ ತಾಯಿಗಳೇ ಮದುವೆಮಾಡಿ, ಬೇರೆ ಗುಡಾರ ಮನೆ ಮಾಡಿಕೊಟ್ಟಿರುವ ಉದಾಹರಣೆಗಳಿವೆ.[೨] ಇದರಿಂದ ಅವನಿಗೆ ಜವಾಬ್ದಾರಿ ಹೆಚ್ಚಾಗಿ ದುಡಿದು ತಿನ್ನುವ ಮನೋಭಾವ ಬೆಳೆದು, ಇತರರಂತೆ ಜೀವನ ನಡೆಸುತ್ತಾನೆ ಎಂಬ ನಂಬಿಕೆ ಹಿರಿಯರಲ್ಲಿದೆ. ಇನ್ನು ಕೆಲವರು ಸ್ವ-ಇಚ್ಛೆಯಂತೆ ಹೊರಬಂದು ಸ್ವತಂತ್ರ ಜೀವನ ನಡೆಸುತ್ತಿದ್ದಾರೆ. ಹೀಗೆ ಸಿಂಧೋಳ್ಳು ಕುಟುಂಬ ಪದ್ಧತಿಯಲ್ಲಿ

ಅವಿಭಕ್ತ ಮತ್ತು ವಿಭಕ್ತ ಕುಟುಂಬ ಪದ್ಧತಿಗಳೆರಡೂ ಕಂಡುಬಂದರೂ, ಹೆಚ್ಚಿನ ಪ್ರಮಾಣದಲ್ಲಿ ವಿಭಕ್ತ ಕುಟುಂಬ ಪದ್ಧತಿಗೆ ಹೆಚ್ಚಿನ ಪ್ರಾಧಾನ್ಯತೆ ಇದೆ.

**ಬೆಡಗುಗಳು**

ಬೆಡಗುಗಳು ಸಾಮಾಜಿಕ ಕುಟುಂಬದಲ್ಲಿ ಸಂಕೀರ್ಣವಾದುದು. ನಾಗರಿಕ ಮತ್ತು ಸಂಸ್ಕೃತಿಯ ವಿಕಾಸದ ಚಾರಿತ್ರಿಕ ಹೆಜ್ಜೆಗುರುತುಗಳೇ ಬೆಡುಗಗಳು. ಪ್ರಾಚೀನ ಕಾಲದಿಂದಲೂ ಮಾನವ ಆಚಾರ-ವಿಚಾರ, ನಂಬಿಕೆ- ನಿಷೇಧ, ವಿಧಿ-ವಿಧಾನಗಳನ್ನು ಅನುಕರಿಸುತ್ತ ಬಂದಿದ್ದಾನೆ. ಪ್ರತಿಯೊಂದು ಮನೆತನದ ಚರಿತ್ರೆಯನ್ನು ಬೆಡಗುಗಳನ್ನು ಮೂಲಕ ತಿಳಿದುಕೊಳ್ಳಬಹುದು. ಬುಡಕಟ್ಟು ಸಮುದಾಯಗಳು ತಮ್ಮ ರಕ್ತ ಸಂಬಂಧವನ್ನು ಏರ್ಪಡಿಸಿಕೊಳ್ಳಬೇಕೆಂದರೆ ಬೆಡಗು, ಬಳ್ಳಿ, ಗೋತ್ರಗಳು ಮುಖ್ಯವಾಗಿರುತ್ತವೆ. ಈ ಬಗೆಯ ಬೆಡಗುಗಳ ಹುಟ್ಟಿಗೆ ಕಾರಣವೇನು? ಎಂಬುದರ ಬಗ್ಗೆ ನಿರ್ದಿಷ್ಟವಾಗಿ ಹೇಳಲಾಗದು. ಸಿಂಧೋಳ್ಳು ಸಮುದಾಯದಲ್ಲಿ ಬೆಡಗನ್ನು ಬಳ್ಳಿ, ಕುಲ, ಗೋತ್ರ, ವಂಶ ಎಂದು ಕರೆಯುತ್ತಾರೆ. ಇವರರಲ್ಲಿ ಒಂದೇ ಬಳ್ಳಿಗೆ ಸೇರಿದವರು ಸೋದರರಾಗುತ್ತಾರೆ. (ರಾವುಲೋಳ್ ಮತ್ತು ರಾವುಲೋಳ್= ಸಹೋದರ/ಸಹೋದರಿ ಅಥವಾ ಅಣ್ಣಂದಿರು) ಮತ್ತು ವಿವಾಹವಾದರೆ ದೈಹಿಕ ತೊಂದರೆಯಾಗುತ್ತೆದೆಂಬ ವೈಜ್ಞಾನಿಕ ತಿಳಿವು ಇವರಿಗಿದೆ.

ಕರ್ನಾಟಕ ಮತ್ತು ಆಂಧ್ರ ಪ್ರದೇಶದಲ್ಲಿ ವಾಸಿಸುತ್ತಿರುವ ಸಿಂಧೋಳ್ಳು ಸಮುದಾಯದಲ್ಲಿ ಕಾಣಬರುವ ಬೆಡಗುಗಳನ್ನು ಸಂಗ್ರಹಮಾಡಲಾಗಿದೆ. ಆಂಧ್ರಪ್ರದೇಶ ಸಿಂಧೋಳ್ಳರ ಕೇಂದ್ರಸ್ಥಾನ. ಪ್ರಾದೇಶಿಕ ದೂರದ ಕಾರಣಗಳಿಂದ ಮೇಲುನೋಟಕ್ಕೆ ಸಂಸ್ಕೃತಿಯ ವಿಚಾರಗಳಲ್ಲಿ ಕೆಲವು ಭಿನ್ನತೆಗಳು ಕಂಡುಬಂದರೂ, ಮೂಲತಃ ಇವರೆಲ್ಲರ ಮೂಲ ನೆಲೆ ಒಂದೇ ಆಗಿದೆ. ಮತ್ತು ಬೆಡಗುಗಳೆಲ್ಲಾ ತೆಲುಗು ಭಾಷೆಯನ್ನೇ ಹೋಲುತ್ತವೆ. ಆದ್ದರಿಂದ ಇವರು ಆಂಧ್ರ ಮೂಲದವರೆಂಬುದಕ್ಕೆ ಪುಷ್ಟಿ ನೀಡುತ್ತವೆ. ಸ್ಪಷ್ಟನೆಗಾಗಿ ಕೆಲವು ಬೆಡಗುಗಳನ್ನು ಇಲ್ಲಿ ಗಮನಿಸಬಹುದು.

೧. ರಾವುಲೋಳ್
೨. ಚಿನ್ನಾರಾವುಲೋಳ್
೩. ದ್ಯಾಮನೋರು
೪. ಪೆದ್ದದ್ಯಾಮನೋರು
೫. ಸಿಂದ್ಯಾಲೋಳ್
೬. ಚಿಂದೋಳ್
೭. ಗಂಟೆ
೮. ಪರಸನೋರು
೯. ತುಮಲೋರು
೧೦. ಬುಟ್ಯಾಗುಲೋರು
೧೧. ಶೃಂಗೇರಿ
೧೨. ಯರ್ರಗಂಡಲೋರು
೧೩. ಗುಜ್ಜಲೋರು
೧೪. ಮಂಡಲೋರು
೧೫. ಎನುಮಲೋರು
೧೬. ಮಾರೆ ಬುಟ್ಯಾಗಲೋರು
೧೭. ಪೋಲ್ಲುಲೋರು
೧೮. ಮೀನುಗುಲೋರು
೧೯. ಬೆಳ್ತಂಗಟೆ
೨೦. ಶೃಂಗಲೋಳ್

೨೧. ಎಮ್ಮೆಗೆಲೋರು
೨೩. ಗಳಗಂಟೆ
೨೫. ಭೋಮಗಲೋರು
೨೭. ಕಾವುಡಿ
೨೯. ನಲಭೋತಲೋರು
೩೧. ಅವಗಂಡಲೋರು

೨೨. ಸಿಂಗಲೋರು
೨೪. ಹೂವನೋರು
೨೬. ಹೂಗಾರ
೨೮. ಸಾತಬಂಡಿ
೩೦. ಭೋಗಿ
೩೨. ನಿಮನಲೋರು

**ಆಹಾರ ಪದ್ಧತಿ**

"ಎಲ್ಲಾರು ಮಾಡುವುದು ಹೊಟ್ಟೆಗಾಗಿ ಗೇಣು ಬಟ್ಟೆಗಾಗಿ" ಎಂಬ ದಾಸರವಾಣಿ ಸಾರ್ವಕಾಲಿಕ ಸತ್ಯವಾದುದು. ಮಾನವ ಬದುಕಲು ಆಹಾರಬೇಕು. 'ಉದರ ನಿಮಿತ್ಯಂ ಬುಹಕೃತವೇಷಂ' ಎಂಬ ಮಾತಿನಂತೆ ಮನುಷ್ಯ ಹೊಟ್ಟೆಪಾಡಿಗಾಗಿ ಏನೇನೋ ವೃತ್ತಿಗಳನ್ನು ಮಾಡುವುದುಂಟು. ಆಹಾರಕ್ಕಾಗಿ ಮನುಷ್ಯ ನಿತ್ಯ ದುಡಿಯುತ್ತಾನೆ. ಕೆಲಸಮಾಡುತ್ತಾನೆ, ಭಿಕ್ಷೆಬೇಡುತ್ತಾನೆ. ಈ ಹೊಟ್ಟೆಗೋಸ್ಕರ ಏನೆಲ್ಲಾ ಹೋರಾಟದ ಮೂಲಕ ತನ್ನ ಆಹಾರವನ್ನು ದೊರಕಿಸಿಕೊಂಡು ಬದುಕನ್ನು ಸಾಗಿಸುತ್ತಾ ಬಂದಿದ್ದಾನೆ. ಮನುಷ್ಯನಿಗೆ ಆಹಾರವಿಲ್ಲದಿದ್ದರೆ ಬದುಕೇ ಇಲ್ಲ, ಉಸಿರೇ ಇಲ್ಲ, ನಡಿಗೆಯೂ ಇಲ್ಲ. ಅನ್ಯ ವಿಷಯ ಹೇಳಬೇಕಾದರೂ ಮನುಷ್ಯನಿಗೆ ಆಹಾರ ಅವಶ್ಯಕವಾಗಿ ಬೇಕಾಗಿದೆ. ಹಾಗೂ ಮನುಷ್ಯ ಆಹಾರಕ್ಕಾಗಿಯೆ ಹುಟ್ಟಿದವನಲ್ಲ: ಬದುಕುವುದಕ್ಕಾಗಿ ಆಹಾರ ಬೇಕಾಗುತ್ತದೆ. ಒಟ್ಟಿನಲ್ಲಿ ಆಹಾರವಿಲ್ಲದೆ ಮಾನವ ಪ್ರಾಣಿ-ಪಕ್ಷಿಗಳು ಬದುಕಲು ಸಾಧ್ಯವಿಲ್ಲ. ಅದಕ್ಕಾಗಿ ಆಹಾರವನ್ನು ಪ್ರತಿಯೊಬ್ಬ ನಾಗರೀಕ ವ್ಯಕ್ತಿಯೂ ಗೌರವಿಸುತ್ತಾನೆ ಮತ್ತು ಪೂಜಿಸುತ್ತಾನೆ.

ಪ್ರಾಚೀನ ಕಾಲದಲ್ಲಿ ಬುಡಕಟ್ಟು ಸಮುದಾಯಗಳಿಗೆ ಕಾಡಿನಲ್ಲಿ ದೊರೆಯುವ ಹಣ್ಣು ಹಂಪಲು, ಗೆಡ್ಡೆಗೆಣಸುಗಳೇ ಆಹಾರವಾಗಿದ್ದವು. ಕ್ರಮೇಣ ಬೌದ್ಧಿಕ ಬೆಳವಣಿಗೆಯಾದಂತೆ ಅವರು ಭೂ-ಸಾಗುವಳಿ ಮಾಡುವುದನ್ನು ಕಲಿತರು ಅನೇಕರು ತಮ್ಮ ವೃತ್ತಿಗಳನ್ನು ಆಧರಿಸಿ ಜೀವನ ಮಾಡತೊಡಗಿದರು. ಏನಾದರೂ ವೃತ್ತಿಮಾಡಿ ತನ್ನ ಕೆಲಸದಿಂದ ಆಹಾರ ಪೂರೈಕೆ ತಾನೇ ದೊರಕಿಸಿಕೊಳ್ಳುತ್ತಾನೆ. ಬುಡಕಟ್ಟು ಸಮುದಾಯಗಳು ಆಹಾರಕ್ಕಾಗಿ ಅಂದು ಕಾಡನ್ನು ನಂಬಿದ್ದರು. ಇಂದು ಸಾಂಪ್ರದಾಯಿಕ ವೃತ್ತಿಗಳಿಂದಾಗ ಇನ್ನೊಬ್ಬರ ಮೇಲೆ ಆಶ್ರಯಿಸಬೇಕಾಗಿದೆ. ಕಾರಣ ಕೆಲವು ಬುಡಕಟ್ಟು ಸಮುದಾಯಗಳಿಗೆ ಕೃಷಿ ವ್ಯಾಪಾರ ಮೊದಲಾದ ವೃತ್ತಿಗಳು ಅಪರಿಚಿತವಾಗಿವೆ. ಆದರೆ ಇಂದು ತಮ್ಮ ಜೀವನ ಕ್ರಮದಲ್ಲಿ ಕೆಲವು ಮಾರ್ಪಾಡುಗಳನ್ನು ಮಾಡಿಕೊಂಡಿವೆ. ಕೃಷಿ ಮೊದಲಾದ ವೃತ್ತಿಗಳ ಕಡೆಗೆ ಗಮನಹರಿಸುತ್ತಿದ್ದಾರೆ. ಆದರೂ ಸಿಂಧೋಳ್ಳ ಸಮುದಾಯವು ಸಮಾಜದಲ್ಲಿ ವಾಸಿಸುವ ವ್ಯಕ್ತಿಗಳ ಉದ್ಧಾರಕ್ಕಾಗಿ ಜಯದ ಘೋಷಣೆಗಳನ್ನು ಹೇಳುತ್ತಾ, ಬುರ್ರ ಬುರ್ರ ನೃತ್ಯದೊಂದಿಗೆ ಕುಣಿಯುತ್ತಾ ತನ್ನ ಮೈಯಿಗೆ ಚಾಟಿ ಹೊಡೆದುಕೊಳ್ಳುವ ಕಾಯಕವನ್ನು ಈಗಲೂ ಮುಂದುವರೆಸಿಕೊಂಡು ಬಂದಿರುವುದನ್ನು ಕಾಣುತ್ತೇವೆ. ಜನರು ಈ ದೃಶ್ಯವನ್ನು ನೋಡಿ ತಮ್ಮಿಂದ ಸಾಧ್ಯವಾದಷ್ಟು ಹಣ ಅಥವಾ ಆಹಾರವನ್ನು ಭಿಕ್ಷೆಯ ರೂಪದಲ್ಲಿ ನೀಡುತ್ತಿದ್ದರು. ಈ ಆಹಾರವನ್ನು ಅಥವಾ ಹಣವನ್ನು ಅಮ್ಮನ ಪ್ರಸಾದವೆಂದು ಹೇಳುತ್ತಾರೆ.

ಸಿಂಧೋಳ್ಳುರು ಮಾಂಸಹಾರಿಗಳೂ ಹೌದು. ಸಸ್ಯಹಾರಿಗಳೂ ಹೌದು. ಸಾಮಾನ್ಯವಾಗಿ ಈ ಸಮುದಾಯದ ಜನ ಎರಡೂ ಬಗೆಯ ಆಹಾರವನ್ನು ಸೇವಿಸುವುದುಂಟು. ಇದಕ್ಕೆ ಕೆಲವು ಅಪವಾದಗಳು ಇರಲೂ ಸಾಧ್ಯ, ಆದರೆ ಇದಕ್ಕೆ ಯಾವುದೇ ಸಾಮಾಜಿಕ ಕಾರಣವಿರದೆ ವ್ಯಕ್ತಿಗತ ಅಂಶಗಳು ಕಾರಣವಾಗಿರುತ್ತವೆ. ಕಾಡಿನಲ್ಲಿ ಸಿಗುತ್ತಿದ್ದ ಪ್ರಾಣಿ-ಪಕ್ಷಿಗಳ ಮಾಂಸವನ್ನು ಆಹಾರವಾಗಿ ಒಂದು ಕಡೆ ಬಳಸಿಕೊಂಡರೆ, ಇನ್ನೊಂದೆಡೆ ಧಾರ್ಮಿಕ ಭೀಕ್ಷಾಟನೆಗೆ ಬಂದಿರುವಂತಹ ಆಹಾರವನ್ನು ಅಂದಿನ ದಿನಲ್ಲಿ ಮಾತ್ರ ಉಪಯೋಗಿಸುತ್ತಾರೆ. ಒಮ್ಮೆ ಗುಡಾರ ಮುಂದೆ ಅಡಿಗೆ ಮಾಡಿಕೊಳ್ಳುತ್ತಾರೆ. ಆದರೂ ಅಮ್ಮನ ಪ್ರಸಾದ ಆಹಾರದ ಮೇಲೆ ಅವಲಂಬಿತರಾಗಿರುತ್ತಾರೆ. ಸಿಂಧೋಳ್ಳುರು ಆಹಾರಕ್ಕಾಗಿ ಭಿಕ್ಷೆ ಬೇಡುವ ಪದ್ಧತಿಯನ್ನು ನಾಲ್ಕು ಪ್ರಕಾರಗಳಲ್ಲಿ ವಿಂಗಡಿಸಬಹುದಾಗಿದೆ.

೧. ದಿನಂಪ್ರತಿ ಭಿಕ್ಷೆ ಆಹಾರ

೨. ಸಂತೆ ದಿನದಲ್ಲಿ ಭಿಕ್ಷೆ ಆಹಾರ

೩. ಶುಭಕಾರ್ಯಕ್ರಮಗಳಲ್ಲಿ ಭಿಕ್ಷೆ ಆಹಾರ

೪. ಹಬ್ಬ ಹರಿದಿನಗಳಲ್ಲಿ ಭಿಕ್ಷೆ ಆಹಾರ

**೧. ದಿನಂಪ್ರತಿ ಭಿಕ್ಷೆ ಆಹಾರ**

ಸಿಂಧೋಳ್ಳುರು ದಿನ ನಿತ್ಯದ ಭಿಕ್ಷಾರ್ಥಿಗಳು. ಇವರು ಮನೆಯ ಮುಂಭಾಗದಲ್ಲಿ ಹೋದಾಗ "ಜಿರ್ರ್ ಬುರ್ರ............. ಅವ್ವಾ ಕೂಗಮ್ಮ ಬಂದಾಳ್ರೆಯವ್ವಾ ಅನ್ನ ಕೊಡಾವ್ವ, ನಮ್ಮವ್ವ.......... ಬುರ್ರ ಬುರ್ರ" ಹಾಡಿನೊಂದಿಗೆ ಹೇಳಿದಾಗ ಜನರು "ರೀ ಕೂಗಮ್ಮ ಬಂದರಿ" ಎಂದು ಜೋರಾಗಿ ಮನೆಯಲ್ಲಿ ಹೋಗಿ, ತಮ್ಮ ಸಾಮಾರ್ಥ್ಯಕ್ಕೆ ಅನುಗುಣವಾಗಿ ಊಟವನ್ನು ನೀಡುತ್ತಾರೆ. ಅವುಗಳಲ್ಲಿ ತಂಗಳು ಅನ್ನ, ತಂಗಳು ಸಾರು, ಒಣಗಿರುವ ರೊಟ್ಟಿ, ತಂಗಳು ಮುದ್ದೆ, ಒಮ್ಮೆ ಬಿಸಿ ಅನ್ನ, ಪಲ್ಲೆ, ಚಟ್ನಿ ಇತ್ಯಾದಿ.

**ಹೋಟಲ್‌ಗಳಿಗೆ ಭಿಕ್ಷೆಬೇಡಲು ಹೋದಾಗ : ಪೂಜಾರಿ ತನ್ನ ಮೈಯಿಗೆ ಚಾಟಿಯಿಂದ ಹೊಡೆದು ಕೊಳ್ಳುತ್ತಾ, ಭರ್ಜರಿ ಕುಣಿಯುತ್ತಾನೆ. ಹೋಟಲ್‌ನಲ್ಲಿರುವ ಜನರು ಕೇಕೆ ಸೀಳು ಹಾಕುತ್ತ ನೋಡುತ್ತಾರೆ. ಮಾಲಿಕನು ಪೂಜಾರಿಗೆ ಬಗೆ ಬಗೆಯ ತಿಂಡಿಗಳನ್ನು ನೀಡುತ್ತಾನೆ. ಅವುಗಳಲ್ಲಿ ಇಡ್ಲಿ, ಮೆಣಸಿನಕಾಯಿ, ಮಂಡಕ್ಕಿ ಒಗ್ಗರಣೆ, ದೋಸೆ, ಪಲಾವ್, ಘೀ-ರೇಸ್, ಚಿಕನ್ ಬಿರಾನಿ, ಪೂರಿ ಇತ್ಯಾದಿಗಳು.....**

**೨. ಸಂತೆ ದಿನದಲ್ಲಿ ಭಿಕ್ಷೆ ಆಹಾರ**

ಸಂತೆ ಮೈದಾನದಲ್ಲಿ ಪೂಜಾರಿ ಬುರ್ರ ಬುರ್ರ ವಾದ್ಯದೊಂದಿಗೆ ಬಂದರೆ ಸಾಕು. ಏನೋ ಗದ್ದಲ, ಎಲ್ಲರ ದೃಷ್ಟಿಕೋನ ಬುರ್ರ ಬುರ್ರ ವಾದ್ಯದ ಕಡೆಗೆ ಹರಿಸುತ್ತಾರೆ. ಪೂಜಾರಿ ಸಂತೆಯಲ್ಲಿ ಪ್ರತಿಯೊಂದು ಮಳಿಗೆಯ ಹತ್ತಿರ ವಿವಿಧ ರೀತಿಯ ಆಹಾರವನ್ನು ಬೇಡುತ್ತಾನೆ. ಕೊಡದ್ದಿದ್ದರೆ ತನ್ನ ಮುಂಗೈನಿಂದ ರಕ್ತ ಚಿಮ್ಮಿಸುತ್ತಾನೆ, ರಕ್ತ ನೋಡಿದ ಕೂಡಲೆ ಮಳಿಗೆ ಮಾಲಿಕ ವಸ್ತುಗಳನ್ನು ಕೊಡುತ್ತಾನೆ. ಅವುಗಳಲ್ಲಿ ಬದನೆಕಾಯಿ, ಮೆಣಸಿನಕಾಯಿ, ಟೊಮಟೊ, ಪಡವಲು ಕಾಯಿ, ಸೌತೆಕಾಯಿ, ಸೊಪ್ಪು, ನಿಂಬೆಹಣ್ಣು ಕರಿಬೇವು, ಅಮ್ಮನಿಗೆ ಹೂವು, ಮಾವಿನ ಹಣ್ಣು ಮೊದಲಾದವು.

೩. ಶುಭಕಾರ್ಯಕ್ರಮದಲ್ಲಿ ಭಿಕ್ಷೆ ಆಹಾರ

ಊರಿನಲ್ಲಿ ಏನಾದರೂ ಗೃಹಪ್ರವೇಶ, ನಾಮಕರಣ, ಮದುವೆ ಮೊದಲಾದ ಶುಭಕಾರ್ಯಕ್ರಮಗಳು ನಡೆದರೆ ಸಿಂಧೋಳ್ಳುರಗೆ ಸುಗ್ಗಿಕಾಲ. ಅವರು ಎಲ್ಲಿ ಎಂತಹ ಕಾರ್ಯಕ್ರಮಗಳು ನಡೆಯುವವು ಎಂದು ಮಾಹಿತಿ ತಿಳಿದ ತಕ್ಷಣ ಬುರ್ರ ಬರ್ರು ವಾದ್ಯದೊಂದಿಗೆ ಅಲ್ಲಿಗೆ ಹೋಗುತ್ತಾರೆ. ಅಲ್ಲಿ ತಮ್ಮ ನೃತ್ಯ ಪ್ರದರ್ಶನಮಾಡಿ ಪರಿಮಳ ಸ್ವಾದಭರಿತ ಆಹಾರ ಸ್ವೀಕರಿಸುತ್ತಾರೆ. ಅವುಗಳಲ್ಲಿ ಸಿಹಿಬೂಂದಿ, ಕಾರಬೂಂದಿ, ಲಡ್ಡು, ಮೈಸೂರುಪಾಕ್, ಫಲಾವ್, ಪಾಯಸ, ಅನ್ನ, ಸಾಂಬರು, ಅಪ್ಪಳ, ಕೋಸಂಬರಿ ಇತರೆ......

೪. ಹಬ್ಬ ಹರಿದಿನಗಳಲ್ಲಿ ಭಿಕ್ಷೆ ಆಹಾರ

ಹಿಂದೂ ಸಂಪ್ರದಾಯದಂತೆ ವಿಶೇಷ ಹಬ್ಬಗಳು ಬಂದರೂ, ಸಿಂಧೋಳ್ಳುರು ತಮ್ಮ ಧಾರ್ಮಿಕ ಭಿಕ್ಷಾಟನೆಯನ್ನು ಎಂದಿಗೂ ಬಿಡುವುದಿಲ್ಲ. ಇವರು ಶಿವರಾತ್ರಿ, ದೀಪಾವಳಿ, ಗಣೇಶಹಬ್ಬ, ಮುಸ್ಲಿಂ ಹಬ್ಬಗಳು ಹೀಗೆ, ಯಾವುದೇ ಜಾತಿ, ಧರ್ಮಕ್ಕೆ ಕಟ್ಟು ಬೀಳದೆ ಪೂಜಾರಿ ಪ್ರತಿಯೊಂದು ಮನೆಗೂ ಹೋಗಿ ಭಿಕ್ಷೆ ಬೇಡಿ ಆಹಾರ ಸ್ವೀಕರಿಸಿಕೊಳ್ಳುತ್ತಾನೆ. ಅವುಗಳಲ್ಲಿ ಹೋಳಿಗೆ, ಕರ್ಚಿಗಾಯಿ, ಬಿರಾನಿ, ಕೋಳಿಸಾಂಬರು, ಹುಗ್ಗಿ, ಅನ್ನ ಮತ್ತು ಸಾಂಬರು ಇತ್ಯಾದಿ.

ಹೀಗೆ ಜನರಿಂದ ಆಹಾರ ಬೇಡಿಕೊಂಡು ಜೀವನ ಮಾಡುತ್ತಿದ್ದಾರೆ. ಆದರೂ ಸಿಂಧೋಳ್ಳುರು ತಮ್ಮ ಗುಡಾರದ ಮುಂದೆ ಅಡುಗೆ ಮಾಡಿಕೊಳ್ಳುವುದು ಇತ್ತೀಚಿನ ಬೆಳವಣಿಗೆಯಾಗಿದೆ. ಅಕ್ಕಿ, ಜೋಳ, ರಾಗಿ, ಸಾಂಬರಿನ ಕಾಳುಗಳನ್ನು ಸಿಂಧೋಳ್ಳುರು ಸಾಮಾನ್ಯವಾಗಿ ನಿತ್ಯ ಆಹಾರಕ್ಕಾಗಿ ಬಳಸುವುದುಂಟು. ಜೊತೆಗೆ ಮಾಂಸ ಮತ್ತು ಜೋಳದ ಮುದ್ದೆ ಹೆಚ್ಚಾಗಿ ಉಪಯೋಗಿಸಿತ್ತಾರೆ. ಊಟದ ಜೊತೆಯಲ್ಲಿ ನೆಂಜಿಕೊಳ್ಳಲು ಮಾಂಸದ ತುಣುಕುಗಳಾದ ಒಣಗಿದ ಮುರಗಿಯನ್ನು ಮಾಡಿಟ್ಟುಕೊಂಡಿರುತ್ತಾರೆ. ಬೆಂಕಿಯಲ್ಲಿ ಸುಟ್ಟಿರುವುದನ್ನು ಆಗಾಗ ಬಳಸುತ್ತಾರೆ ಇದು ಕಡ್ಡಾಯವಲ್ಲ. ತಮ್ಮ ತಮ್ಮ ರುಚಿಯನ್ನು ಅವಲಂಬಿಸಿ, ನಂಜಿಕೊಳ್ಳುವ ಪಲ್ಲೆಗಳನ್ನು ಸಹ ಬಳಸುವರು. ಕೆಲವು ಪ್ರದೇಶಗಳಲ್ಲಿ ತಮ್ಮ ಕುಲದೈವ ಪ್ರಭಾವದಿಂದ ಮಾಂಸಾಹಾರವನ್ನು ಕುಲದೇವತೆಯ ಪೂಜಾದಿನದಂದು ಉಪಯೋಗಿಸುವುದಿಲ್ಲ. ಉಳಿದ ದಿನಗಳಲ್ಲಿ ಮಾಂಸಾಹಾರ ಸ್ವೀಕರಿಸುತ್ತಾರೆ. ಹಬ್ಬ ಹರಿದಿನಗಳಲ್ಲಿ ಬೆಲ್ಲದ ಅನ್ನ, ಹೋಳಿಗೆ, ಕಡುಬು, ಹುಗ್ಗಿ, ಇತ್ಯಾದಿಗಳು ತಾವೇ ಮಾಡಿಕೊಂಡು ಸೇವಿಸುತ್ತಾರೆ. ಈ ರೀತಿಯ ಆಹಾರ ಸೇವನೆಯು ಸಾಮಾಜಿಕ ಮತ್ತು ಆರ್ಥಿಕವಾಗಿ ಮುಂದುವರೆದ ಸಿಂಧೋಳ್ಳುರಲ್ಲಿ ಮಾತ್ರ ಕಾಣಬಹುದಾಗಿದೆ. ಗಿರಿಜನ ಸಂಸ್ಕೃತಿನ್ನು ಉಳಿಸಿಕೊಂಡು ಬಂದಿರುವ ಈ ಸಮುದಾಯ ತಮ್ಮ ಪರಿಸರದಲ್ಲಿಯೆ ಅಡಿಗೆ ಮಾಡುವ ಸಂಸ್ಕೃತಿಯನ್ನು ಕಾಣಬಹುದು.

ಮುದ್ದೆ : ಮುದ್ದೆ ಜನಮನದಲ್ಲೂ ಪ್ರಸಿದ್ಧವಾದ ಆಹಾರವಾಗಿ ಪರಿಣಮಿಸಿಕೊಂಡಿದೆ. ಶ್ರೀ ಹೆಚ್.ಡಿ. ದೇವೇಗೌಡ್ರು ಪ್ರಧಾನಿಯಾದಾಗ "ಮುದ್ದೆಯ ಗೌಡ್ರರು" ಪ್ರಧಾನಿಯಾದರೆಂದು ಹಲವು ಪತ್ರಿಕೆಗಳು ಸುದ್ದಿ ಮಾಡಿದ್ದನ್ನು ನೆನೆಪಿಸಿಕೊಳ್ಳಬಹುದು. ಅಲ್ಲದೇ ದೆಹಲಿಯ ಪಂಚತಾರಾ ಹೋಟಲು ಗಳಲ್ಲಿ "Prime Minister Pride" ಎಂಬ ಹೆಸರಿನಲ್ಲಿ ಮುದ್ದೆ ಕೂಡಾ ಜಾಗ ಮಾಡಿಕೊಂಡಿದ್ದನ್ನು ಅಂತರಾಷ್ಟ್ರೀಯ ಮಟ್ಟದಲ್ಲಿಯೂ, ಮಾಧ್ಯಮಗಳಲ್ಲಿ ಮುದ್ದೆ ಮಿಂಚಿದ್ದನ್ನು ಗಮನಿಸಬೇಕೆಂದು

ಡಾ.ನಲ್ಲೂರು ಪ್ರಸಾದ್‌ರವರು (ಗಂಗಡಿ ಒಕ್ಕಲಿಗರು) ಎಂಬ ಕೃತಿಯಲ್ಲಿ ದಾಖಲಿಸಿರುವುದು ಪ್ರಸ್ತುತವೆನಿಸುತ್ತದೆ.

"ಸಿಂಧೋಳ್ಳುರ ಮಹಿಳೆಯರಿಗೆ ಮುದ್ದೆ ಮಾಡುವುದು ನಿರಂತರವಾದ ಕೆಲಸವಾಗಿದೆ. ಮುದ್ದೆ ಮಾಡುವುದು ಬಹಳ ಸುಲಭದ ಕೆಲಸ ಅಂತಾರೆ".[೪] ಗುಡಾರದಲ್ಲಿರುವ ಸಂಖ್ಯೆಯನ್ನುವಲಂಬಿಸಿ ಎಷ್ಟು ಮುದ್ದೇ ಬೇಕು ಲೆಕ್ಕಾಚಾರದಂತೆ ಪಾತ್ರೆಯಲ್ಲಿ ನಂತರ ನೀರು ಉಕ್ಕಿದಾಗ ಅದಕ್ಕೆ ತಕ್ಕಷ್ಟು ಜೋಳ ಅಥವಾ ರಾಗಿ ಹಿಟ್ಟು ಹಾಕಿ ಮುದ್ದೆ ಕೋಲಿನಿಂದ ಕಲುಕಿ, ಐದು ನಿಮಿಷ ಬೇಯಲು ಬಿಡುತ್ತಾರೆ. ಚೆನ್ನಾಗಿ ಬೆಂದಮೇಲೆ ಜೋಳ ಅಥವಾ ರಾಗಿ ಹಿಟ್ಟು ಮುದ್ದೆಯ ಹದಕ್ಕೆ ಸಾಕಾಗದಿದ್ದರೆ ಸಾಕಾಗುವಷ್ಟು ಹಿಟ್ಟು ಹಾಕಿ ಬೇಯಿಸಲು ಬಿಡುತ್ತಾರೆ. ಮುದ್ದೆ ಮೃದು ಬಂದಾಗ ಪಾತ್ರೆಯನ್ನು ಒಲೆಯ ಮೇಲಿಂದ ಕೆಳಗಿಳಿಸುತ್ತಾರೆ. ಮುದ್ದೆ ಕೋಲಿನಿಂದ ಮೃದು ಮಾಡಿ ತಟ್ಟೆಗಳಲ್ಲಿ ಹಾಕಿಕೊಂಡು, ಗುಂಡಾಕಾರದ ಮುದ್ದೆಯನ್ನು ಮಾಡುತ್ತಾರೆ.

ಅನ್ನ : ಅನ್ನ ಮಾಡುವುದು ಕಷ್ಟದ ಕೆಲಸವೇನೂ ಅಲ್ಲ, ಎಂದು ಹೇಳುತ್ತಾರೆ. ತಮ್ಮ ಕುಟುಂಬದ ಜನಗಳ ಆಧಾರದಂತೆ ತಮಗೆ ಬೇಕಾಗುವ ಪ್ರಮಾಣದಲ್ಲಿ ಅನ್ನದ ಪಾತ್ರೆಗಳನ್ನು ಒಲೆಯ ಮೇಲಿಡುತ್ತಾರೆ. ಅಕ್ಕಿಯ ಪ್ರಮಾಣಕ್ಕನುಗುಣವಾಗಿ ನೀರು ಹಾಕಿ ಬೇಯಿಸುತ್ತಾರೆ. ಬಸಿಯುವುದಾದರೆ ಅದು ಹೆಚ್ಚಿದ್ದರೂ ತೊಂದರೆಯಿಲ್ಲ. ಅನ್ನ ಆಗಿದೀಯೋ ಇಲ್ಲವೆಂದು ಒಸುಕಿ ನೋಡಿ, ತಟ್ಟೆಯನ್ನು ಮುಚ್ಚಿಡುತ್ತಾರೆ. ಶಾಖಕ್ಕೆ ಅದು ಚೆನ್ನಾಗಿ ಅರಳಿ ಮೃದುವಾಗುತ್ತದೆ.

ಮಾಂಸದ ಸಾರು : "ಬ್ರಾಹ್ಮಣನಿಗೆ ತುಪ್ಪ ಕೊಡು ಸಿಂಧೋಳ್ಳನಿಗೆ ಮಾಂಸಕೊಡು" ಎಂಬ ಗಾದೆ ಮಾತೊಂದಿದೆ. ಇದರಿಂದ ಸಿಂಧೋಳ್ಳುರು ಮಾಂಸ ಪ್ರಿಯರು ಎಂಬುದು ವೇದ್ಯವಾಗುತ್ತದೆ. ಇವರು ಉಪಯೋಗಿಸುವ ಪ್ರಾಣಿ ಪಕ್ಷಿಗಳಾದ ಹಂದಿ, ಕುರಿ, ಮೇಕೆ, ಕೋಳಿ, ಮೀನು, ಆಮೆ, ಇಲಿ, ನವಿಲು ಇತ್ಯಾದಿ. ಗೋಮಾಂಸ ಮಾತ್ರ ತಿನ್ನುವುದಿಲ್ಲ. ಗೋಹತ್ಯೆ ಮಹಾಪಾಪವೆಂದು ಭಾವಿಸುತ್ತಾರೆ. ಉಳಿದಂತೆ ಪ್ರಾಣಿ ಪಕ್ಷಿಗಳನ್ನು ಬೇಟೆಯ ಮೂಲಕ ತಿನ್ನುತ್ತಾರೆ. ಬೇಟೆಗೆ ಬಂದಿರುವ ಹಂದಿ, ಬೆಕ್ಕು ಮುಂತಾದ ಪ್ರಾಣಿಗಳನ್ನು ಕೊಯ್ದು ನೇರವಾಗಿ ಮಾಂಸದ ಅಡಿಗೆ ಮಾಡಿ ತಿನ್ನುವುದಿಲ್ಲ. ಮೊಟ್ಟ ಮೊದಲು ಬೆಂಕಿಯಲ್ಲಿ ಚೆನ್ನಾಗಿ ಸುಟ್ಟು ನಂತರ ತೊಳೆದು, ಹೊಟ್ಟೆಯರಲ್ಲಿರುವ ಬೇಡವಾದ ಕರುಳಿನ ಭಾಗಗಳನ್ನೆಲ್ಲ ತೆಗೆದು ಉಳಿದ ಮಾಂಸವನ್ನು ಚಿಕ್ಕ ಚಿಕ್ಕ ತುಂಡುಗಳಾಗಿ ಕತ್ತರಿಸಿ, ಪಾತ್ರೆಯಲ್ಲಿ ಹಾಕುತ್ತಾಳೆ. ಪಾತ್ರೆಯಲ್ಲಿ ಮಸಾಲೆಪುಡಿ, ಖಾರದಪುಡಿ ಹಾಕಿ ಒಲೆಯ ಮೇಲೆ ಕುದಿಸುತ್ತಾರೆ ತದನಂತರ ಮಾಂಸ ಚೆನ್ನಾಗಿ ಬೆಂದು ಕೊಂಡಿದೆ ಇಲ್ಲವೋ ಎಂದು ಕಟ್ಟಿಗೆಯಿಂದ ತಿರುಗುಸುತ್ತಾರೆ. ಕೊನೆಯ ಸಮಯದಲ್ಲಿ ರಾಗಿ ಹಿಟ್ಟನ್ನು ಮುಚ್ಚಳದಲ್ಲಿ ಕಲಿಸಿ, ಬೇಯುತ್ತಿರುವ ಮಾಂಸದ ಸಾರಿನಲ್ಲಿ ಬೆರೆಸುತ್ತಾರೆ. ಇದು ರುಚಿಯಾಗಿರುತ್ತೆಂದು ಹೇಳುತ್ತಾರೆ."[೫] ತದ ನಂತರ ಮಾಂಸದ ಸಾರು ಪಕ್ಕದ ಗುಡಾರಗಳಿಗೂ ಘಮ ಘಮ ವಾಸನೆ ಬರುತ್ತದೆ. ಸಂಪೂರ್ಣ ಸಾರು ಆದ ನಂತರ ಒಲೆಯ ಮೇಲಿಂದ ಕೆಳಗಿಳಿಸುತ್ತಾರೆ.

ಹೀಗೆ ಸಿಂಧೋಳ್ಳುರು ಒಂದು ಕಾಲದಲ್ಲಿ ಸಂಪೂರ್ಣವಾಗಿ ಭಿಕ್ಷೆಯನ್ನೇ ನಂಬಿಕೊಂಡು, ಭಿಕ್ಷೆ ಜೊತೆಯಲ್ಲಿ ತಮ್ಮ ಕಾಲೋನಿ, ಗುಡಾರಗಳ ಮುಂಭಾಗದಲ್ಲಿ ಅಡಿಗೆ ಮಾಡುವುದನ್ನು ರೂಢಿಸಿ ಕೊಂಡಿದ್ದಾರೆ.

ಸಿಂಧೋಳ್ಳುರ ಆಹಾರ ಪದ್ಧತಿಯಲ್ಲಿ ಪ್ರಾದೇಶಿಕವಾಗಿ ವ್ಯತ್ಯಾಸಗಳಿವೆ. ಇದಕ್ಕೆ ಮುಖ್ಯ ಕಾರಣ ವೆಂದರೆ ಆಯಾ ಪ್ರದೇಶಗಳಲ್ಲಿ ಬೆಳೆಯುವ ಮತ್ತು ದೊರೆಯುವ ಆಹಾರ ಸಾಮಾಗ್ರಿಯಾಗಿದೆ. ಕುಟುಂಬದ ಸದಸ್ಯರೆಲ್ಲ ಒಟ್ಟಿಗೆ ಕುಳಿತು ಊಟ ಮಾಡಬೇಕೆಂಬ ನಿಯಮವಿದೆ. ಇವರು ಬೆಳಿಗ್ಗೆ ಸಮಯದಲ್ಲಿ ಬಹುತೇಕ ಚಹಾ ಕಾಫಿಯಂತಹ ಪದಾರ್ಥಗಳನ್ನು ಸೇವಿಸುತ್ತಾರೆ. ಕೆಲ ನವಯುವಕರು ಭಿಕ್ಷಾಟನೆಗಾಗಿ ಬಾಂಬೆ, ಸೊಲ್ಲಾಪುರ, ಹೈದ್ರಾಬಾದ್, ಮೆಟ್ರೊಪಾಲಿಟಿ ಸಿಟಿಗಳಿಗೆ ವಲಸೆ ಹೋಗುತ್ತಿರುವುದನ್ನು ಕಾಣುತ್ತೇವೆ. ಹೀಗೆ ಹೋದವರು ಅಲ್ಲಿ ರುಚಿಕರ ಆಹಾರವನ್ನು ಸೇವಿಸಿ ರೂಢಿಯಾಗಿದ್ದರಿಂದ ತಮ್ಮ ಸ್ವಂತ ಗುಡಾರದ ಅಡಿಗೆ ಇಷ್ಟಪಡುವುದಿಲ್ಲ. ಹೀಗಾಗಿ ಇವರ ಆಹಾರ ಪದ್ಧತಿಯಲ್ಲಿ ಬದಲಾವಣೆಗಳಾಗಿವೆ. ಭಿಕ್ಷೆ ಬಂದಿರುವಂತಹ ಆಹಾರವನ್ನು "ಅಮ್ಮನ ಪ್ರಸಾದ"ವೆಂದು ಇಂದಿಗೂ ಸ್ವೀಕರಿಸಿಕೊಂಡಿದ್ದಾರೆ. ಹೀಗಾಗಿ ಸಿಂಧೋಳ್ಳುರ ಆಹಾರ ಪದ್ಧತಿಯಲ್ಲಿ ಹೊಸತನವನ್ನು ಗುರುತಿಸಲಾಗುವುದಿಲ್ಲ. ಏಕೆಂದರೆ ಸಿಂಧೋಳ್ಳುರ ಅನ್ಯ ವ್ಯಕ್ತಿಯನ್ನು ಆಶ್ರಯಿಸಿ ಬದುಕುವ ಸಮುದಾಯವಾಗಿದೆ. ತಾವು ಜನನ ದಿಂದ ಹಿಡಿದು ಅಂತ್ಯ ಸಂಸ್ಕಾರದವರೆಗೆ ಅಡಿಗೆ ಮಾಡಿಕೊಂಡು ಊಟ ಮಾಡುವುದುಂಟು.

**ಅಡಿಗೆ ಗುಡಾರ/ಮನೆಯಲ್ಲಿ ಬಳಸುವ ಉಪಕರಣಗಳು**

ಮಣ್ಣಿನ ಮಡಿಕೆ, ಮುದ್ದೆ ಮಾಡುವ ಸ್ಟೀಲ್ ಪಾತ್ರೆ, ಸೌಟು (ಚೋಟ್), ರೊಟ್ಟಿ ಮಾಡುವ ತಾಟು ಅಥವಾ ಗಂಗಳ, ಚಮಚಗಳು, ನೀರು ಕುಡಿಯುವ ಗ್ಲಾಸ್, ನೀರಿನ ಪಾತ್ರೆ ಇತ್ಯಾದಿ.

**ವಸತಿ**

ಮಾನವ ಮೂಲತಃ ಅಲೆಮಾರಿಯಾಗಿದ್ದನು. ಆದಿಶಿಲಾಯುಗದಿಂದ ಆಧುನಿಕ ಜೀವನದವರೆಗೆ ಒಂದಲ್ಲಾ, ಒಂದು ರೀತಿ ಬೆಳವಣಿಗೆಯನ್ನು ಹೊಂದುತ್ತಾ ಬಂದಿದ್ದಾನೆ. ಮೊದಲ ಹಂತದಲ್ಲಿ ಇಡೀ ಭೂಮಿಯೇ ಅವನ ವಾಸದ ನೆಲೆಯಾಗಿತ್ತು. ಅಂದರೆ ಗುಡ್ಡ, ಕಾಡು, ಮರ, ಕಣಿವೆ, ಬಂಡೆ, ಪೊದೆಗಳನ್ನು ಆಶ್ರಯಿಸಿ ಬದುಕುತ್ತಿದ್ದನು. ಒಂದು ನಿರ್ದಿಷ್ಟ ಜೀವನದ ನೆಲೆಯನ್ನು ಹೊಂದಬೇಕೆಂಬ ವಿಚಾರ ಇವರ ತಲೆಯಲ್ಲಿ ಮೂಡಿರಲಿಲ್ಲ. ಬುದ್ಧಿ ವಿಕಾಸನವಾಗುತ್ತಾ ತನ್ನ ದೇಹ ರಕ್ಷಣೆಗಾಗಿ ಹಾಗೂ ಪ್ರಕೃತಿ ಮಡಿಲಿನಿಂದ, ಕ್ರೂರ ಮೃಗಗಳಿಂದ ರಕ್ಷಣೆ ಪಡೆಯಲು ವಾಸದ ಪರಿಕಲ್ಪನೆಯನ್ನು ಮಾಡಿಕೊಂಡನು. ಹರ್ಬಟ್ ಸ್ಪೆನರ್ (Herbert Spencer) ರವರು ಸಮಾಜ ಮತ್ತು ಜೀವಿಗಳ ನಡುವೆ ಇರುವ ಸಾಮ್ಯತೆ ಮತ್ತು ಭಿನ್ನತೆಗಳನ್ನು ಕುರಿತಂತೆ" "Evolutionary Theroy and The Organic Analogy" ಎಂಬ ಸಿದ್ಧಾಂತವನ್ನು ಸಮಾಜಶಾಸ್ತ್ರೀಯ ಅಧ್ಯಯನದಲ್ಲಿ ರಚಿಸಿದರು. ಇವರ ಪ್ರಕಾರ ಅಮೀಬಾದಿಂದ ಮಾನವದವರಗೆ ಜೀವ ವಿಕಾಸವಾಗಿರುವಂತೆ ಸಮಾಜವೂ ಸಹ ಚಿಕ್ಕ ಹಂತದಿಂದ ಆರಂಭಗೊಂಡು, ಸಂಕೀರ್ಣ ಸಮಾಜವಾಗಿ ರೂಪಗೊಂಡಿದೆ.[೬]

'ವಸತಿ' ಎಂದರೆ ವ್ಯಕ್ತಿ ತನ್ನ ಮತ್ತು ತನ್ನ ಕುಟುಂಬದವರಿಗಾಗಿ ನಿರ್ಮಿಸಿಕೊಂಡ ರಕ್ಷಣಾ ವ್ಯವಸ್ಥೆ ಎಂಬುದು ಪುರುಷೋತ್ತಮ ಬಿಳಿಮಲೆಯವರ ಅಭಿಪ್ರಾಯವಾಗಿದೆ.[೭] ಈ ವಸತಿ ವ್ಯವಸ್ಥೆ ರಚನೆಯು ಆರಂಭ ಹಂತದಲ್ಲಿ ನೈಸರ್ಗಿಕವಾಗಿ ದೊರೆಯುತ್ತಿದ್ದ ಕಾಡಿನ ಸೊಪ್ಪು, ಕಟ್ಟಿಗೆ, ಹುಲ್ಲು

ಇತ್ಯಾದಿಗಳಿಂದ ರಚಿಸಲ್ಪಟ್ಟಿತ್ತು. ಕಾಲಾನುಕ್ರಮದಲ್ಲಿ ಕಾಡು ನಾಶವಾಗಿ, ಕಾಡಿನ ಸಂಪನ್ಮೂಲಗಳ ಕೊರತೆಯುಂಟಾದಾಗ ಇವರು ಅನಿವಾರ್ಯವಾಗಿ ಭಿಕ್ಷಾಟನೆ ಮತ್ತು ಇತರೆ ಕೆಲಸಕ್ಕೆ ಅನುಕೂಲವಾಗುವಂತೆ ಊರುಗಳಿಂದ ಕೊಂಚ ದೂರವೆನ್ನಿಸಬಹುದಾದ ಬಯಲು ಜಾಗಗಳಲ್ಲಿ ಸಣ್ಣಪುಟ್ಟ ಗುಡಾರ-ಗುಡಿಸಲು ಗಳನ್ನು ಕಟ್ಟಿಕೊಂಡು ವಾಸಿಸುತ್ತಿದ್ದಾರೆ. ಇವರು ಕಟ್ಟಿಕೊಳ್ಳುವ 'ಗುಡಾರ' ಬಹಳ ಸರಳವಾಗಿರುತ್ತದೆ. ಬೇರೆ ಮನೆ ನಿರ್ಮಿಸುವವರ ನೆರವಿಲ್ಲದೆ ತಾವು ತಮ್ಮ ಹೆಂಡತಿ, ಮಕ್ಕಳ ಸಹಾಯದಿಂದ ತಮ್ಮ ಮನೆಯನ್ನು ತಾವೇ ನಿರ್ಮಿಸಿಕೊಳ್ಳುತ್ತಾರೆ.

ಸದಾ ಭಿಕ್ಷೆಬೇಡುವ ಪ್ರವೃತ್ತಿಯವರಾದ ಸಿಂಧೋಳ್ಳುರು ತಮ್ಮ ಜೀವನದ ಬಹುಪಾಲು ಇದರಲ್ಲಿಯೆ ಕಳೆದಿದ್ದಾರೆ. ಕಲಾ ಪ್ರದರ್ಶನವೇ ದೇವರು. ಕಲಾಪೋಷಕರಾದಂತಹ ಜನರೇ ಇವರ ಆಸ್ತಿ. ಅಂತಹ ನೆಲೆಯಲ್ಲಿ ಬದುಕಿದ ಇವರಿಗೆ ಒಂದು ಸ್ಥಿರವಾದ ವಸತಿಯೆಂಬುದೇ ಇಲ್ಲ. ಕರ್ನಾಟಕದಲ್ಲಿ ಸಿಂಧೋಳ್ಳುರ ಬಹುಪಾಲು ಜನರು ವಾಸಿಸುವುದು ನಗರಗಳಲ್ಲಿಯೇ. ನಗರ ಪ್ರಿಯರಾದ ಇವರನ್ನು 'ನಗರ ಸಿಂಧೋಳ್ಳುರು' ಎಂದು ಹೆಸರಿಸಿರುವುದು ಅರ್ಥಪೂರ್ಣವಾಗಿದೆ. ಭಿಕ್ಷೆಯ ಸಹಕಾರ, ಕೂಲಿಕೆಲಸ, ದುಡಿದು ಹಣ ಮಾಡುವ ಹಂಬಲ ಅನಿವಾರ್ಯವಾಗಿ ಇವರನ್ನು ನಗರ ಬದುಕಿಗೆ ಸೆಳೆದಿದೆಯಷ್ಟೆ ಆಧುನಿಕ ಜೀವನದಲ್ಲಿ 'ಗುಡಾರ ಮನೆ' ಅವರ ಪಾಲಿಗೆ ಮನೆಯಾಗಿದೆ.[೬]

**ಸ್ಥಳ ಆಯ್ಕೆ :** ಸಿಂಧೋಳ್ಳುರು ಮೂಲತಃ ಅರಣ್ಯ ಪ್ರದೇಶದಲ್ಲಿ ವಾಸಿಸುತ್ತಿದ್ದು. ಕಾಡು ಪ್ರಾಣಿಗಳ ಹಾವಳಿಯಿಂದಾಗಿ ಭಿಕ್ಷೆ ನೀಡುವ ಜನ, ನೀರಿನ ಸೌಕರ್ಯವಿರುವ ಸ್ಥಳ ಹಾಗೂ ಕೃಷಿ ಕೆಲಸಸಿಗುವ ಪ್ರದೇಶಗಳಲ್ಲಿ ತಮ್ಮ ಬಿಡಾರ ಹೂಡಿದರು. ಸ್ಥಳದ ಆಯ್ಕೆಯ ನಂತರ ಸಮುದಾಯದ ಮುಖ್ಯಸ್ಥರೆಲ್ಲ ಸೇರಿ ಪರಿಶೀಲಿಸಿ, ಮಂಗಳವಾರ ಇಲ್ಲವೇ ಶುಕ್ರವಾರದಂದು ಪ್ರಶಸ್ತ ದಿನವೆಂದು ನಂಬುತ್ತಾರೆ. ಹಾಗೆಯೇ ಅಂದಿನ ದಿನದಲ್ಲಿ ಗುಡಾರ ನಿರ್ಮಾಣ ಮಾಡಲು ಸಜ್ಜಾಗುತ್ತಾರೆ.

**ಗುಡಾರ ನಿರ್ಮಾಣ :** ಪ್ಲಾಸ್ಟಿಕ್ ಚೀಲಗಳಿಂದ ತಯಾರಿಸಿದ ಮನೆಗಳಿಗೆ 'ಗುಡಾರ ಮನೆ' ಎಂದು ಕರೆಯುವರು. ತೆಲುಗು ಭಾಷೆಯಲ್ಲಿ ಡೇರಾ ಎಂತಲೂ ಕರೆದುಕೊಳ್ಳುತ್ತಾರೆ.[೭] ಸಾಮಾನ್ಯವಾಗಿ ಪ್ಲಾಸ್ಟಿಕ್ ಚೀಲಗಳಿಂದ ಗುಡಾರಗಳನ್ನು ತಾವೇ ಮಾಡಿಕೊಳ್ಳುತ್ತಾರೆ. ಗುಡಾರ ಹಾಕಿಕೊಳ್ಳುವ ಮುನ್ನ ಒಂದು ಬಿದಿರು ಕಟ್ಟಿಗೆ, ತರುತ್ತಾರೆ. ಅದನ್ನು ಚಂದ್ರಾಕಾರದಲ್ಲಿ ಹಿಂದೆ, ಮುಂದೆ ಬಗ್ಗಿಸಿ, ಕತ್ತಾಳೆ ನಾರಿನ ಹಗ್ಗವನ್ನು ಕಟ್ಟುತ್ತಾರೆ. ಮತ್ತೆ ಪ್ಲಾಸ್ಟಿಕ್ ಚೀಲಗಳನ್ನು ಚಿಕ್ಕ, ಚಿಕ್ಕ ಕಟ್ಟಿಗೆಗಳಿಗೆ ಬಿಗಿಯಾಗಿ ಕಟ್ಟುತ್ತಾರೆ. ನಡುವೆ ಕಂಬಗಳನ್ನು ನಿಲ್ಲಿಸಿರುತ್ತಾರೆ. ಅದರ ಮೇಲಿನ ರಟ್ಟುಗಳು ಬಿಗಿಯಾಗಿ ನಿಲ್ಲುವಂತೆ ಮಾಡುತ್ತಾರೆ. ಅದಕ್ಕೆ ಬಾಗಿಲು ಕಿಟಕಿಗಳು ಇರುವುದಿಲ್ಲ. ಚಂದ್ರಾಕಾರದ ಬಾಗಿಲಿಗೆ ಹಳೆ ಬಟ್ಟೆಗಳನ್ನು ಪರದೆಯನ್ನಾಗಿಸಿ ಇಳಿಬಿಡುತ್ತಾರೆ. ಗುಡಾರ ಸುತ್ತಲೂ ನೆಲದ ಮೇಲೆ ಒಂದಡಿ ಎತ್ತರಕ್ಕೆ ಮಣ್ಣಿನ ಬದು ಕಟ್ಟಿರುತ್ತಾರೆ. ಒಳಗೆ ನೀರು ಬಾರದಿರಲೆಂದು ಅದರ ಮಗ್ಗಲಿಗೆ ಮಣ್ಣು ತೋಡಿ, ನೀರು ಹರಿದು ಹೋಗುವಂತೆ ಬೇರೆ ದಾರಿ ಮಾಡಿರುತ್ತಾರೆ. ಹಾಗಾಗಿ ಮಳೆ ಬಂದರೂ ನೀರು ಗುಡಾರದ ಒಳಗೆ ಹೋಗದೆ ಮಗ್ಗಲಲ್ಲಿ ಹರಿದು ಹೋಗುತ್ತವೆ. ಗುಡಾರ ಒಳಗಡೆಯಲ್ಲಿ ಹಗ್ಗ ನೇತು ಹಾಕಿರುತ್ತಾರೆ. ಅದರಲ್ಲಿ ಲೋಟಗಳು

ಸಾಂಬರು ಚೌಟು, ಗಂಗಳ ಅಥವಾ ತಟ್ಟೆ ಇತ್ಯಾದಿ ಸಾಮಾನು ಕಂಡು ಬರುವುವು. ಬಲಗಡೆಯಲ್ಲಿ ಮಲುಗುವ ಹಾಸಿಗೆಗಳು ಇಟ್ಟಿರುತ್ತಾರೆ. ಕಾಲ ಬದಲಾದಂತೆ ಗುಡಾರಗಳಲ್ಲಿ ಸಚಿನ್ ತೆಂಡಲ್ಯೂರ್, ಸಿನಿಮಾನಟರಾದ ಚಿರಂಜೀವಿ, ಉಪೇಂದ್ರ, ಪ್ರೇಮಾ ಛಾಯಾಚಿತ್ರಗಳು ಒಳಗಡೆಯಲ್ಲಿ ಹಾಕಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದ ಸಂಗತಿ. ಗುಡಾರ ಹಿಂಭಾಗದಲ್ಲಿ ಸ್ನಾನ ಮಾಡುವುದಕ್ಕಾಗಿ ಪರದೆಯನ್ನು ಎತ್ತರದಲ್ಲಿ ಇಳಿಬಿಟ್ಟಿರುತ್ತಾರೆ. ಮಣ್ಣಿನ ಗಡಿಗೆಗಳಲ್ಲಿ ನೀರು ಕಾಯಿಸಿ ಬಯಲಿನಲ್ಲಿ ಸ್ನಾನ ಮಾಡುತ್ತಾರೆ. ಕೆಲವರು ತಮ್ಮ ಗುಡಾರದ ಹಿಂಭಾಗದಲ್ಲಿ ನಾಲ್ಕು ಮೂಲೆ ಕಡೆಯಲ್ಲಿ ಸೀರೆ ಕಟ್ಟಿಕೊಂಡು ಅದರ ಒಳಗಡೆ ಮಹಿಳೆಯರು ಸ್ನಾನ ಮಾಡುತ್ತಾರೆ.

ಹೊಸದಾಗಿ ಮದುವೆಯಾದ ಗಂಡ ಹೆಂಡಿರು ಹೊಸ ಗುಡಾರದಲ್ಲಿ ಮಲುಗುತ್ತಾರೆ. ಉಳಿದವರು ತಮ್ಮ ತಮ್ಮ ಗುಡಾರದಲ್ಲಿ ಮಲಗುತ್ತಾರೆ. ಮಹಿಳೆಯರು ಗುಡಾರದಲ್ಲಿ ಮಲಗಿದರೆ, ನವಯುವಕರು ಹೊರಗಡೆ ಮಲಗುತ್ತಾರೆ. ಕುಟುಂಬದ ಸದಸ್ಯರ ಬಲ ಹೆಚ್ಚಾದಂತೆಲ್ಲಾ ಹೊಸ ಗುಡಾರಗಳು ನಿರ್ಮಾಣ ವಾಗುತ್ತವೆ. ಕೆಲವರು ಗುಡಾರ ತ್ಯಜಿಸಿ ಗುಡಿಸಲು ನಿರ್ಮಿಸಿಕೊಂಡಿರುತ್ತಾರೆ. ಗುಡಾರದ ಹೊರಗಡೆ ಅಡಿಗೆ ಮಾಡುವ ಮೂರು ಕಲ್ಲು ಹೂಳಿರುತ್ತಾರೆ. ಇತ್ತೀಚಿಗೆ ಸರ್ಕಾರ ಕೆಲವು ಕುಟುಂಬಗಳನ್ನು ಗುರುತಿಸಿ ಮನೆಗಳನ್ನು ನಿರ್ಮಿಸಿಕೊಟ್ಟಿದೆ. ಗುಡಾರಗಳಲ್ಲಿ ದೇವತೆಗೆ ಬಳಸುವ ಪರಿಕರಗಳು ಕಂಡುಬರುವುದು.

**ಗುಡಿಸಲು :** ಗುಡಿಸಲು ೧೩ ರಿಂದ ೧೫ ಅಡಿ ಅಂತರಕ್ಕೆ ನಾಲ್ಕು ದಿಕ್ಕಿನಲ್ಲಿ ನಾಲ್ಕು ಕಂಬಗಳನ್ನು ಕಾಡಿನಿಂದ ತಂದು ಸಮತಟ್ಟಾದ ಭೂಮಿಯ ಮೇಲೆ ಲಂಬವಾಗಿ ಹೂಳುತ್ತಾರೆ. ಕಂಬಗಳು ಎತ್ತರ ಏಳು ಅಥವಾ ಹೆಚ್ಚೆಂದರೆ ಒಂಬತ್ತು ಅಡಿಗಳಿರಬಹುದು. ಕಂಬಗಳನ್ನು ನಾಲ್ಕು ದಿಕ್ಕಿನಲ್ಲಿ ನಿಲ್ಲಿಸಿ ಅದರ ಮಧ್ಯದಲ್ಲಿ ೧೬ ಅಡಿ ಉದ್ದನೆಯ ಕಂಬವನ್ನು ಇಡುತ್ತಾರೆ. ಕಂಬದ ನಾಲ್ಕು ಕಂಬಗಳು ಉದ್ದನೆಯ ಮರದ ಕಟ್ಟಿಗೆ ಇಡುತ್ತಾರೆ. ಮೇಲಿನ ಕಂಬಗಳು ಮೇಲಿನಿಂದ ಇಳಿಜಾರಾಗಿ ಬಿದಿರು ಅಥವಾ ನೇರವಾಗಿ ರುವ ಕಟ್ಟಿಗೆಗಳನ್ನು ಇಳಿಬಿಟ್ಟು ನಾಲ್ಕು ದಿಕ್ಕುಗಳಲ್ಲಿ ಇಳಿಜಾರಿನಂತೆ ಆಸರೆಯಾಗಿರುವ ಕಂಬದ ಮೇಲೆ ಕತ್ತಾಳೆ ನಾರುನಿಂದ ಭದ್ರವಾಗಿ ಬಿಗಿಯುತ್ತಾರೆ. ನಡು ನಡುವೆ ಬಿದಿರು ತೆಳುವಾಗಿರುವಂತೆ ಕಟ್ಟುತ್ತಾರೆ. ಇದು ನಿರ್ಮಾಣವಾದ ಮೇಲೆ ಚಾವಣಿಗೆ ಒಣ ಹಂಚಿಹುಲ್ಲು ಮುಚ್ಚಿ ಮಳೆ ನೀರು ಗುಡಿಸಿಲಿನೊಳಗೆ ಸೋರದಂತೆ ಹೊದಿಸುತ್ತಾರೆ.

ಕೆಳಗಡೆ ತೆಂಗಿನ ಗರಿಗಳಿಂದ ಸುತ್ತುವರಿದು ಕಟ್ಟಿರುತ್ತಾರೆ. ತೆಂಗಿನಗರಿ ಬಾಗಿಲು ಮಾಡಿಕೊಳ್ಳುತ್ತಾರೆ. ಇದಕ್ಕೆ ಕಿಟಕಿ ಇರುವುದಿಲ್ಲ. ಹೊರ ಒಳ ಭಾಗಗಳಿಂದ ತೆಳುವಾಗಿ ಕಲಿಸಿದ ಮಣ್ಣನ್ನು ಮೆತ್ತುತ್ತಾರೆ. ಕೆಲವರು ಜೋಳದ ಸಪ್ಪೆದಂಟುಗಳಿಂದ ಹೆಣೆದ ಬಾಗಿಲನ್ನು ತಯಾರಿಸಿಕೊಳ್ಳುತ್ತಾರೆ. ಒಂದು ಕಡೆ ಕಂಬಕ್ಕೆ ಆಸರೆಯಾಗಿ ಕಟ್ಟಿ, ಮತ್ತೊಂದೆಡೆ ಚಿಲಕತದ ರೂಪದಲ್ಲಿ ನಾರುಗಳಿಂದ ಹೆಣೆದು ಬಾಗಿಲು ಮುಚ್ಚಿದಾಗ ಕಟ್ಟಲು ಅನುಕೂಲ ಮಾಡಿಕೊಂಡಿರುತ್ತಾರೆ. ಹೆಣೆದ ದಾರದಿಂದ ಕಟ್ಟಲು ಆಧಾರಗೂಟ ಒಂದು ನೆಟ್ಟಿರುತ್ತಾರೆ. ಬಾಗಿಲನ ಒಳಗೆ ಹೋಗುವರು ಬಾಗಿ ಒಳಗೆ ನಡಿಯಬೇಕು. ಸಿಂಧೋಳ್ಳುರು ಸಾಮಾನ್ಯವಾಗಿ ಬಾಗಿಲನ್ನು ಸೂರ್ಯ ಹುಟ್ಟುವ ದಿಕ್ಕಿಗೆ ಇಟ್ಟುಕೊಳ್ಳುವುದು ವಾಡಿಕೆಯಾಗಿದೆ.

**ಮನೆಗಳು**

ಕರ್ನಾಟಕದಲ್ಲಿ ೨೦ ಜಿಲ್ಲೆಗಳಲ್ಲಿ ಸಿಂಧೋಳ್ಳು ಸಮುದಾಯದ ಕುಟುಂಬಗಳು ಹರಡಿಕೊಂಡಿವೆ. ಇದರಲ್ಲಿ ೮೪೪ ಮನೆಗಳ ಮಾದರಿ ಈ ರೀತಿಯಾಗಿವೆ

ಕೋಷ್ಟಕ ೩.೧ ಕರ್ನಾಟಕಗ ಸಿಂಧೋಳ್ಳು ಸಮುದಾಯದ ಮನೆಗಳು

| ಸಂ. | ಜಿಲ್ಲೆಗಳು | ಕುಟುಂಬಗಳು | ಮನೆಗಳ ಮಾದರಿ | | | | | |
|---|---|---|---|---|---|---|---|---|
| | | | ಗುಡಾರ | ಗುಡಿಸಲು | ಟಿನ್ | ಮಾಳಿಗೆ | ಹಂಚಿನ | ಜನತಾ |
| ೦೧ | ಬಾಗಲಕೋಟೆ | ೪೨ | ೪೧ | -- | ೦೧ | -- | -- | -- |
| ೦೨ | ಬಳ್ಳಾರಿ | ೧೦೮ | ೭೬ | ೦೪ | -- | -- | ೨೮ | -- |
| ೦೩ | ಬೆಳಗಾವಿ | ೭೫ | ೩೧ | ೦೩ | -- | -- | ೫ | ೩೬ |
| ೦೪ | ಬೀದರ | ೨೮ | -- | -- | ೨೮ | -- | -- | -- |
| ೦೫ | ವಿಜಾಪುರ | ೫೧ | ೨೪ | -- | -- | ೨೭ | -- | -- |
| ೦೬ | ಚಿಕ್ಕಮಗಳೂರು | ೦೨ | ೦೨ | -- | -- | -- | -- | -- |
| ೦೭ | ಚಿತ್ರದುರ್ಗ | ೦೪ | ೦೪ | -- | -- | -- | -- | -- |
| ೦೮ | ದಾವಣಗೆರೆ | ೧೯ | ೧೦ | -- | -- | ೦೨ | ೦೭ | -- |
| ೦೯ | ಧಾರವಾಡ | ೮೪ | ೩೭ | -- | -- | -- | ೪೭ | -- |
| ೧೦ | ಗದಗ | ೩೧ | ೧೯ | -- | -- | -- | -- | ೧೨ |
| ೧೧ | ಗುಲ್ಬರ್ಗಾ | ೧೦೨ | ೨೩ | -- | ೬೦ | ೦೪ | ೧೫ | -- |
| ೧೨ | ಹಾಸನ | ೦೮ | ೦೮ | -- | -- | -- | -- | -- |
| ೧೩ | ಹಾವೇರಿ | ೮೫ | ೫೩ | ೦೩ | -- | -- | ೨೯ | -- |
| ೧೪ | ಕೊಪ್ಪಳ | ೧೯ | ೧೧ | -- | -- | -- | -- | ೦೮ |
| ೧೫ | ಮಂಡ್ಯ | ೩೪ | ೦೬ | -- | -- | -- | ೨೮ | -- |
| ೧೬ | ಮೈಸೂರು | ೧೩ | ೦೨ | ೦೮ | -- | -- | ೦೩ | -- |
| ೧೭ | ರಾಯಚೂರು | ೪೭ | ೧೧ | -- | ೦೫ | -- | -- | ೩೧ |
| ೧೮ | ಶಿವಮೊಗ್ಗ | ೫೩ | ೩೪ | -- | -- | -- | -- | ೧೯ |
| ೧೯ | ತುಮಕೂರು | ೨೨ | ೦೨ | ೦೪ | ೦೧ | -- | ೧೫ | -- |
| ೨೦ | ಉತ್ತರ ಕನ್ನಡ | ೧೭ | ೦೫ | -- | --- | -- | ೧೨ | -- |
| | ಒಟ್ಟು | ೮೪೪ | ೩೯೯ | ೨೨ | ೯೫ | ೩೩ | ೧೮೯ | ೧೦೬ |

**ವಸತಿ ಸ್ಥಾನಮಾನ**

ಹೀಗೆ ಮೇಲಿನ ವಸತಿಗಳನ್ನು ಗಮನಿಸಿದಾಗ ಅತಿ ಹೆಚ್ಚಾಗಿ ಕಂಡುಬರುವ ಗುಡಾರಗಳ ಸಂಖ್ಯೆಯ ಪ್ರಮಾಣ ಶೇ. ೪೭ರಷ್ಟಾಗಿದ್ದು, ಶೇ. ೧೩ ರಷ್ಟು ಜನತಾ ಆಶ್ರಯಮನೆಗಳು ಕಂಡುಬಂದರೆ ಶೇ. ೨೨

ಮತ್ತು ಶೇ. ೧೧ರಷ್ಟು ಹಂಚಿನಮನೆಗಳು ಹಾಗೂ ಟಿನ್ ಮನೆಗಳು ಕಾಣಸಿಗುತ್ತವೆ. ಇನ್ನುಳಿದ ಮಾಳಿಗೆ ಮನೆಗಳು ಶೇ. ೪ ರಷ್ಟಾದರೆ, ಗುಡಿಸಲುಗಳ ಪ್ರಮಾಣ ಶೇ. ೩ರಷ್ಟು ಇದೆ.

**ಉಡುಗೆ - ತೊಡುಗೆ**

ಭಾರತದಲ್ಲಿ ಹಲವು ಬಗೆಯ ಬುಡಕಟ್ಟು ಸಮುದಾಯಗಳಿದ್ದು, ಅವು ತನ್ನದೇ ಆದ ವೇಷ ಭೂಷಣಗಳನ್ನು ಹೊಂದಿವೆ. ತಮ್ಮದೇ ಆದ ವಿಶಿಷ್ಟ ಸಂಪ್ರದಾಯ ಸಂಸ್ಕಾರಗಳಿಂದ ಉಡುಗೆ ತೊಡುಗೆ ಗಳಿಂದ ಗುರುತಿಸಿಕೊಂಡಿದ್ದಾರೆ. ಪ್ರಾದೇಶಿಕವಾಗಿ ಸಿಂಧೋಳ್ಳು ಸಮುದಾಯದಲ್ಲಿ ಭಿನ್ನತೆಗಳಿದ್ದು ಇತರ ಸಂಸ್ಕೃತಿಯ ಪ್ರಭಾವದಿಂದ ಕೆಲವೊಂದು ಮಾರ್ಪಾಡುಗಳಾಗಿರುವುದು ಗೋಚರವಾಗುತ್ತದೆ.

ಮಾನವ ತನ್ನ ಅಂಗಾಂಗಳ ಮುಚ್ಚುವಿಕೆಯ ಮೂಲಕ ಮರ್ಯಾದೆಯನ್ನು ಕಾಪಾಡಿಕೊಳ್ಳುತ್ತಾನೆ. ಈ ಮುಚ್ಚುವಿಕೆ ಉಡುಗೆಯಾಗಿ ಆತನ ಸೌಂದರ್ಯವನ್ನು ವರ್ಧಿಸುವ ಸಾಧನವಾಗುತ್ತದೆ. ಇಂತಹ ಮಾನ ಮುಚ್ಚುವ ಉಡುಗೆ ಬಗೆಗೆ ಪ್ರತಿಯೊಂದು ಸಮುದಾಯವು ತನ್ನದೇ ವೈಶಿಷ್ಟ್ಯತೆಯನ್ನು ರೂಢಿಸಿಕೊಂಡು ಬಂದಿವೆ. ಸಿಂಧೋಳ್ಳು ಸಮುದಾಯ ಅಂತಹ ಉಡುಪಿನಲ್ಲಿ ಕೆಲವು ಕಟ್ಟುಪಾಡುಗಳನ್ನು ಕಾಣಬಹುದಾಗಿದೆ. ಈ ನಿಯಮದಾನುಸಾರ ಪುರುಷರಾಗಲಿ, ಸ್ತ್ರೀಯರಾಗಲಿ ಮೈಮುಚ್ಚುವಂತಹ ಉಡುಪನ್ನು ಧರಿಸಬೇಕೆಂದಿದೆ. ಸ್ತ್ರೀಯರು ತಲೆ ತುಂಬಾ ಸೆರಗು ಮತ್ತು ದೇಹ ಪೂರ್ತಿ ಮುಚ್ಚಿಕೊಳ್ಳುವ ಉಡುಗೆಯನ್ನು ತೊಡಬೇಕೆಂಬ ನಿಯಮವಿದೆ.

ಉಡುಗೆ ಮಾನವನ ಮಾರ್ಯಾದೆ ಕಾಪಾಡಿದರೆ ತೊಡುಗೆ ಮಾನವನ ಸೌಂದರ್ಯ ವರ್ಧಿಸಲು ಸಹಕರಿಸುತ್ತದೆ. ಸಿಂಧೋಳ್ಳುರು ಬೆಳ್ಳಿ ಬಂಗಾರಧಾಭರಣ ಧರಿಸಬಹುದು. ಸ್ತ್ರೀಯರು ದೇಹ ಸೌಂದರ್ಯಕ್ಕಾಗಿ ಅಲಂಕಾರಕ್ಕಾಗಿ ಆಭರಣ ಧರಿಸಬಹುದು. ವಿಶೇಷವೆಂದರೆ ಸ್ತ್ರೀ ಅಲಂಕಾರವು ತನ್ನ ಪತಿಯ ದರ್ಶನಕ್ಕೆ ಸೀಮಿತವಾಗಿರುತ್ತದೆ "ಸಾಮಾಜಿಕ ಮೌಲ್ಯಗಳು ಬದಲಾದಂತೆಲ್ಲಾ, ಜನರ ಸಾಮಾಜಿಕ ಪರಿವರ್ತನೆಗೆ ಒಳಪಟ್ಟಂತೆಲ್ಲಾ, ಪ್ರತಿಯೊಂದು ಸಮೂಹ, ತನ್ನ ನೀತಿ ನಿಯಮಗಳಲ್ಲಿ ಬದಲಾಗುತ್ತದೆ.[೧೦] ಮುಂದುವರಿದ ಸಮಾಜದಲ್ಲಿ ಸಿಂಧೋಳ್ಳುರು ಪಟ್ಟಣದ ಸಂಪರ್ಕ, ಸಿನಿಮಾ, ದೂರದರ್ಶನದಂಥ ಪ್ರಭಾವದಿಂದ ತನ್ನ ಮಡದಿಗೆ ಭಿಕ್ಷೆ ಬೇಡಿ ಬಂದಿರುವಂತಹ ಹಣದಿಂದ ಸೀರೆ, ಕುಪ್ಪಸ, ವಿವಿಧ ಬಗೆಯ ಸರಗಳು, ಓಲೆ, ಮೂಗತಿ ಅಷ್ಟೇ ಏಕೆ ಸಹೋದರಿಗೂ ನೈಟಿಗಳೂ ಕೊಡಿಸುತ್ತಾರೆ. ತನ್ನ ಕೈ ಬರಿದಾಗಿ ಇರಬಾರದೆಂದು ಕೈ ಗಡಿಯಾರ ಕಟ್ಟಿಕೊಳ್ಳುತ್ತಾರೆ. ಹುಡುಗರು ಪ್ಯಾಂಟಗಳು ಧರಿಸುತ್ತಿದ್ದಾರೆ. ಬಣ್ಣದ ಉಡುಪುಗಳು, ಗುಡಾರದಲ್ಲಿ ಸೇರಿಕೊಂಡು ಅವರ ದೇಹವನ್ನು ಅಲಂಕರಿಸುತ್ತಾರೆ. ಬಂಗಾರದ ಒಡವೆಗಳನ್ನೂ ಕೂಡ ಕೆಲವು ಸಿಂಧೋಳ್ಳುರು ಧರಿಸುತ್ತಾರೆ. ತಾಳೆಗರಿಯ ಸುರುಳಿಗಳನ್ನು ಧರಿಸಿ ಅಗಲವಾಗುತ್ತಿದ್ದ ಕಿವಿಯು ಓಲೆಯಿಂದ ಶೃಂಗಾರಗೊಳ್ಳುತ್ತಿವೆ. ಮೂಗುತಿಯನ್ನು ಧರಿಸುತ್ತಾರೆ. ಹೀಗೆ ತಮ್ಮ ತಮ್ಮ ಕೈಲಾದಷ್ಟು ಉಡುಗೆ-ತೊಡುಗೆಗಳು ಧರಿಸಿಕೊಳ್ಳುತ್ತಾರೆ. ಸಿಂಧೋಳ್ಳುರು ಉಡುಗೆ-ತೊಡುಗೆಗಳನ್ನು ಗುರುತಿಸಿ ಕೊಳ್ಳುವದಕ್ಕಾಗಿ ೧. ಸ್ತ್ರೀಯರ ಉಡುಗೆ-ತೊಡಗೆ ೨. ಪುರುಷರ ಉಡುಗೆ-ತೊಡಗೆಗಳೆಂದು ವಿಭಾಗಿಸಿ ನೋಡಬಹುದು.

ಸ್ತ್ರೀಯರ ಉಡುಗೆ-ತೊಡುಗೆಗಳು : ಸಿಂಧೋಳ್ಳುರಲ್ಲಿ ಸ್ತ್ರೀಯರಿಗೆ ಉನ್ನತಸ್ಥಾನವಿದೆ. ಸ್ತ್ರೀಯನ್ನು

ಕೆಳಮಟ್ಟದಲ್ಲಿ ಕಾಣುವ ಪದ್ಧತಿಯಲ್ಲಿ ತಮ್ಮ ಬಡತನಕ್ಕೋಸ್ಕರ ತಮ್ಮ ಸಾಧ್ಯವಿದ್ದಷ್ಟು ಉಡುಗೆ ತೊಡುಗೆಗಳನ್ನು ಧರಿಸುತ್ತಾರೆ. ಸ್ತ್ರೀಯರು ಹೆಚ್ಚಾಗಿ ಸೀರೆ ಮತ್ತು ಕುಪ್ಪಸ ತೊಡುತ್ತಾರೆ. ಸೀರೆ ಉಡುವ ಪದ್ಧತಿಗೆ 'ಸೀರೆನೆರಿಗೆ' ಎಂದು ಕರೆಯುತ್ತಾರೆ.[೧೧] ಸೀರೆಯನ್ನು ಪಾದದ ಕೆಳಗೆ ಬರುವಂತೆ ಉಡುವರು. ಸೀರೆಯ ಮುಸಕು ತಲೆ ತುಂಬಾ ಹಾಕಿ ಕೊಳ್ಳುವರು. ಭಿಕ್ಷೆಗೆ ಹೋಗುವ ಮಹಿಳೆ ಹಳೆಯದಾದ ಸೀರೆ ತಮ್ಮ ಸೊಂಟದಲ್ಲಿ ಮೊಲೆ ಕುಡಿಯುವ ಮಕ್ಕಳನ್ನು ಕಟ್ಟಿಕೊಂಡು ಮನೆ, ಮನೆಗೂ ಭಿಕ್ಷೆ ಕೇಳಲು ಹೋಗುತ್ತಾರೆ. ರಂಗು ರಂಗಿನ ಸೀರೆಗಳೆಂದರೆ ಹೆಚ್ಚು ಇಷ್ಟವಂತೆ.[೧೨] ಜರಿ ಸೀರೆ ಮತ್ತು ಕುಸುರಿ ಕುಪ್ಪಸ ತೊಡುವುದೆಂದರೆ ಎಲ್ಲಿಲ್ಲದ ಪ್ರೀತಿ. ಆದರೆ ಕರಿಸೀರೆ, ಬಿಳಿಸೀರೆ ಧರಿಸುವಂತಿಲ್ಲ. ಕೆಲವು ಸ್ತ್ರೀಯರು ಲಂಗ ಧಾವಣಿ ಆತ್ಮ ತೃಪ್ತಿಗಾಗಿ ತೊಡುವುದು ಕಂಡುಬರುತ್ತದೆ. ವಿಶೇಷವೆಂದರೆ ತಲೆಯ ಮೇಲೆ ಸೆರಗು ಹಾಕಿ ಕೊಳ್ಳುವುದು ಕಡ್ಡಾಯವಾಗಿದೆ. ಮದುವೆಯಾಗುವ ಮದುಮಗಳು ಕೆಂಪು ಮತ್ತು ನೀಲಿ ಸೀರೆ ಧರಿಸಿಕೊಳ್ಳುವರು. ಬೆಳಗಾವಿ ಜಿಲ್ಲೆಯಲ್ಲಿ ಸಿಂಧೋಳ್ಳುರ ಉಡುಗೆ ತೊಡುವುದರಲ್ಲಿ ಭಿನ್ನತೆ ಕಂಡು ಬರುತ್ತದೆ. ಅಲ್ಲಿಯ ಮಹಿಳೆಯರು ಕಚ್ಚೆ ಹಾಕಿಕೊಳ್ಳುತ್ತಾರೆ.

ಸ್ತ್ರೀಯರು ತೊಡುವ ತೊಡುಗೆಗಳು ಇಂತಿಷ್ಟೆ ಎಂದು ಹೇಳಲಿಕ್ಕಾಗದು. ಆದರೆ ಅವುಗಳನ್ನು ತೊಡುವುದು ಕೇವಲ ಹಬ್ಬ ಜಾತ್ರೆಗಳಲ್ಲಿ ಮಾತ್ರ ಎಂಬುದು ಗಮನಿಸಬೇಕಾದ ಅಂಶ. ಸಿಂಧೋಳ್ಳುರು ಅನ್ಯ ಸಂಸ್ಕೃತಿಯ ಪ್ರಭಾವದಿಂದ ಕೆಲವೊಂದು ಆಭರಣಗಳನ್ನು ವಿಶಿಷ್ಟ ಸಂದರ್ಭಗಳಿಗಾಗಿ ಧರಿಸುತ್ತಾರೆ. ಅವುಗಳಲ್ಲಿ ಮೂಗಬಟ್ಟು, ಬೆಂಡೋಲೆ, ಬುಗುಡಿ, ಝುಮಕಿ, ಮುತ್ತಿನ ಸರ, ತಾಳಿ ಸೊಂಟಪಟ್ಟಿ ಧಾರೆಕಡಗ, ಗಾಜಿನ ಬಳೆಗಳು ಇತ್ಯಾದಿಗಳನ್ನು ಸೌಭಾಗ್ಯದ ಲಕ್ಷಣಗಳೆಂದು ನಂಬುತ್ತಾರೆ. ಇವೆಲ್ಲಾ ಹಾಕಿಕೊಳ್ಳುವುದರಿಂದ ಮಹಿಳೆಯರು ನೂರುಕಾಲ ಬಾಳುವರಂತೆ. ಹೀಗಾಗಿ ಸಿಂಧೋಳ್ಳುರ ಉಡುಗೆ-ತೊಡುಗೆಗಳಿಗೆ ಹೆಚ್ಚಿನ ಗಮನಕೊಡುತ್ತಾ ಬಂದಿರುವುದನ್ನು ನೋಡಬಹುದು. ಅವುಗಳಲ್ಲಿ ಈ ಕೆಳಗಿನಂತೆ ವಿವರಿಸಲಾಗಿದೆ.

ಮುಡಿಯಾಭರಣ : ಸಿಂಧೋಳ್ಳು ಸ್ತ್ರೀಯರು ತಲೆಗೂದಲನ್ನು ಹಾಗೆ ಬಿಡದೆ ಒಟ್ಟಾಗಿ ಕೂಡಿಸಿ ಪೋಂದಿಸಿ, ಹೆಣೆದು ಜಡೆ ಹಾಕಿಕೊಳ್ಳುವರು. ಜಡೆಗೆ ಉಲನ್‌ಗೊಂಡೆ ಕಟ್ಟಿಕೊಳ್ಳುವರು. ಕೂದಲು ಒಪ್ಪವಾಗಿರಲು ಹೇರಪಿನ್, ಕ್ಲಿಪ್ ಬಳಸುವರು. ಮದುವೆ ಮೊದಲಾದ ವಿಶಿಷ್ಟ ಪ್ರಸಂಗಗಳಲ್ಲಿ ಬೈತಲೆ ಯಲ್ಲಿ 'ಮಾಂಗಟೀಲಾ' ತೊಡುವರು.

ಮೂಗಬಟ್ಟು : ಮೂಗಿಗೆ ಧರಿಸುವ 'ಬಟ್ಟು' ಮೂಗಬಟ್ಟು ಆಗಿದೆ. 'ಬಟ್ಟು' ಎಂದರೆ ವೃತ್ತ ಎಂದರ್ಥ. ಅಂದರೆ ಇದು ಮೂಗಿಗೆ ಧರಿಸುವ ದುಂಡನೆಯ ಆಭರಣವೆಂದು[೧೩] ಸಿಂಧೋಳ್ಳು ಸುಮಂಗಲೆಯರು ಮೂಗುತಿಗೆ 'ಮೂಗಬಟ್ಟು' ಎಂದು ಕರೆಯುತ್ತಾರೆ. ಸುಮಂಗಲೆಯರು ಧರಿಸುವ ಈ ಮೂಗಿನ ಆಭರಣವನ್ನು ಬಂಗಾರದ ಅಂಗಡಿಯಲ್ಲಿ ಕೊಂಡುಕೊಳ್ಳುತ್ತಾರೆ. "ಬಾಲಾ ಮುಂದು ಮಾಡಿಕೊಂಡು ಹುತ್ತ ಸೇರತತಿ" ಎಂಬ ಒಗಟಿನ ಅರ್ಥ 'ಮೂಗಬಟ್ಟು'. ಅಂದರೆ ಮೂಗಬಟ್ಟು ಮುಂದಿನ ಭಾಗ ದುಂಡಗೆ ವಿವಿಧ ಸುಂದರ ರಚನೆ ಹೊಂದಿ, ಹಿಂದುಗಡೆ ಉದ್ದ ನೇರವಾದ ಕಂಬೆಯನ್ನು ಹೊಂದಿದ್ದು, ಇದು ಮೂಗಿನ ರಂಧ್ರದಲ್ಲಿ ಸೇರುವುದು. ಅದು ಬೀಳದಂತೆ ಒಳಗಡೆ ತಿರುಪಣಿಯನ್ನು ಹಾಕುವಂತೆ ಕಂಬಿಯ ಒಳಗೆ ಸುತ್ತು ಮಾಡಲಾಗಿದ್ದು, ಅದರಲ್ಲಿ ತಿರುಪಣಿಯನ್ನು ತಿರುಗಿಸಿ ಧರಿಸುವರು.

**ಬೆಂಡೋಲೆ :** ಇದು ಕಿವಿಯೋಲೆಗಳಿಗೆ ಹಾಕಿಕೊಳ್ಳುವ ಬಂಗಾರದ ಆಭರಣ. ಸಿಂಧೋಳ್ಳು ಮಹಿಳೆಯರು ಮೊದಲು ಕಿವಿಗಳಿಗೆ ಕಡ್ಡಿ, ಬೆಂಡುಗಳನ್ನು ಇಡಲಾರಂಭಿಸಿದರಂತೆ. ಹೀಗೆ ಬೆಂಡು ಧರಿಸುವ ರೂಢಿ ಬೆಳೆದು ಇದರ ಕಿವಿಯೋಲೆಗಳನ್ನು ಧರಿಸಲು ದೊಡ್ಡರಂಧ್ರ ಮಾಡುವುದಕ್ಕೂ, ಜೋಳದ ಅಥವಾ ಬೇರೆ ಕಡ್ಡಿಗಳನ್ನು ಸಿಪ್ಪೆ ಸುಲಿದು ಒಳಗಿನ ಬೆಂಡನ್ನು ತಿಕ್ಕಿ, ತೆಳ್ಳಗೆ ಮಾಡಿ ಕಿವಿಗೆ ಚುಚ್ಚಿದ ರಂಧ್ರದಲ್ಲಿ ಇಟ್ಟುಕೊಂಡು ಅದಕ್ಕೆ ನೀರು ಹಾಕಿದಾಗ ಅದು ಹಿಗ್ಗಿ ಕಿವಿ ರಂಧ್ರವು ದೊಡ್ಡದಾಗುವುದು. ಹೀಗೆ ಮಾಡುವುದರೊಂದಿಗೆ ಸೌಂದರ್ಯ ಕಲ್ಪನೆ ಬೆರೆತು ಬೆಂಡನ್ನು ಹೂವಿನ ರೀತಿಯಲ್ಲಿ ಸುಂದರವಾಗಿ ಕತ್ತರಿಸಿ ಕಿವಿಯಲ್ಲಿ ಇಡುತ್ತ ಬಂದಿರುವುದರ ಸಂಕೇತವಾಗಿ ಈ ಬೆಂಡೋಲೆ ಎಂಬ ಹೆಸರೂ ಬಂದಿರಬಹುದು. ಸಮುದಾಯದ ಸಣ್ಣ ಹುಡುಗಿಯರಿಗೆ ಮುರುವು ತೆಗೆದು ಬೆಂಡೋಲೆಭರಣ ಆ ರಂಧ್ರದಲ್ಲಿ ಧರಿಸಬೇಕಾದರೆ, ರಂಧ್ರ ದೊಡ್ಡದನ್ನಾಗಿ ಮಾಡಲು ಬೆಂಡು ಬಳಸುವುದನ್ನು ಕಾಣುತ್ತೇವೆ. ಹೀಗೆ ಕಿವಿಗೆ ಬೆಂಡು ಇಡುವುದರಿಂದ ಈ ಹೆಸರು ಮುಂದೆ ಬಂಗಾರದ ಕಿವಿಯೋಲೆ ಮಾಡಿ ಧರಿಸಿಕೊಂಡಾಗಲೂ ಬೆಂಡೋಲೆ ಎನ್ನುವುದು ಹಾಗೇ ಉಳಿದುಕೊಂಡು ಬಂದಿರುವುದು ಗಮನಾರ್ಹ ಸಂಗತಿಯಾಗಿದೆ.



**ಬುಗುಡಿ :** ಕಿವಿ ಮೇಲೆ ಧರಿಸುವ 'ಬುಗುಡಿ' ಎಂಬ ಆಭರಣವನ್ನು 'ಮುಗಳು' ಎಂತಲೂ ಕರೆಯುವರು. ಮೊಗ್ಗಿನಂತೆ ಹಾಗೂ ಕಳಸದಂತಿರುವುದರಿಂದಲೇ ಈ ಹೆಸರುಗಳು ಇದಕ್ಕೆ ಬಂದಿರಬಹುದು. ಹಾಗೂ ಪ್ರಾಗೈತಿಹಾಸಿಕ ಕಾಲದಿಂದಲೂ ಮೊಗ್ಗಗಳನ್ನು ಆಭರಣದಂತೆ ಬಳಸಿದಕ್ಕೆ ಸಾಕಷ್ಟು ಆಧಾರಗಳಿವೆ. ಈ ಕಾರಣದಿಂದಲೂ 'ಮುಗಳು' ಎಂಬ ಹೆಸರು ಉಳಿದುಕೊಂಡು ಬಂದಿರಬಹುದು. ಬುಗಡಿಯಲ್ಲಿ ಮುತ್ತಿನ ಬುಗುಡಿ, ನೆಲ್ಲೆಕಾಯಿ ಬುಗುಡಿ, ಚೆಳ್ಳೆತುಂಬಿನ ಬುಗುಡಿ ಸಿಂಧೋಳ್ಳು ಸ್ತ್ರೀಯರ ಸೌಭಾಗ್ಯ ಸೂಚಕ ಆಭರಣಗಳಲ್ಲೊಂದಾಗಿದೆ. ಬುಗುಡಿಯನ್ನು ಧರಿಸಲು ಹುಡುಗಿಯರು ಬೆಳೆಯುತ್ತಿದ್ದಂತೆ ಮುಳ್ಳಿನಿಂದ ಇಲ್ಲವೇ ಸೂಜಿಯಿಂದ ರಂಧ್ರಮಾಡಿ ಬುಗುಡಿ ಧರಿಸುವವರೆಗೆ ಅದರಲ್ಲಿ ಕಡ್ಡಿಯನ್ನು ಇಡುವರು. ಮೊದಲು ಬುಗುಡಿ ಆಭರಣದ ಬಗ್ಗೆ ಮಾಹಿತಿ ಗೊತ್ತಿರುವಂತಿಲ್ಲವಂತೆ. ಆಧುನಿಕ ಪ್ರಭಾವದಿಂದ ಮದುವೆಯ ಆಚರಣೆಗಳಲ್ಲಿ ಗಂಡನ ಮನೆಯವರು ಬುಗುಡಿಯನ್ನು ಹುಡುಗಿಗೆ ಹಾಕುತ್ತಿದ್ದರಂತೆ. ಇದರ ಅನುಕರಣೆಯಿಂದ ಬುಗುಡಿ ಆಭರಣ ಕೊಡುವ ಸಂಪ್ರದಾಯವಿದೆ. ಮಂಗಲದಾಯಕ ಮತ್ತು ಸಿಂಧೋಳ್ಳು ಮುತ್ತೈದೆಯರು ಬುಗುಡಿಯನ್ನು ಯಾವಾಗಲೂ ಧರಿಸಿಕೊಂಡೇ ಇರುತ್ತಾರೆ. ಕಿವಿಯ ಶಿಖರದ ಈ ತೊಡಿಗೆ ಬಂಗಾರ ಮತ್ತು ಮುತ್ತಿನ ಗುಂಡುಗಳಿಂದ ಬಳಸಿರುವ ಅನೇಕ ವೈವಿಧ್ಯಮಯ ಆಕಾರಗಳಾದ ಕಡ್ಡಿಬುಗುಡಿ, ಮುತ್ತಿನ ಬುಗುಡಿ, ಗುಂಡಿನ ಬುಗುಡಿ, ಎಲೆಬುಗುಡಿ ಇತ್ಯಾದಿ ಪ್ರಕಾರಗಳನ್ನು ಸ್ತ್ರೀಯರು ಧರಿಸಿಕೊಳ್ಳುತ್ತಾರೆ. ಇವು ಧರಿಸಲು ಅನುಕೂಲತೆಗಾಗಿ ತಿರುಪಣಿಯ ರಚನೆಯನ್ನು ಮಾಡಿರುತ್ತಾರೆ.



ಚೆಳ್ಳೆತುಂಬಿನ ಬುಗುಡಿ　　ಮುತ್ತಿನ ಬುಗುಡಿ

**ಝುಮಕಿ :** ಕಿವಿಯೋಲೆಗೆ ಸಣ್ಣ ಸರಪಳಿಯಿಂದ ಹೊಂದಿಕೊಂಡು ನೇತಾಡುತ್ತಿರುವ ಗಂಟೆಯಾಕಾರದ ಕಿವಿಯಾಭರಣವೇ ಝುಮಕಿ. ಇದನ್ನು ಜುಮಕಿ, ಜಿಮಕಿ, ಬುಟಿಕೆ, ಜುಬಕಿ, ಜುಮುಕಿ, ಝುಮಕಿ ಎಂದೆಲ್ಲ ಕರೆಯುವರು. ಬಂಗಾರದಲ್ಲಿ ಮಾಡಿದ ಇವುಗಳಿಗೆ ಹರಳುಗಳನ್ನು ಕೀಲಿಸಿ ಕೆಳಗಡೆ ಮುತ್ತುಗಳನ್ನು ಅಥವಾ ಬಂಗಾರದ ಸಣ್ಣ ಗುಂಡುಗಳನ್ನು ಜೋಡಿಸಿರುವರು. ಚಳತುಂಬ ಚಳತೊಂಬು ಎಂಬ ಆಭರಣಕ್ಕೆ ಕನ್ನಡ ನಿಘಂಟುಗಳಲ್ಲಿ "ಬಲೆಗೆ ಸೇರಿಸುವ ಜುಮಕಿಯಂತಹ ಅಲ್ಲಾಡುವ ಆಭರಣ" ಎಂದು ಅರ್ಥೈಸಿದ್ದಾರೆ.[೨೭] ಚಳಕಾಯಿ ತುಂಬಿನ ಹಾಗೇ ಇರುವ ಝುಮಕಿಯನ್ನು 'ಚಳತುಂಬು' ಎಂದು ಕರೆದಿರಬಹುದು.

ಝುಮಕಿ ಎನ್ನುವ ಪದ ಮೂಲತಃ ಕನ್ನಡದ್ದಲ್ಲ. ಹಿಂದಿಯಲ್ಲಿ ಬಳಕೆಯಾಗುವ ಜುಮ ... ಜುಮನಾ ... ಅಂದರೆ 'ಹೊಯ್ದಾಡು' ಇಲ್ಲವೆ 'ನೇತಾಡು' ಎಂಬುದರಿಂದ ಬಂದಿರುವ ಸಾಧ್ಯತೆ ಇದೆ. ಈ ಆಭರಣವು ನೇತಾಡುತ್ತಾ ಇರುವುದರಿಂದ ಜುಮಕಿ ಎನ್ನುವ ಹೆಸರು ಬಂದಿರುವ ಸಾಧ್ಯತೆ ಇದೆ. ಕ್ರಿ.ಪೂ. ೨೫೦೦ರ ಪ್ರಾಚೀನ ಸಿಂಧೂಕಣಿವೆಯ ನಾಗರಿಕತೆಗೆ ಸಂಬಂಧಿಸಿದ ಆಭರಣಗಳಲ್ಲಿ 'ಜಮ್ಮು' ಎಂಬ ಕಿವಿಯಾಭರಣ ಲೋಕಪ್ರಿಯವಾಗಿತ್ತು ಎಂದು[೨೮] ತಿಳಿದುಬರುತ್ತದೆ. ಹಾಗಾದರೆ ಈ 'ಜಮ್ಮು' ಎಂಬ ಕಿವಿಯಾಭರಣವೇ 'ಜುಮಕಿ' ಆಗಿರುವ ಸಾಧ್ಯತೆಯಿದೆ.


ಹರಳಿನ ಜುಮಕಿ  ಮುತ್ತಿನ ಜುಮಕಿ

ಸಿಂಧೋಳ್ಳು ಸುಮಂಗಲೆಯರು ಹರಳಿನ ಜುಮಕಿ ಹಾಗೂ ಮುತ್ತಿನ ಜುಮಕಿಗೆ ಮಹತ್ವ ನೀಡಿದ್ದಾರೆ. ತಮ್ಮ ಸೌಂದರ್ಯ ಕಲ್ಪನೆಯಿಂದ, ಹಬ್ಬಹರಿದಿನ, ಜಾತ್ರೆ-ಉತ್ಸವ ಮುಂತಾದ ಶುಭ ಹಾಗೂ ಸಂತೋಷಕೂಟದಲ್ಲಿ ಝುಮಕಿಯನ್ನು ಧರಿಸಿಕೊಳ್ಳುತ್ತಾರೆ. ಕಿವಿ ಓಲೆ ಜೊತೆಗೆ ಧರಿಸುವ ಝುಮಕಿಯನ್ನು ನಿತ್ಯ ಧರಿಸಿದರೆ ಕಿವಿ ಓಲೆಯ ರಂಧ್ರ ಭಾರದಿಂದ ಜಗ್ಗಿ ಹರಿಯುವ ಸಾಧ್ಯತೆ ಇರುವುದು. ಅಲ್ಲದೆ ಝುಮಕಿ ಧರಿಸಿ ಮಲಗುವುದು ಕಷ್ಟ. ಹಾಗೇನಾದರೂ ಮಲಗಿದರೆ ಅವು ಒತ್ತಿ ಅದರ ರೂಪ ರಚನೆ ಕೆಡುತ್ತದೆ. ಹೀಗಾಗಿ ನಾವುಗಳು ದಿನನಿತ್ಯ ಧರಿಸುತ್ತಿಲ್ಲವೆಂದು ಹೇಳುತ್ತಾರೆ.[೨೯]


ಕೆಂಪುಮಣಿಸರ

**ಕೆಂಪುಮಣಿಸರ :** ಮಣಿಸರಗಳಲ್ಲಿಯೇ ಕೆಂಪುಮಣಿ ಸರಗಳಿಗೆ ಸಿಂಧೋಳ್ಳು ಸಮುದಾಯದಲ್ಲಿ ಹೆಚ್ಚಿನ ಪ್ರಾಮುಖ್ಯತೆ ಇದೆ. ಇವರಲ್ಲಿ ಕೆಂಪುಮಣಿಸರ ಹಾಕಿಕೊಳ್ಳುವುದು ಮೊದಲಿನಿಂದಲೂ ಬಂದಿದೆಯಂತೆ.[೩೦] ಕೆಂಪು ಮಣಿಸರ ಧರಿಸುವುಗು ಕೆಟ್ಟದೃಷ್ಟಿ ತಾಗಬಾರದೆಂದು ಇದ್ದರೆ, ಇನ್ನೊಂದರಲ್ಲಿ 'ಧಾರೆ ಮಣಿಗಳು' ಕೂಡ ಆಗಿವೆ. ತಮ್ಮ ಎದೆ ಭಾಗವನ್ನು ಈ ಕೆಂಪು ಮಣಿಸರಗಳಿಂದಲೇ ಹಾಕಿಕೊಂಡಿರುವುದು ಚಿತ್ರದಲ್ಲಿ ಕಾಣಬಹುದು. ಕೆಂಪುಮಣಿ ಸರವನ್ನು ಧರಿಸುವಲ್ಲಿ ಸೌಂದರ್ಯ

ಪ್ರಜ್ಞೆಯ ಜೊತೆಗೆ ಸಾಂಕೇತಿಕತೆಯೂ ಆಕರವಾಗಿದೆ. ಸಿಂಧೋಳ್ಳು ಸ್ತ್ರೀಯರು ಕೆಂಪುಮಣಿಸರಗಳನ್ನು ಒಂದೆಳೆ ಧರಿಸಿದ್ದು ಕಾಣುವುದಿಲ್ಲ. ಕಡಿಮೆ ಎಂದರೆ ಎರಡು ಎಳೆ ಇರುತ್ತವೆ. ಬಹಳ ಎಳೆಗಳ ರೂಪದಲ್ಲಿ ಧರಿಸಿದ್ದರೂ ಅವು ತೊಡಕಾಗಬಾರದೆಂದು ಎರಡರಿಂದ ನಾಲ್ಕು ಎಳೆಗಳನ್ನು ಆಯ್ದು ತಿರುಪಿ ಹುರಿ ಮಾಡಿದ ದಪ್ಪಸರ ಮಾಡಿರುತ್ತಾರೆ. ಈ ಕೆಂಪು ಮಣಿಯನ್ನು 'ಧಾರೆಮಣಿ', 'ಗರತಿಮಣಿ' ಎಂದೂ ಕರೆಯುವರು. ತಾಳಿಯ ಕರಿಮಣಿಸರ ಜೊತೆಯಲ್ಲಿ ಕೆಂಪುಮಣಿಸರ ಮಧ್ಯದಲ್ಲಿ ಹಾಕಿಕೊಂಡಿರುತ್ತಾರೆ. ಆದಕಾರಣ ಕೆಂಪುಮಣಿಸರಕ್ಕೆ ಹೆಚ್ಚು ಮಹತ್ವ ದೊರೆಯಿತೆನ್ನಬಹುದು.

**ಮುತ್ತಿನ ಸರ :** "ಸರದಾಗ ಸರ ಯಾವ ಸರ" ಎಂಬ ಒಗಟಿನ ಉತ್ತರ 'ಮುತ್ತಿನ ಸರ'. ಇದರಿಂದ ಮುತ್ತಿನ ಸರದ ಮಹತ್ವವನ್ನು ತಿಳಿಯುತ್ತೇವೆ. ಇದು ಜಲಜನ್ಯ ವಸ್ತುಗಳಲ್ಲಿ ಒಂದಾದರೂ ನವರತ್ನಗಳಲ್ಲಿ ತನ್ನ ಸ್ಥಾನವನ್ನು ಗಿಟ್ಟಿಸಿಕೊಂಡ ಅಮೂಲ್ಯ ರತ್ನ. ಮಕ್ಕಳಿಂದ ಮುದುಕರವರೆಗೂ ಲಿಂಗಭೇದವಿಲ್ಲದೆ, ಮುತ್ತಿನ ಸರ ಧರಿಸಿದ್ದನ್ನು ಕಾಣುತ್ತೇವೆ. ಅದೇ ರೀತಿ ಸಿಂಧೋಳ್ಳು ಸಮುದಾಯ ಹುಡುಗಿಯರು ಮುತ್ತಿನ ಸರ ಧರಿಸಿಕೊಳ್ಳುತ್ತಾರೆ. ಮುತ್ತಿನ ಸರ ಧರಿಸುವುದರಿಂದ ಸೌಂದರ್ಯ ಹೆಚ್ಚಿಸುವುದಲ್ಲದೆ ಶೋಭೆಯನ್ನು ನೀಡುತ್ತದೆ.


ಮುತ್ತಿನ ಸರ

**ತಾಳಿ :** ಹೆಣ್ಣಿನ ಸೌಭಾಗ್ಯ ಲಕ್ಷಣಗಳಲ್ಲಿ ಪ್ರಮುಖ ಸ್ಥಾನವನ್ನು ಪಡೆದಿರುವ ತಾಳಿಗೆ ಸಿಂಧೋಳ್ಳುರ ಸಂಸ್ಕೃತಿಯಲ್ಲಿ ವಿಶಿಷ್ಟ ಸ್ಥಾನವಿದೆ. ಓಲೆ, ಬಳೆ, ಮೂಗಬಟ್ಟು ಇವು ಕೂಡ ಇವರ ಮುತ್ತೈದೆಯ ಸಂಕೇತವಾದ ಆಭರಣಗಳಾದರೂ, ಬಾಲ ಮುತ್ತೈದೆಯವರೆಂದು ಕರೆಯಲಾಗುವ ಹುಡುಗಿಯರು ಮದುವೆಯಾಗದೇ ತಾಳಿ ಧರಿಸುವಂತಿಲ್ಲ. ಕೇವಲ ಮುತ್ತೈದೆಯರು ಮಾತ್ರ ಧರಿಸುವಂತಹ ಈ ತಾಳಿಯು ದಾಂಪತ್ಯದ ಅಥವಾ ಮದುವೆ ಆಗಿರುವ ಹೆಣ್ಣಿನ ಸಂಕೇತವನ್ನು ಸೂಚಿಸುವಂತಹದು.

'ತಾಳಿ' ಎನ್ನುವುದು ಕನ್ನಡ, ತಮಿಳು, ಮಲೆಯಾಳಂ, ತುಳು, ತೆಲುಗು ಭಾಷೆಗಳಲ್ಲಿದೆ. ಅಂದರೆ 'ತಾಳಿ' ದ್ರಾವಿಡ ಪದ ಎಂಬುದರಲ್ಲಿ ಸಂದೇಹವಿಲ್ಲ. ವಾಸ್ತವವಾಗಿ ತಾಳಿ ದ್ರಾವಿಡ ಸಂಪ್ರದಾಯ, ಇದು ಕ್ರಮೇಣ ಪ್ರಸರಿಸಿ ಆರ್ಯ ಸಮುದಾಯಗಳಲ್ಲಿ ಆಚರಣೆಗೆ ಬಂದಿತೆಂದು ಖಚಿತವಾಗಿ ಹೇಳಬಹುದು.[೨೧] ತಾಳಿಯನ್ನು ಇಂದು ಚಿನ್ನದಲ್ಲಿ ಅಥವಾ ಬೆಳ್ಳಿಯಲ್ಲಿ ಮಾಡಲಾಗಿರುವ ಬಟ್ಟಾಲಾಕಾರದಲ್ಲಿ ಇರುವ ಪದಕದಂತಹ ಒಡವೆ ಎನ್ನಬಹುದು.

**ಸೊಂಟಪಟ್ಟಿ :** ಬೆಳ್ಳಿ ಬಂಗಾರ ಇಲ್ಲವೆ ಮಿಶ್ರಬಳ್ಳಿಯಿಂದ ತಯಾರಿಸಲಾಗುವ ಒಂದೂವರೆ ಇಂಚಿನಿಂದ ಎರಡೂವರೆ ಇಂಚು ಅಗಲವುಳ್ಳ ವೃತ್ತಾಕಾರದ ಪಟ್ಟಿಯೇ ಸೊಂಟಪಟ್ಟಿ. ಈ ಕುರಿತು ಕ್ರಿ.ಶ. ಸುಮಾರು ೯೪೧ರಲ್ಲಿ ರಚಿತವಾದ ಪಂಪನ ಆದಿಪುರಾಣದಲ್ಲಿ "ಪಟ್ಟಿಗೆ ಕಟಿಸೂತ್ರಮೆಂಬವು ಮನಂಗೊಳೆ ಮನ್ಮಥ ಚಕ್ರವರ್ತಿಕೆಗಳೆ ವಿನೋದದಾಕೆ ಗಳೆನಲ್ ಮೇಚಿದೆತ್ತ ವಿಳಾಸಿನೀಜನಂ"[೨೨] ಕ್ರಿ.ಶ. ೧೨೩೦ರಲ್ಲಿ ರಚನೆಗೊಂಡ ಜನ್ನನ ಅನಂತನಾಥ ಪುರಾಣದಲ್ಲಿ "ಕಟಿಸೂತ್ರದ ಪಟ್ಟಗೆಯಂತಿರೆ ಎಸೆದಿರ್ಪುವು ಮೇಖಲೆ ಕೊಡೆ ನಾಲ್ಕು ವಿಸ್ತಾರ ಮಾನಾಳ್ದು ಪತ್ಯ ಕದಿಥಿತ್ಯಕದಂತರ ದಂತರಾಳದಾ"[೨೩]

ಎಂದು ಇವುಗಳಲ್ಲಿ ಸೊಂಟಪಟ್ಟಿ 'ಪಟ್ಟಿಗೆ' ಎಂದು ಉಲ್ಲೇಖಗೊಂಡಿರುವುದನ್ನು ಕಾಣುತ್ತೇವೆ. ಹೀಗೆ ಈ ಉಲ್ಲೇಖಗಳಿಂದ ಪ್ರಾಚೀನ ಕಾಲದಿಂದಲೂ ಸೊಂಟಪಟ್ಟಿ ಇರುವುದೆಂದು ತಿಳಿಯಬಹುದು.

"ಹಸರ ದಟ್ಟಿ ಬಂಗಾರ ಪಟ್ಟಿ
ಉಟಗೋ ಅಂದ್ರ ಸೆಟಗೊಂಡು ಹೋಗುತಾಳೆ" ೨೪


ಸರಪಳಿ ಪಟ್ಟಿ

ಎಂದು 'ಹಸರದಟ್ಟಿ ಬೆಳ್ಳಿ ಪಟ್ಟಿ' ಎಂದೂ ಒಡಪುಗಳಲ್ಲಿ ಬಂಗಾರ ಮತ್ತು ಬೆಳ್ಳಿ ಸೊಂಟಪಟ್ಟಿಗಳ ಉಲ್ಲೇಖಗಳನ್ನು ಕಾಣುತ್ತೇನೆ. ಸೊಂಟಪಟ್ಟಿಗಳ ತಯಾರಿಕೆಯಲ್ಲಿ ಬಳಸಲಾದ ಲೋಹವನ್ನು ಆಧರಿಸಿ ಬಂಗಾರಪಟ್ಟಿ, ಬೆಳ್ಳಿ ಪಟ್ಟಿ ಎಂದು ಗುರುತಿಸುವುದನ್ನು ಕಾಣುತ್ತೇವೆ. ಈ ಪಟ್ಟಿಗಳನ್ನು ಧರಿಸಲು ಬರುವಂತೆ ಮುಂದೆ ಸರಪಳಿಯನ್ನು ಮಾಡಿ, ಅಲ್ಲಿ ಕೊಂಡಿ ಸಿಕ್ಕಿಸುವಂತಹ ರಚನೆಯನ್ನು ಹೊಂದಿರುತ್ತವೆ. ಆದರೆ ಇಂದು ಬಂಗಾರದ ಪಟ್ಟಿಗಳು ಅಪರೂಪಕ್ಕೆ ಎನ್ನುವಂತೆ ಶ್ರೀಮಂತ ಹಳೆ ಆಭರಣ ಆಸಕ್ತರಲ್ಲಿ ಮಾತ್ರ ಕಾಣುತ್ತೇವೆ. ಸಿಂಧೋಳ್ಳು ಸುಮಂಗಲೆಯರಲ್ಲಿ ಬೆಳ್ಳಿ ಪಟ್ಟಿಯನ್ನು ಕಾಣಬಹುದು. ಅದು ಆಭರಣಗಳ ಗುಣಮಟ್ಟ ಅವರ ಆರ್ಥಿಕ ಸ್ಥಿತಿಯನ್ನು ಅವಲಂಬಿಸಿರುವುದನ್ನು ಮನಗಾಣಬಹುದು. ಈ ಬೆಳ್ಳಿ ಪಟ್ಟಿಗಳ ರಚನೆ ಮತ್ತು ಅದಕ್ಕೆ ಅಳವಡಿಸಿದ ವಸ್ತುಗಳ ಹಿನ್ನೆಲೆಯಲ್ಲಿ ಸಾದಾ ಪಟ್ಟಿಯನ್ನು ಉಪಯೋಗಿಸಿಕೊಳ್ಳುತ್ತಾರೆ.

ಸಾದಾ ಪಟ್ಟಿ : ಸಿಂಧೋಳ್ಳು ಮಹಿಳೆಯರ ಸಾದಾ ಸೊಂಟಪಟ್ಟಿಯನ್ನು ಧರಿಸುತ್ತಾರೆ ಮತ್ತು ಅವರವರ ಗಾತ್ರಕ್ಕೆ ಅಳವಡಿಸಿಕೊಳ್ಳಬಹುದಾದ ಕೊಂಡಿ ವ್ಯವಸ್ಥೆ ಪಟ್ಟಿಯ ಮುಂದುಗಡೆಯೇ ಇರುತ್ತದೆ. ಇದು ಸೊಂಟವನ್ನು ಸುಂದರವಾಗಿ ರೂಪಿಸುವುದಲ್ಲದೇ, ಉಟ್ಟಸೀರೆಯನ್ನು ಬಿಗಿಯಾಗಿ ಹಿಡಿದಿಡುವ ಉಪಯೋಗಿ ವಸ್ತುಕೂಡ ಇದಾಗಿದೆ. ಇಂದಿಗೂ ನಾವು ಹಳೆಧಡಿ ಸೀರೆಯ ಮೇಲೆ ಯಾವಾತ್ತಿಗೂ ಈ ಪಟ್ಟಿಯನ್ನು ಧರಿಸುವುದನ್ನು ಕಾಣುತ್ತೇನೆ.೨೫ "ಸುತ್ತರದ ಬೇಲಿ ನಡದಕ ಕೀಲಿ" ಈ ಒಗಟಿನ ಉತ್ತರ 'ನಡುಪಟ್ಟಿ'ಯೇ ಆಗಿದೆ.



ಧಾರೆ ಕಡಗ : ಸಿಂಧೋಳ್ಳು ಮಹಿಳೆಗೆ ಮದುವೆಯ ಸಂದರ್ಭದಲ್ಲಿ ತೊಡಿಸುವ ಕಡಗ. ಕ್ರಿ.ಶ.ಸುಮಾರು ೧೨೩೩ರಲ್ಲಿ ರಚನೆಗೊಂಡ ಶಿಶುಮಾಯಣನ ಅಂಜನಾ ಚರಿತ್ರೆಯಲ್ಲಿ "ಧಾರೆ ಕಡಗ ನೇವುರ ಪೊಪರನ್ನದ ಜಾರುತರದ ಸೂಡಗವನು ನಾರಿಯ ಕರಯುಗದೊಳಂದು ಸತಿಯರು ಸೇರಿಸಿದರು ನಲವಿನಲಿ" ಮತ್ತು ಕ್ರಿ.ಶ. ೧೭೨೦ರಲ್ಲಿ ರಚನೆಗೊಂಡ ಇಮ್ಮಡಿ ಗುರುಸಿದ್ಧರ 'ಹಾಲಾಸ್ಯ ಪುರಾಣ'ದಲ್ಲಿ "ಗಿಳಿದಾಲಿ ತೋಳಬಂದಿ ಧಾರೆಗಡಗಂ........ ಕನ್ನಿಕೆಯಂ"೨೬ ಈ ಉಲ್ಲೇಖಗಳಲ್ಲಿ ಧಾರೆ ಕಡಗದ ಪ್ರಸ್ತಾಪವನ್ನು ಕಾಣುತ್ತೇವೆ. ಹೀಗೆ ಈ ಕೈಗಡಗಗಳು ಪ್ರಾಗೈತಿಹಾಸಿಕ ಕಾಲದಿಂದಲೂ ಸಂರಕ್ಷಣೆ, ನಂಬಿಕೆ, ಹರಕೆ, ಸಂಕೇತವಾಗಿ ಇವುಗಳಿಗಿಂತ ಮಿಗಿಲಾಗಿ ಸೌಂದರ್ಯ ಪ್ರಜ್ಞೆಯಿಂದ ಅಲಂಕಾರಕ್ಕಾಗಿ ಉಪಯೋಗಿಸುತ್ತಾ ಬಂದಿರುವುದನ್ನು ಕಾಣಬಹುದು. ಹಾಗೆ ಸಿಂಧೋಳ್ಳರಲ್ಲಿ ಕಡಗವನ್ನು ಧರಿಸಿದರೆ 'ಪತಿರಾಯ' ನೂರು ವರ್ಷ ಆಯುಷ್ಯವಿರುವುದೆಂದು ಇವರಲ್ಲಿ ನಂಬಿಕೆ ಇದೆ.

**ಗಾಜಿನ ಬಳೆಗಳು :** ಮಣ್ಣಿನ ಲೋಹದ ಬಳೆಗಳ ನಂತರ ಗಾಜಿನ ಬಳೆಗಳು ರೂಢಿಗೆ ಬಂದವು. ಗಾಜಿನ ಬಳೆಗಳು ಕ್ರಿ.ಶ. ೧೦೦೦ಕ್ಕೂ ಹಿಂದಿನಿಂದಲೂ ಬಳಕೆಯಲ್ಲಿವೆ ಎಂದು ವಿದ್ವಾಂಸರು ನಂಬಿದ್ದರು. ಪಂಪನ "ಬಳೆಯ ಪೇರನಾನೆ ಮೆಟ್ಟಿದಂತೆ" ಎಂಬ ಮಾತನ್ನೂ ಅವನಿಗಿಂತ ಸ್ವಲ್ಪ ಈಚಿನ ಸೋಮದೇವನ ಯಶಸ್ತಿಲಕ ಚಂಪೂ ಕಾವ್ಯದಲ್ಲಿ ಗಾಜಿನ ಬಳೆಗಳು ವಿಷಯವಿರುವುದನ್ನೂ ಗಮನಿಸಿದರೆ, ಗಾಜಿನ ಬಳೆಗಳ ಇತಿಹಾಸ ಕ್ರಿ.ಶ. ೧೦೦೦ಕ್ಕಿಂತ ಹಿಂದೆ ಹೋಗುತ್ತದೆ ಎಂಬುದು ಸ್ಪಷ್ಟವಾಗುತ್ತದೆ.[೨೭] ಕ್ರಿ.ಪೂ. ೩೦೦ರ ಹಿಂದಿನ ಕಾಲದ ಚಂದ್ರವಳ್ಳಿಯ ಭೂ ಶೋಧನೆಯಲ್ಲಿ ಶಂಖದ, ಲೋಹದ ಹಗ್ಗದ ಬಳೆಗಳೊಂದಿಗೆ ಕರಿಯ, ಬಿಳಿಯ, ಹಸಿರು ವಿವಿಧ ಗಾಜಿನ ಬಳೆಗಳು ದೊರೆತಿವೆ.[೨೮] ಇದರಿಂದ ಸುಮಾರು ೨೩೯೫ ವರ್ಷಗಳ ಹಳೆಯ ಇತಿಹಾಸ ಗಾಜಿನ ಬಳೆಗಳಿವೆ ಎನ್ನುವುದು ಈ ಆಧಾರದಿಂದ ತಿಳಿಯುತ್ತದೆ. ಗಾಜಿನ ಬಳೆಗಳಲ್ಲಿ ಒಂದಾದ ಹಸಿರು ಬಳೆಗಳು ಸಿಂಧೋಳ್ಳು ಸಮುದಾಯದಲ್ಲಿ ಹೆಚ್ಚಿನ ಪ್ರಾಶಸ್ತ್ಯ ಪಡೆದಿವೆ. ಮತ್ತು ದೇವತೆಗಳಿಗೆ ಹಾಕುವ ಪಸಿರು ಬಳೆಗಳು ಮುತ್ತೈದೆಯ ಸಂಕೇತವೆಂದು ಭಾವಿಸುತ್ತಾರೆ. ಸಿಂಧೋಳ್ಳುರ ಎರಡು ಕೈಗಳಲ್ಲಿ ಹಸಿರು ಬಳೆಗಳನ್ನು ಹಾಕಬೇಕು ಎಂಬ ನಂಬಿಕೆ ಹೊಂದಿದ್ದಾರೆ. ಗಾಜಿನ ಬಳೆಗಳಲ್ಲಿ ರೇಶ್ಮೆ ಬಳೆಗಳು, ಚಿಕ್ಕಿ ಬಳೆಗಳು, ಗೀರಬಳೆ, ಸುರುಳಿ ಬಳೆಗಳು, ಹಸಿರುಗಾಜಿನ ಬಳೆಗಳು ಕಂಡುಬರುವುವು. ಇವರು ಹೆಚ್ಚಾಗಿ ಹಸಿರು ಬಳೆಗಳನ್ನು ಧರಿಸುತ್ತಾರೆ.

**ಹಸಿರು ಗಾಜಿನ ಬಳೆಗಳು :** ಗಾಜಿನ ಬಳೆಗಳಲ್ಲಿಯೆ ಹಸಿರು ಬಳೆಗಳ ಸ್ಥಾನ ಮಹತ್ವದ್ದಾಗಿದೆ. ಸಿಂಧೋಳ್ಳುರ ಯಾವುದೆ ಮಂಗಳಕಾರ್ಯವಿರಲಿ ಅಲ್ಲಿ ಹಸಿರು ಬಳೆಗಳನ್ನೇ ಕಾಣುತ್ತೇನೆ. ಹೆಣ್ಣು ಮಗುವಿನ ತೊಟ್ಟಲಿಗೆ ಹಾಕುವ ಕಾರ್ಯದೊಂದಿಗೆ ಹಸಿರು ಬಳೆಗಳನ್ನು ಧರಿಸುವುದು ಆರಂಭವಾಗುತ್ತದೆ. ಮುಂದೆ ಹೆಣ್ಣು ಮೈ ನೆರೆದಾಗ ಹಸಿರು ಬಳೆಗಳನ್ನು ತೊಡಿಸುವರು. ಮದುವೆಯ ನಿಶ್ಚಯದಲ್ಲಿ ಹಸಿರು ಬಳೆಗಳನ್ನು ಇಡುವರು. ಮದುವೆಯಲ್ಲಿ ಬಳೆತೊಡಿಸುವ ಸಂಪ್ರದಾಯವನ್ನು ಕಾಣುತ್ತೇವೆ. ಇಲ್ಲಿ ಮದುಮಗಳಿಗಲ್ಲದೆ, ಬಂಧುಬಳಗದವರಿಗೆಲ್ಲಾ ಬಳೆ ತೊಡಿಸುವ ಶಾಸ್ತ್ರ ಮಾಡುತ್ತಾರೆ. ಮದುಮಗಳಿಗೆ ಅವರವರ ಪದ್ಧತಿಗಳಿಗನುಸಾರವಾಗಿ ಒಂದು ಕೈಗೆ ಹನ್ನೊಂದು, ಇನ್ನೊಂದು ಕೈಗೆ ಹನ್ನೆರಡು ಎಂದು ಸೇರಿ ಬೇಸ ಮಾಡಿ ಬಳೆ ತೋಡಿಸುವುದೇ ಹೆಚ್ಚು. ಉಳಿದ ಬಂಧುಗಳಿಗೆ ಕೆಲವರಿಗೆ ಕೈ ತುಂಬಾ ತೊಡಿಸಿದರೆ, ಕೆಲವರು ಐದ್ಯೆದು ಇಲ್ಲೆ ಎರಡೆರಡು ಬಳೆಗಳನ್ನಾದರೂ ತೊಟ್ಟುಕೊಳ್ಳುವರು.[೨೯] ಗರ್ಭಿಣಿ ಯಾದವರಿಗೆ ಕುಪ್ಪಸ ಕಾರ್ಯ ಮಾಡುವಾಗ ಹಸಿರು ಬಳೆಗಳನ್ನು ತೊಡಿಸುವರು. ಮಗುವಿಗೆ ಜನ್ಮ ನೀಡಿ, ಆ ಮಗುವಿಗೆ ನಾಮಕರಣ ಮಾಡುವಾಗಲೂ ಮತ್ತೆ ಹಸಿರು ಬಳೆಗಳನ್ನು ತೋಡಿಸುವರು. ಭಿಕ್ಷೆಗೆ ಹೋದಾಗ ಹಸಿರು ಬಳೆಗಳು ಹಾಕಿಕೊಂಡು ಹೋಗುವರು.[೩೦] ಮುಂದೆ ಮುತ್ತೈದೆಯಾಗಿ ಸತ್ತರೆ ಆಗಲೂ ಅವಳಿಗೆ ಹಸಿರು ಬಳೆಗಳನ್ನು ತೊಡಿಸಿ ಸಿಂಗರಿಸುವುದನ್ನು ಕಾಣಬಹುದು. ಹೀಗೆ ತೊಟ್ಟಿಲಿನಿಂದ ಮುತ್ತೈದೆ ಚಟ್ಟದವರೆಗೆ ಸ್ತ್ರೀ ಬಾಳಿನಲ್ಲಿ ಹಸಿರು ಬಳೆಗಳು ಹಾಸುಹೊಕ್ಕಾಗಿವೆ. ಇಷ್ಟೊಂದು ಮಹತ್ವಪೂರ್ಣ ಸ್ಥಾನವನ್ನು ಪಡೆದಿರುವ ಈ ಬಳೆಗಳು ದೇವತೆಗಳಿಗೆ ಧರಿಸುವ ನಂಬಿಕೆಯಿಂದಲೂ ಹಾಗೂ ಹಸಿರು ಅಭಿವೃದ್ಧಿ ಅಥವಾ ಬೆಳವಣಿಗೆಯ ಸಂಕೇತವಾಗಿರುವುದರಿಂದ ಸ್ತ್ರೀ ಬಾಳು ಸದಾ ಸುಖಮಯವಾಗಿರಲಿ ಎಂಬ ನಂಬಿಕೆಯೂ ಇದಕ್ಕೆ ಪ್ರಮುಖ ಕಾರಣವಾಗಿರಬಹುದು.

**ಕಾಲುಂಗುರಗಳು :** ಹೆಸರೇ ಸೂಚಿಸುವಂತೆ ಕಾಲ್ಬೆರಳಿಗೆ ಸುತ್ತಿಕೊಂಡು ಸರಳ ರಚನೆಯಲ್ಲಿರುವ ಆಭರಣವೇ ಕಾಲುಂಗುರ. ಇದನ್ನು ಹೆಚ್ಚಾಗಿ ಬೆಳ್ಳಿಯಲ್ಲಿ ಮಾಡಲಾಗಿದ್ದು, ಈ ಉಂಗುರಗಳು, ಎರಡು,

ಐದು ಇಲ್ಲವೇ ಏಳು ಸುತ್ತಿನವುಗಳಾಗಿ ್ರತ್ತವೆ. ಇವರಲ್ಲಿ ವಾರಮೀನು, ಸುರಳಿ, ಹೂವಿನಪಿಲ್ಲೆ, ರನ್‌ಜೋಡ, ಕಳಸದ ಪಿಲ್ಲೆ ಮತ್ತು ಮಿಂಚು ಎಂಬ ಸುತ್ಕಾಲುಂಗುರಗಳನ್ನು ಸಿಂಧೋಳ್ಳು ಮುತ್ತೈದೆಯವರು ಮದುವೆಯ ದಿನದಂದು ಧರಿಸುವರು. ಹೀಗಾಗಿ ಇದಕ್ಕೆ ಮಹತ್ವದ ಸ್ಥಾನ ದೊರೆತಿದೆ. ಕಾಲುಂಗುರದ ಸುಂದರ ಉಲ್ಲೇಖ ರಾಮಾಯಣದಲ್ಲಿಯೂ ಚಿತ್ರಿತವಾಗಿದೆ ಹರಿಹರನ ಗಿರಿಜಾ ಕಲ್ಯಾಣದಲ್ಲಿ "ನೆರೆದು ಪಳಂಚುವ ಕಾಲುಂಗುರದ ರವಂ"[೩೧] ಎಂದು ವಿರೂಪಾಕ್ಷ ಪಂಡಿತನ ಚೆನ್ನಬಸವ ಪುರಾಣದಲ್ಲಿ "ಮುಡಿವೂಗಳಂ ಕದಡೆ ಕಾಲುಂಗುರ ಗಳೋದ"[೩೨] ಎಂದು ಕಾಲುಂಗುರದ ಪ್ರಸ್ತಾಪವನ್ನು ಗುರುತಿಸಬಹುದು.




**ಪುರುಷರ ಉಡುಗೆ-ತೊಡುಗೆಗಳು :** ಸಿಂಧೋಳ್ಳುರು ತಮ್ಮದೇ ಆದ ರೀತಿಯಲ್ಲಿ ವಿಶಿಷ್ಟವಾದ ಉಡುಗೆ ತೊಡುಗೆಗಳು ಧರಿಸುವುದು ರೂಢಿ. ಆದರೂ ಬುಡಕಟ್ಟೇತರ ಸಂಸ್ಕೃತಿಯ ಪ್ರಭಾವದಿಂದ ಸಿಂಧೋಳ್ಳುರು ಅನ್ಯ ವೇಷಭೂಷಣ ಧರಿಸುವರು. ಪುರುಷರು ಹೆಚ್ಚಾಗಿ ಕಚ್ಚೆಯನ್ನು ಧರಿಸುವರು. ಕಚ್ಚೆಯನ್ನು ಕುಲದ ಮುಖ್ಯಸ್ಥನು ಮಾತ್ರ ಹಾಕಿಕೊಂಡಿರುತ್ತಾನೆ. ಇದರ ಒಳಗಡೆಯಲ್ಲಿ ಒಳ ಉಡುಪದ 'ಚಲ್ಲಣ' ಅಥವಾ 'ಲಾಡಿ ನಿಕ್ಕರ್' ಹಾಕಿಕೊಂಡಿರುತ್ತಾನೆ. ಪ್ರಾದೇಶಿಕವಾಗಿ ಭಿನ್ನತೆಗಳಿದ್ದರೂ ಕಚ್ಚೆಯನ್ನು ಧರಿಸುವರು. ಹಾಗೂ ತಲೆಗೆ ರುಮಾಲು ಸುತ್ತಿಕೊಂಡಿರುತ್ತಾರೆ. ಮಂಗಳ ಕಾರ್ಯಕ್ರಮಗಳಲ್ಲಿ ರುಮಾಲು ಸುತ್ತಿಕೊಳ್ಳುವುದು ಕಡ್ಡಾಯವಾಗಿದೆ.

ನವ ಯುವಕರು ಲುಂಗಿ ಮತ್ತು ಅಂಗಿ ಧರಿಸುತ್ತಾರೆ. ಲುಂಗಿಯಲ್ಲಿ ಹೆಚ್ಚಾಗಿ ಬಿಳಿಲುಂಗಿ ಧರಿಸುತ್ತಾರೆ. ಭಿಕ್ಷಾಟನೆ ಸಂದರ್ಭದಲ್ಲಿ ಅಂಗಿಯನ್ನು ಧರಿಸುವಂತಿಲ್ಲ. ಭಿಕ್ಷಾಟನೆ ಮುಗಿದ ನಂತರ ಅಂಗಿ ಧರಿಸುತ್ತಾರೆ. ಪೂಜೆ ಮಾಡುವಾಗ ತಲೆಯ ಮೇಲೆ ಟವಲ್ ವಸ್ತ್ರ ಇರಬೇಕೆಂಬುದು ಸಂಪ್ರದಾಯ. ಸಿಂಧೋಳ್ಳು ಪುರುಷರ ಬಂಗಾರದಾಭರಣ ಉಂಗುರು, ಕಿವಿ ಬೆಂಡಾಲಿ ಧರಿಸುವರು ಆದರೂ ತೊಡುಗೆಗಳ ಬಗ್ಗೆ ಕಡಿಮೆ ಗಮನ ನೀಡಿದರೂ ಅವರು ಭಿಕ್ಷೆಗೆ ಹೋಗುವಾಗ ಕಾಲಲ್ಲಿ ಗೆಜ್ಜೆ, ಉಡುದಾರಗಳನ್ನು ಕಡ್ಡಾಯವಾಗಿ ಬಳಸುತ್ತಾರೆ.

**ಗೆಜ್ಜೆ :** ಅನಾದಿ ಕಾಲದಿಂದಲೂ ಆದಿಮಾನವ ಕಾಡಿನಲ್ಲಿಯೇ ವಿಷಜಂತುಗಳಿಂದ ಪಾರಾಗಲು ಸದ್ದು ಬರುವಂತಹ ವಸ್ತುಗಳನ್ನು ಧರಿಸಿದ. ಅದೇ ಮುಂದೆ ಗೆಜ್ಜೆಗಳಾಗಿ ಪರಿವರ್ತನೆಗೊಂಡದೆ. ಗೆಜ್ಜೆಗಳಿಂದ ಇಂಪಾದ ನಾದ ಹೊರತರಲೆಂದು ಇವುಗಳನ್ನು ಕಂಚಿನ ಲೋಹದ ಪೊಳ್ಳು ರಚನೆಯಲ್ಲಿ ತಯಾರಿಸಲಾಗುವುದು ಗೆಜ್ಜೆಗಳು ಇಂಪಾದ ನಿನಾದಕ್ಕಾಗಿ ಸಿಂಧೋಳ್ಳುರು ಭಿಕ್ಷೆಗೆ ಹೋಗುವ ಸಂದರ್ಭದಲ್ಲಿ, ಪೋತರಾಜ ತನ್ನ ಕಾಲಿಗೆ ಗೆಜ್ಜೆಗಳನ್ನು ಕಟ್ಟಿಕೊಳ್ಳುತ್ತಾನೆ. ಗೆಜ್ಜೆಯನ್ನು 'ನೂಪುರ' ಎಂದು ಕರೆಯುವರು.[೩೩] 'ಗೆಜ್ಜೆ' ಅಥವಾ 'ನೂಪುರ' ಎನ್ನುವುದು ಕಾಲಿನ ಆಭರಣಗಳಿಗೆ ಅಳವಡಿಸುವ ಬಿಡಿ ಭಾಗ. ಇದನ್ನು ಅಳವಡಿಸಿ ತಯಾರಿಸಿದ ಆಭರಣಗಳಿಗೆ 'ಕಾಲ್ಗೆಜ್ಜೆ' ಎಂದು ಕರೆಯುವರು.[೩೪] ಇವರು ಬೆಳ್ಳಿ ಆಭರಣಳಿಂದ ಕಂಚಿನ ಗೆಜ್ಜೆ ಆಭರಣ ಧರಿಸುತ್ತಾರೆ. ಇದನ್ನು ಪೈಜಣ ಎಂತಲೂ ಕರೆಯುವರು.

**ಪೈಜಣ :** ಪೈಜಣ ಕಂಚಿನ ಗೆಜ್ಜೆ ಪೋತರಾಜ ಭಿಕ್ಷಾಟಗೆ ಹೋಗುವಾಗ ಧರಿಸುತ್ತಾನೆ. ಇವು ಪೂರ್ತಿ ಗೆಜ್ಜೆಗಳನ್ನು ಜೋಡಿಸಿಯೇ ಕಾಲಿನ ಭರಣ ತಯಾರಿಸಿರುತ್ತಾರೆ. ಕಂಚಿನ ಪೈಜಣ ಗೆಜ್ಜೆ 'ಘಲ್' 'ಘಲ್' ಎನ್ನುವ ನಿನಾದ ಬರಬೇಕಾದರೆ ಪಟ್ಟಿಯ ಸುತ್ತಲೂ ಗೆಜ್ಜೆ ಗೆಜ್ಜೆಗಳು ತಾಗುವಂತೆ ಜೋಡಿಸಿ ತಯಾರಿಸಲಾಗಿರುತ್ತದೆ. ಗೆಜ್ಜೆಗಳು ಒಂದಕ್ಕೊಂದು ತಾಗುವುದರಿಂದ ಶಬ್ದ ಹೊರಹೊಮ್ಮುತ್ತದೆ.

ಕನ್ನಡ ಪ್ರಾಚೀನ ಸಾಹಿತ್ಯದಲ್ಲಿ ಈ ಆಭರಣ ನೂಪುರ ಅಥವಾ ನೇವುರ ಎಂದು ಉಲ್ಲೇಖಗೊಂಡಿರುವುದನ್ನು ಗಮನಿಸಬಹುದು. ಸುಮಾರು ೮೫೦ರಲ್ಲಿ ರಚನೆಗೊಂಡ ನೃಪತುಂಗನ ಕವಿರಾಜಮಾರ್ಗದಲ್ಲಿ "ವರಹಂಸಕದಂಬಕಮದು ಶರದುಂದಮಲ್ತು ಮುಖಕ ನೂಪುರ ಸಂವಾದಿರವಂ ನೆಗದ್ದಿಪ್ಪುದು"[೩೫] ಸುಮಾರು ೯೪೧ರಲ್ಲಿ ರಚಿತವಾದ ಪಂಪನ ಆದಿಪುರಾಣದಲ್ಲಿ "ಸುರಾಸುರೇಂದ್ರ ವೃಂದ ವಂದಿತವಾದುಗೆ ಮೃದು ಪದರಗಳೊಳ್ ಕಲರವರಣಿತ ಮಣಿನೂಪುರಂಗಳಂ ತುಡಿಸಿ"[೩೬] ಕುಮಾರವ್ಯಾಸನ ಮಹಾಭಾರತದಲ್ಲಿ

"ಭ್ರೂಲತೆಯ ಸುರಚಾಪದುರು ಕೇ
ಶಾಳಿಗಳ ಕಾರ್ಮುಗಿಲವಾಂಗದ
ಸಾಲಕುಡಿ ಮಿಂಚುಗಳ ನೂಪುರರವರ....."[೩೭]

ಹೀಗೆ ಪ್ರಾಗೈತಿಹಾಸಿಕ ಕಾಲದಿಂದ ಕಾಲಿನಾಭರಣಗಳಲ್ಲಿ ಗೆಜ್ಜೆ ಮಹತ್ವದ ಪಾತ್ರವಹಿಸಿದೆ. ಈ ಗೆಜ್ಜೆಗಳಿಂದ ಭಿಕ್ಷಾಟನೆ ಜನರುಗಳು ಸದ್ದು ಮಾಡುವಂತಹದು ಮತ್ತು ಆಕರ್ಷಣೆನ್ನುತ್ತಾ ಎಲ್ಲರನ್ನು ಗಮನಿಸಿದೆ.

**ಉಡುದಾರ :** ಉಡುದಾರ ಎಂದರೆ ಪುರುಷರು ಸೊಂಟದ ಸುತ್ತಲೂ ಕಟ್ಟಿಕೊಳ್ಳುವ ದಾರ ಎಂದೇ ಅರ್ಥ. ಇದನ್ನು 'ಹೊಡೆದಾರ', 'ಒಡದಾರ' ಎಂದೂ ಕರೆಯುತ್ತಾರೆ. 'ಹೊಡೆದಾರ' ಎಂದರೆ ಹೊಟ್ಟೆಯ ಮೇಲಿನ ದಾರ ಎಂದೂ, 'ಒಡದಾರ' ಎಂದರೆ ಒಡಲು ಮೇಲಿರುವ ದಾರ ಎಂದೂ ಅರ್ಥೈಸಬಹುದು. ಹುಟ್ಟಿದ ಜೀವ ಹುಟ್ಟಿದ ಹಾಗೇ ಇರಬಾರದು ಎಂಬ ಭಾವನೆ ಉಡಿದಾರ ಕಟ್ಟುವಂತೆ ಅನುವು ಮಾಡಿಕೊಟ್ಟಿತ್ತು. ಮಗು ತಾಯಿಯ ಹೊಕ್ಕಳ ಹುರಿ ಸಂಬಂಧ ಕಳಚಿಕೊಂಡಾಗ ಅದೇ ಸಂಕೇತವಾಗಿಯೂ 'ಉಡಿದಾರ' ಸೊಂಟಕ್ಕೆ ಕಟ್ಟಿರಬಹುದೆಂದು ಊಹಿಸಬಹುದು. ಸಿಂಧೋಳ್ಳುರು ಬಟ್ಟೆಯನ್ನು ಉಡಲು ಅನುಕೂಲಕ್ಕೆಂದು ಉಪಯೋಗಿಸಿಕೊಳ್ಳುತ್ತಾರೆ. ಇವರು ಅನಾದಿ ಕಾಲದಲ್ಲಿ ಬಟ್ಟೆಗಳ ಉಪಯೋಗ ತಿಳಿಯುವ ಮೊದಲು ಸೊಪ್ಪು, ಗರಿಗಳನ್ನು ಸಿಕ್ಕಿಸಿಕೊಳ್ಳಲು 'ನಾರು' ಬಳಸುತ್ತಿದ್ದರಂತೆ.[೩೮] ಹೀಗೆ ಬೆಳಕಿಗೆ ಬಂದ ಉಡುದಾರ ಕುರಿತು ಅನೇಕ ನಂಬಿಕೆ ಆಚರಣೆಗಳು ಬೆಳೆದು, ಉಡುದಾರವಿಲ್ಲದೆ ಗಂಡಸರು ಇರಬಾರದು ಎಂಬ ಭಾವನೆಗೆ ದಾರಿಯಾಯಿತು. ಈಗಲೂ ಕೂಡ ಉಡುದಾರ ಇಲ್ಲಂದ್ರೆ ಹುಡುಗರು ಬೆನ್ನುಮ್ಯಾಲೆ ಹೋಡಿಬಾರ್ದು, ಬಡಿದ್ರೆ ನಪುಂಸಕರಾಗುತ್ತಾರೆ.[೩೯] ಉಡುದಾರ ಇಲ್ಲದ ಗಂಡಸರು ಕತ್ತೆ ಅರಚುವದನ್ನು ಕೇಳಿದರೆ ನಪುಂಸಕರಾಗುತ್ತಾರೆ.[೪೦] ಸೊಂಟದಲ್ಲಿ ಉಡುದಾರ ಹಾಕದಿದ್ದರೆ ಹೊಟ್ಟೆಯಲ್ಲಿ ಹುಳ ಹೆಚ್ಚುತ್ತವೆ.[೪೧] ಮಗನ ಸೊಂಟದಲ್ಲಿ ಉಡದಾರವಿಲ್ಲದೆ ಬೋಳು ಬೆನ್ನನ್ನು ತಾಯಿಯಾದವಳು ನೋಡಬಾರದು.[೪೨] ಎಂಬ ಈ ನಂಬಿಕೆಗಳು ಉಡುದಾರವನ್ನು ಪ್ರತಿಯೊಬ್ಬ ಪುರುಷನು ತೊಡಲೇಬೇಕು ಎಂಬುದನ್ನು ಸೂಚಿಸುತ್ತದೆ. ಹೀಗೆ ರೂಢಿಗೆ ಬಂದ

ಉಡುದಾರವನ್ನು ಮುಂದೆ ಬೆಳ್ಳಿ ಬಂಗಾರಗಳಲ್ಲಿ ತಯಾರಿಸಿ, ಅದರ ಅಂದಕ್ಕೆ ಅನೇಕ ವಿನ್ಯಾಸಗಳಲ್ಲಿ ರೂಪಿಸಿದಾಗ ಅದು ಆಭರಣವಾಗಿ ಪರಿಣಮಿಸಿತು. ಶ್ರೀಮಂತರು ಬಂಗಾರ, ಬೆಳ್ಳಿಯ ಉಡುದಾರ ಧರಿಸಿಕೊಂಡರೆ, ಸಿಂಧೋಳ್ಳುರು ದಾರವನ್ನೇ ತಮ್ಮ ಸೊಂಟದಲ್ಲಿ ಕಟ್ಟಿಕೊಳ್ಳುತ್ತಾರೆ. 'ದಾರ' ಕಟ್ಟಿಕೊಳ್ಳುವುದರಿಂದ ದುಷ್ಟಶಕ್ತಿಗಳಿಂದ ರಕ್ಷಣೆ ಸಿಗುತ್ತದೆ ಎಂಬ ನಂಬಿಕೆ ಇವರಲ್ಲಿದೆ. ಸತ್ತ ವ್ಯಕ್ತಿಯ ಉಡುದಾರವನ್ನು ಹರಿದು ಹಾಕುತ್ತಾರೆ.

**ವೈದ್ಯಪದ್ಧತಿ**

ವನಸಿರಿಯಲ್ಲಿ ಮಗುವಾದ ಮಾನವ ಆದಿಕಾಲದಿಂದಲೂ ವನಸಿರಿಯೊಡನೆ ತನ್ನ ಅಸ್ತಿತ್ವಕ್ಕಾಗಿ ಹೋರಾಡುತ್ತ ಬಂದಿದ್ದಾನೆ. ವನಸಿರಿಯಿಂದ ಪಾಠ ಕಲಿತಿದ್ದಾನೆ, ಲಾಭ ಪಡೆದಿದ್ದಾನೆ. ವನಸಿರಿಯ ಪ್ರಾಂಗಣದಲ್ಲಿ ಬೆಳದ ಮಾನವ ಅವುಗಳೊಂದಿಗೆ ಸ್ಪಂದಿಸಿ, ಅರಿತು, ಬೆರತು ಬಾಳಿ ಬದುಕ ತೊಡಗಿದನು. ಮರದ ತೊಗಟೆಗಳಿಂದ ದೇಹವನ್ನು ರಕ್ಷಿಸಿಕೊಂಡು, ಪ್ರಾಣಿಗಳನ್ನು ಬೇಟೆಯಾಡಿ ಹಸಿವನ್ನು ಹಿಂಗಿಸಿಕೊಳ್ಳ ತೊಡಗಿದನು. ಬರುಬರುತ್ತ ಭೂವಿಯೊಳಗೆ ಬೆಳೆದ ಗಡ್ಡೆ-ಗೆಣಸುಗಳು ಹಸಿವನ್ನು ಹಿಂಗಿಸಬಲ್ಲವು ಎಂಬುದನ್ನು ಅರಿತು ಮಾಂಸಾಹರಿಯಿಂದ ಸಸ್ಯಾಹಾರಿಯಾದನು. ಮುಂದೆ ಗುಂಪು ಕಟ್ಟಿಕೊಂಡು ಜೀವಿಸುತ್ತ ದವಸ ಧಾನ್ಯಗಳನ್ನು ಬೇಯಿಸಿ ತಿನ್ನತೊಡಗಿದನು. ದೈಹಿಕ ರೋಗ ರುಜಿನಗಳು ಬಂದಾಗ ನಿವಾರಣೆಗಾಗಿ ಸಸ್ಯಗಳ ಮೊರೆ ಹೊಕ್ಕನು. ಸಸ್ಯಗಳಲ್ಲಿ ರೋಗ ನಿವಾರಕ ಗುಣ ಇರುವುದೆಂದು ಔಷಧಿ ರೂಪದಲ್ಲಿ ಬಳಸತೊಡಗಿದನು. ಕಾಲಕಳೆದಂತೆ, ಬುದ್ಧಿಬೆಳೆದಂತೆ, ಅನುಭವ ಕ್ಷೇತ್ರ ವಿಸ್ತಾರವಾದಂತೆ ವೈದ್ಯ ಪದ್ಧತಿ ಕಲಿತುಕೊಂಡನು. ಅದು ನಾಟಿವೈದ್ಯ, ನಾಡವೈದ್ಯ, ಮನೆಮದ್ದು, ಕೈ ಔಷಧಿ, ಹಸಿರು ಔಷಧಿ ಮೊದಲಾಗಿ ಕರೆಯುವ ವೈದ್ಯವೇ ಜನಪದ ವೈದ್ಯವಾಗಿದೆ.''[೪೩] ತರುವಾಯ ಅವನ ವೈದ್ಯದ ಸಾಮಾಗ್ರಿಗಳು ಹೆಚ್ಚಾದವು. ತನ್ನ ನಿತ್ಯದ ಆಹಾರ ಪದಾರ್ಥಗಳು ಕೂಡ ಔಷಧಿ ಎಂಬುದನ್ನು ಮನಗಂಡನು. ರೋಗಕ್ಕೆ ಮದ್ದು ಕಂಡು ಕೊಂಡನು. ಒಟ್ಟಾರೆ ವನಸಿರಿಯೊಂದಿಗೆ ಹೋರಾಟ ನಡೆಸಿದ ಮಾನವನ ಜೀವನದಲ್ಲಿ ಜನಪದ ವೈದ್ಯವೇ ಅವನನ್ನು ರಕ್ಷಿಸುವ ಸಂಜೀವಿನಿಯಾಯಿತು.

ಬುಡಕಟ್ಟು ಸಮುದಾಯಗಳು ತಮಗೆ ಬರುವ ರೋಗ ರುಜಿನಗಳನ್ನು ಅಲೌಕಿಕ ಶಕ್ತಿಯೆಂದೇ ನಂಬುತ್ತಾರೆ. ಅನೇಕ ರೋಗಗಳನ್ನು ದೇವರು ನೀಡುವ ಶಿಕ್ಷೆ ಎಂದು ನಂಬುತ್ತಾರೆ. ಅಲ್ಲದೇ ಅದೊಂದು ಅತಿಮಾನುಷ ಶಕ್ತಿಯೆಂದು ತಿಳಿದಿದ್ದಾರೆ. ಇವರು ಅರಣ್ಯವಾಸಿ, ಗುಡ್ಡಗಾಡು, ಹಳ್ಳಕೊಳ್ಳ ಇತ್ಯಾದಿ ನೆಲೆಗಳ ವಾಸಿಗಳಾದುದ್ದರಿಂದ ಅಲ್ಲಿನ ಪ್ರಾಕೃತಿಕ ಕಾರಣಗಳಿಂದಾಗಿ ಕೆಲವು ರೋಗ ಬರುತ್ತಿದ್ದವು. ಆ ರೋಗ ರುಜಿನಗಳ ಬಗ್ಗೆ ಸಾಕಷ್ಟು ಚಿಂತಿಸಿದ್ದಾನೆ. ಪ್ರತಿಬಂಧಕಗಳನ್ನು ಪತ್ತೆ ಹಚ್ಚಿದ್ದಾನೆ. ತಾನು ವಾಸಿಸುವ ಸ್ಥಳಗಳಲ್ಲಿ ಆಶ್ರಯಿಸಿದ ಪ್ರಾಣಿ ಪಕ್ಷಿಗಳ ರೋಗ ಪ್ರತಿಬಂಧಕ್ಕೆ ಕಾರಣಗಳನ್ನೂ, ನಿವಾರಣೋಪಾಯಗಳನ್ನೂ ಕಂಡುಹಿಡಿಯಲು ಹೆಣಗಿದ್ದಾನೆ. ನಿರ್ದಿಷ್ಟ ರೋಗಗಳಿಗೆ, ನಿರ್ದಿಷ್ಟ ಮದ್ದುಗಳನ್ನು ಕಂಡುಕೊಂಡಿದ್ದಾನೆ. ಅವುಗಳಿಂದ ಧೀರ್ಘಕಾಲ ಬದುಕಲು ದಾರಿಮಾಡಿಕೊಂಡಿದ್ದಾನೆ. ಹಿಂದೆ ಸಿಂಧೋಳ್ಳು ಸಮುದಾಯದಲ್ಲಿ ಕಾಡುವ ರೋಗಕ್ಕೆ ನಿಜವಾದ ಕಾರಣ ತಿಳಿದಿರುವಂತೆ ಅವರು ಯಾವುದೇ ನಿಗೂಢ ಶಕ್ತಿ ಇದಕ್ಕೆ ಕಾರಣವೆಂದು ಊಹಿಸಿದ್ದಾನೆ. ಸಮುದಾಯದಲ್ಲಿ ಇದ್ದಕ್ಕಿದ್ದಂತೆ ಅನಾಹುತಗಳು ಇಡೀ ಸಮುದಾಯವನ್ನು ನರಳಿಸುವ, ಸಾಯಿಸುವ, ಸಿಡಬು, ವಾಂತಿಭೇದಿ ಕಾಲರಾ ಪ್ಲೇಗು, ಮಲೇರಿಯಾ,

ಕುಷ್ಠ, ಹುಚ್ಚು ಇತ್ಯಾದಿ ಪೀಡೆಗಳಿಗೆ ದುಷ್ಟಶಕ್ತಿಗಳೇ ಮೂಲಕಾರಣವೆಂದು ಭಾವಿಸಿದನು. ಹಿಂದೆ ಅಲೆಮಾರಿಯಾಗಿದ್ದು, ನಂತರ ಒಂದೆಡೆ ನೆಲೆನಿಂತು ವಾಸಿಸಲಾರಂಭಿಸಿದ. ತನ್ನ ಸಮುದಾಯದ ರಕ್ಷಣೆಗೋಸ್ಕರ ಪ್ರಾಣಿಗಳನ್ನು ಸಾಕತೊಡಗಿದ. ಪ್ರಾಣಾಪಾಯ ಉಂಟು ಮಾಡುತ್ತಿದ್ದ ಕ್ರೂರ ಮೃಗಗಳನ್ನು ನಾನಾ ಉಪಾಯಗಳಿಂದ ಹೆದರಿಸಿ, ಓಡಿಸುವದಕ್ಕಾಗಿ ನಾಯಿಗಳನ್ನು ಸಾಕಿದ. ಸಮುದಾಯಕ್ಕೆ ಅಪ್ಪಳಿಸುವ ಮಾರಿಯ ಹೆಸರಿನಲ್ಲಿ ಕುಲದೇವತೆಯನ್ನು ಮೂಡಿಸಿ, ಊರ ಹೊರಗೆ ಕುಲದೇವತೆಯನ್ನು ಪ್ರತಿಷ್ಠಾಪನೆ ಮಾಡಿದ. ಕುಲದೇವತೆಯ ಆಚರಣೆಯನ್ನು ಮಾಡದಿದ್ದರೆ, ದೈವಶಕ್ತಿಯು ಮುನಿದು ರೋಗದ ರೂಪದಲ್ಲಿ ಕಾಡಿ ಒಮ್ಮೊಮ್ಮೆ ದನಕರುಗಳಿಗೆ ಸಾವು ಬರಬಹುದು, ವಂಶದ ಕುಡಿಯನ್ನು ನಾಶಪಡಿಸಬಹುದು ಎಂದು ನಂಬುತ್ತಾರೆ. ಏನೆಲ್ಲಾ ಪಿಡುಗುಗಳನ್ನು ತಡೆಯುವದಕ್ಕಾಗಿ ಕುಲದೇವತಾ ಆಚರಣೆ ರೂಢಿಯಲ್ಲಿದೆ. ರೋಗಕ್ಕೆ ಸಂಬಂಧಿಸಿದ ಆಚರಣೆ, ನಂಬಿಕೆ, ಮೂಢನಂಬಿಕೆ, ವೈದ್ಯ ಪದ್ಧತಿ, ಮಾಟಮಂತ್ರ, ವೈಜ್ಞಾನಿಕತೆಯೂ ಇದೆ. ಈ ಎಲ್ಲ ಕ್ರಿಯೆಗಳು ಇದ್ದರೂ ರೋಗದ ಜೊತೆಯಲ್ಲಿ ವೈದ್ಯ ಪದ್ಧತಿ ಬೆರುತು ಕೊಂಡಿದೆ. ಯಾವುದೇ ರೋಗದ ಹಿನ್ನೆಲೆಯಲ್ಲಿ ಸಸ್ಯ ಅಂಶಗಳು ತಳಕು ಹಾಕಿಕೊಂಡಿದೆ. ಈ ಪ್ರವೃತ್ತಿ ಹಿಂದಷ್ಟೇ ಇತ್ತು ಎಂದಲ್ಲ, ಈಗಲೂ ಮುಂದುವರೆದಿದೆ. ಆದರೆ ಹಿಂದಿನ ಕಾಯಿಲೆಗಳಿಗಿಂತ ಇಂದು ಹೊಸ ಹೊಸ ಕಾಯಿಲೆಗಳು ಸೃಷ್ಟಿಗೊಂಡಿವೆ. ಹಿಂದಿಗಿಂತಲೂ ಅಪಾಯದ ರೋಗಗಳು ಈಚೆಗೆ ಪತ್ತೆಯಾಗಿದೆ. ಅವುಗಳಲ್ಲಿ ಕ್ಯಾನ್ಸರ್, ಮೂತ್ರಪಿಂಡ ವೈಫಲ್ಯ, ಹೃದ್ರೋಗ, ಮೆದಳು ರೋಗ, ಏಡ್ಸ್ ಮುಂತಾದವು ಜಗತ್ತನ್ನೇ ನಡುಗಿಸುತ್ತಿವೆ. ಆದರೂ ಸಿಂಧೋಳ್ಳು ಸಮುದಾಯ ಮೂಕವೇದನೆಯಂತೆ ನಿಂತುಕೊಂಡಿದೆ. ವೈಜ್ಞಾನಿಕ ಸಂಶೋಧನೆ, ಚಿಕಿತ್ಸೆಗಳು ಇವುಗಳನ್ನು ನಿಯಂತ್ರಿಸಲು ಹೆಣಗುತ್ತಿವೆ. ಆದರೆ ಸಿಂಧೋಳ್ಳುರು ಹಿಂದಿನ ವೈದ್ಯಪದ್ಧತಿಯನ್ನು ಬಿಟ್ಟಿಲ್ಲ. ವೈದ್ಯ ನಂಬಿಕೆಯಿಂದ ತಾಳಿದ್ದಾನೆ. ಹೀಗೆ ರೋಗಗಳನ್ನು ನಿಯಂತ್ರಿಸಲು ಚಿಕಿತ್ಸಾ ವಿಧಾನಗಳನ್ನು ತಮ್ಮ ವಾಸಸ್ಥಳದಲ್ಲಿಯೇ ಮಾಡತೊಡಗಿದರು. ಈ ಕಾರಣದಿಂದ ಕಾಡಿನಲ್ಲಿ ಸಿಗುವ ಗಿಡ, ಮರ, ಬಳ್ಳಿಗಳು ಅವನಿಗೆ ವೈದ್ಯಕೀಯ ಸಂಗಾತಿಗಳಾಗಿವೆ. ಅಲ್ಲದೇ ಅನೇಕ ಕಾಯಿಲೆಗಳಿಗೆ ತಾವೇ ಔಷಧೋಪಚಾರ ಮಾಡಿಕೊಳ್ಳುತ್ತಾರೆ. ಅಲ್ಲದೆ ಕೆಲವೊಮ್ಮೆ ತಮ್ಮ ಸಮುದಾಯದಲ್ಲಿ ಯಾರಾದರೂ ಒಬ್ಬ ವ್ಯಕ್ತಿ ಔಷಧಿಗಳ ಬಗ್ಗೆ ಜ್ಞಾನವಿದ್ದಲ್ಲಿ ಇಡೀ ಜನರಿಗೆ ವೈದ್ಯನಾಗಿ ಕಾರ್ಯನಿರ್ವಹಿಸುತ್ತಾನೆ.[೪೪] ಕೇವಲ ಮನುಷ್ಯರಿಗೆ ಮಾತ್ರವಲ್ಲ, ತಾವು ಸಾಕುತ್ತಿದ್ದ ದನ-ಕರುಗಳ ಕಾಯಿಲೆಗಳಿಗೂ ಔಷಧಿಯನ್ನು ನೀಡುತ್ತಾರೆ.

ಮಾನವರೋಗ : ಸಿಂಧೋಳ್ಳುರಲ್ಲಿ ದೈಹಿಕ ಮತ್ತು ಮಾನಸಿಕ ಅಸ್ವಸ್ಥತೆಯಿಂದ ನರಳುವವರಿಗೆ 'ರೋಗ' ಬಂದಿದೆಯೆಂದು ಹೇಳುತ್ತಾರೆ. ಈ ರೋಗ ಅಥವಾ ಕಾಯಿಲೆಯನ್ನು ಬ್ಯಾನಿ, ಜಿಡ್ಡು, ಹುಷಾರಿಲ್ಲ, ಆರಾಮವಿಲ್ಲ ಇತ್ಯಾದಿ ಪರ್ಯಾಯ ಪದಗಳಿಂದ ಕರೆಯುತ್ತಾರೆ. ದಿನಾಲೂ ಭಿಕ್ಷೆ ಬೇಡಲು ಹೋದರೆ ನಮಗೆ ರೋಗ ಬಂದೇ ಬರುತ್ತದೆ. ಅಥವಾ ಕಾಲಮಾನದ ವೈಪರೀತ್ಯದಿಂದಾಗಿ ನಾನಾ ಬಗೆಯ ರೋಗಗಳು ತಗಲಬಹುದು. ದಿನಾಲೂ ಭಿಕ್ಷೆ ಬೇಡಲು ಹೋದಾಗ ಇವರು ಮೈಯಿಗೆ ಚಾಟಿ ಹೊಡೆದುಕೊಳ್ಳುವುದು, ರಕ್ತಸೋರಿಸುವುದು ಮಾಡುತ್ತಾರೆ. ಇದರಿಂದ ಕೆಲವು ರೋಗಗಳು ಬರಬಹುದು. ಅಲ್ಲದೆ ಭಿಕ್ಷೆಯ ಸಂದರ್ಭದಲ್ಲಿ ಅಳಿಸಲು ಅನ್ನವನ್ನು ನೀಡುವುದೂಂಟು. ಇದನ್ನು ತಿನ್ನುವುದರಿಂದ ಹಲವು ರೋಗಗಳು ಬರುವ ಸಾಧ್ಯತೆಗಳಿರುತ್ತವೆ. ಹೀಗೆ ನಾನಾ ಕಾರಣಗಳಿಂದ ಅಂಟಿಕೊಳ್ಳುವ ರೋಗವನ್ನು

ಮಾನವ ರೋಗವೆಂದು ಗುರುತಿಸಲಾಗಿದೆ. ಕೆಲವು ಸಲ ಸಿಂಧೋಳ್ಳುರು ಮಾನಸಿಕ ಚಿಂತೆಯಿಂದ ಚಿತ್ತವಿಕಾರದಿಂದ ಖಾಯಿಲೆ ಬರುವ ಸಾಧ್ಯತೆಯಿದೆ. ಇದು ಮಾನಸಿಕ ರೋಗ ಹುಚ್ಚು ಮುಂತಾದವು ಈ ವರ್ಗಕ್ಕೆ ಸೇರುತ್ತದೆ. ಮಾಟದಿಂದ ಮಾನಸಿಕ ಕಾಯಿಲೆಗಳುಂಟಾಗುತ್ತದೆ ಎಂಬ ನಂಬಿಕೆ ಸಿಂಧೋಳ್ಳುರಲ್ಲಿದೆ. ಯಾರದರೂ ಮಾಟ ಮಾಡಿಸಿದರೆ ಮೂರು ದಾರಿ ಸೇರುವಲ್ಲಿ ಅನ್ನ ಮಂತ್ರಿಸಿ ನಿಂಬೆಹಣ್ಣು ಇಟ್ಟು ಮಾತನಾಡದೆ, ತಿರುಗಿ ನೋಡದೇ ಬರುವುದು. ಅಮವಾಸ್ಯೆಯ ರಾತ್ರಿ ಮಣ್ಣಿನ ಪರಿಯಾಣದಲ್ಲಿ ಎಲೆ ಅಡಿಕೆ ಬಾಳೆಹಣ್ಣು ಇಡುವುದು, ಮಂಗಳವಾರ ರಾತ್ರಿ ದಾರಿ ಮಧ್ಯದಲ್ಲಿ ಐದು ಗುಂಪು ಉಪ್ಪುಹಾಕಿ ಅವುಗಳ ಮೇಲೆ ಒಣಮೆಣಸಿನಕಾಯಿ ಇಡುವುದು ಕಂಡು ಬರುತ್ತದೆ, ಇದಲ್ಲದೆ ದೃಷ್ಟಿ ನಿವಾಳಿಸುವುದು ತಾಯತ ಕಟ್ಟಿಸುವುದು ಮುಂತಾದ ನಂಬಿಕೆಗಳು ಈ ಸಮುದಾಯದ ಆಚರಣೆಯಲ್ಲಿವೆ.

ದೈಹಿಕ ರೋಗಗಳಲ್ಲಿ ಕೆಲವು ಸಾಂಕ್ರಾನಿಕ ರೋಗಗಳಿರುತ್ತವೆ. ಇವರ ಪ್ರಕಾರ ಅಂದರೆ ಒಬ್ಬರಿಂದ ಇನ್ನೊಬ್ಬರಿಗೆ ಬಹುಬೇಗನೆ ರೋಗ ಹರಡಿಕೊಳ್ಳುತ್ತವೆಯಂತೆ. ರೋಗಗ್ರಸ್ತ ಮನುಷ್ಯ ಮಾತನಾಡಿದಾಗ ಕೆಮ್ಮಿದಾಗ, ಸೀನಿದಾಗ, ಉಗುಳಿದಾಗ, ಮಲಮೂತ್ರ ವಿಸರ್ಜನೆ ಮಾಡಿದಾಗ ಹೊರ ಬೀಳುವ ರೋಗಾಣುಗಳಿಂದ ರೋಗ ಒಬ್ಬರಿಂದ ಒಬ್ಬರಿಗೆ ಹರಡುವ ಸಂಭವವಿರುತ್ತದಂತೆ. ರೋಗಿಯ ಮಲಿನವಾದ ಬಟ್ಟೆಬರೆಗಳನ್ನು ಧರಿಸುವುದರಿಂದ, ಮುಟ್ಟುವುದರಿಂದ ರೋಗಿಯನ್ನು ಸ್ಪರ್ಶಿಸುವುದರಿಂದಲೂ ಅಂಟುರೋಗಗಳು ಹರಡುತ್ತವೆಂಬ ತಿಳಿವಳಿಕೆ ಇವರಲ್ಲಿದೆ.

**ವೈದ್ಯವಿಧಾನ :** ಜನಪದ ವೈದ್ಯ ಪದ್ಧತಿಯಲ್ಲಿ ರೋಗಿಗೆ ಮಾತ್ರವಲ್ಲ ಆ ರೋಗವನ್ನು ನಿವಾರಿಸುವ ವೈದ್ಯನಿಗೂ ತನ್ನ ವೈದ್ಯಕೀಯ ಪದ್ಧತಿ ಮೇಲೆ ಹಾಗೂ ತನ್ನ ಔಷಧ ವಿಧಾನ ಮೇಲೆ ಅಪಾರವಾದ ನಂಬಿಕೆಯಿರುತ್ತದೆ. ಈ ನಂಬಿಕೆಯಿಂದಲೇ ರೋಗ ನಿವಾರಿಸಿದರೂ ವೈದ್ಯನು ತನ್ನ ಅನುಕೂಲ ದೇವರ ವಿಶೇಷ ಶಕ್ತಿಯಿಂದ ಇದು ಸಾಧ್ಯವಾಗಿದೆ ಎಂಬ ವಿಚಾರವನ್ನು ಸಿಂಧೋಳ್ಳು ಮುಖ್ಯಸ್ಥನು ಬೇರೂರಿಸಿ ಕೊಂಡಿರುತ್ತಾರೆ. ಸಿಂಧೋಳ್ಳುರ ವೈದ್ಯ ವಿಧಾನದ ಬಗ್ಗೆ ಹೇಳುವಾಗ ಯಾವ ರೋಗಕ್ಕೆ ಯಾವ ಮದ್ದು, ಅದನ್ನು ಬಳಸುವ ಬಗೆ ಹೇಗೆ ಎಂಬುದನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಲಾಗಿದೆ. ನಿದರ್ಶನಕ್ಕೆ ಕೆಲವು ಔಷಧೋಪಚಾರದ ವಿಧಾನಗಳನ್ನು ಇಲ್ಲಿ ಚರ್ಚಿಸಲಾಗಿದೆ.

**ಕಿವಿಸೋರುವುದು :** ಮಕ್ಕಳಿಗೆ ಕಿವಿ ಸೋರುವುದು ಕಂಡು ಬಂದರೆ, ಮುಖ್ಯಸ್ಥನು ಬಿಸಿನೀರನ್ನು ಬಾಯಿಯಲ್ಲಿ ಹಾಕಿಕೊಂಡು ಸೋರುವ ಕಿವಿಗೆ ಉಗುಳುವರು. ಸ್ವಲ್ಪ ಸಮಯದ ನಂತರ ಬೆಳ್ಳುಳ್ಳಿಯನ್ನು ಕೊಬ್ಬರಿ ಎಣ್ಣೆಯಲ್ಲಿ ಕಾಯಿಸಿ, ಕಿವಿಗೆ ಹಾಕುತ್ತಾರೆ. ಕಿವಿ ಸೋರುವ ಪ್ರಮಾಣ ಜಾಸ್ತಿಯಾಗಿದ್ದರೆ ಮತ್ತು ಒಂದು ವಾರದವರೆಗೆ ಕಿವಿ ಸೋರುತ್ತಿದ್ದರೆ ಹಸಿ ಶುಂಠಿ ರಸವನ್ನು ಕಾಯಿಸಿ ಕಿವಿಯಲ್ಲಿ ಹಾಕುತ್ತಾರೆ. ಒಂದು ವಾರದಿಂದ ಹದಿನೈದು ದಿನಗಳವರೆಗೆ ಕಿವಿ ಸೋರುತ್ತಿದ್ದರೆ ಮಾಪಾಳಕಾಯಿ ಕುಟ್ಟಿ ಅದಕ್ಕೆ ಹಸಿ ಶುಂಠಿಯ ರಸ ಬೆರಸಿ, ಒಂದು ಚಮಚದಲ್ಲಿ ಕಾಯಿಸಿ ಕಿವಿಗೆ ಪ್ರತಿದಿನ ರಾತ್ರಿ ಹಾಕಿದರೆ ಮೂರು ದಿನದಲ್ಲಿ ಕಿವಿ ಸೋರುವುದು ನಿಲ್ಲುತ್ತದೆಯಂತೆ.

**ಕೆಮ್ಮು :** ಪೂಜಾರಿ ತನ್ನ ಸಮುದಾಯದ ಮಕ್ಕಳಿಗೆ ಎಣ್ಣೆಯ ಪದಾರ್ಥಗಳನ್ನು ತಿನ್ನಬಾರದೆಂದು

ಸೂಚನೆ ನೀಡುವನು. ಅಲ್ಲದೆ ಎಕ್ಕೆ ಗಿಡದ ಹೂವನ್ನು ತೆಗೆದುಕೊಂಡು ಅದರಲ್ಲಿ ಸ್ವಲ್ಪ ಬೆಲ್ಲ, ಖಾರದಪುಡಿ ಹಾಕಿ ಕುಟ್ಟಿಕೊಡುವರು ಸ್ವಲ್ಪ ದೀರ್ಘವಾಗಿರುವ ಕೆಮ್ಮು ಬಂದಿದ್ದರೆ ಬೇವಿನ ಗಿಡ ಎಲೆ ಹಾಗೂ ಸೈಂದರ ಲವಣವನ್ನು ಚೆನ್ನಾಗಿ ಕುಟ್ಟಿ, ಜೇನುತುಪ್ಪದಲ್ಲಿ ಕೊಡುವರು. ಕೆಮ್ಮು ಕನಿಷ್ಠ ಮೂರು ದಿನದಿಂದ ಏಳು ದಿನಗಳಲ್ಲಿ ಕಡಿಮೆಯಾಗುವುದು.

**ಅ. ಮಂದಭೇದಿ :** ಮಗು ಸರಿಯಾಗಿ ಹಾಲು ಕುಡಿಯದೆ, ಅನ್ನ ತಿನ್ನದೆ ಚೀರುವುದು. ಭೇದಿ ಮಾಡುವಾಗ ಜೋರಾಗಿ ಹೂಸುವುದು. ನೋವಿನಿಂದ ಜೋರಾಗಿ ಅಳುವುದು ಇತ್ಯಾದಿ ಮಾಡಿದರೆ ಮಂದ ಭೇದಿಯಾಗಿದೆ ಎಂದು ಹೇಳುತ್ತಾರೆ.[೨೫] ತಾಯಿ ಬಳಸುವ ಆಹಾರದಿಂದ ಮಗುವಿಗೆ ಹಾಲು ಕುಡಿಸಿದ್ದರಿಂದ ಬರುತ್ತದೆಂದು ಹೇಳುತ್ತಾರೆ. ಮಗುವಿನ ಮೈ ಬಿಸಿಯಾಗಿದ್ದು ಜ್ವರ ಬಂದಂತೆ ಕಾಣುತ್ತದೆ. ಮಂದಭೇದಿಯಾದ ಮಗು ಬಹಳ ಬಳಲಿದಂತೆ ಕಾಣುತ್ತದೆ. ಅಂತಹ ಸಂದರ್ಭದಲ್ಲಿ ಮೂರು ಲೋಟದಷ್ಟು ನೀರಿನಲ್ಲಿ ಒಂದು ನಿಂಬೆಹಣ್ಣಿನ ರಸ, ಒಂದು ಚಮಚ ಉಪ್ಪುಹಾಕಿ. ಬೆಂಕಿಯಮೇಲೆ ಕಾಯಿಸುತ್ತಾರೆ. ಇದರಿಂದ ಬಂದ ಕಷಾಯ(ಔಷಧಿ)ವನ್ನು ಮುಂಜಾನೆ ಸಮಯದಲ್ಲಿ ತಾಯಿಯ ಎದೆ ಹಾಲಿನ ಜೊತೆ ಕುಡಿಸಿದರೆ ಮಂದಭೇದಿ ವಾಸಿಯಾಗುತ್ತದೆಂದು ಹೇಳುತ್ತಾರೆ.

**ಆ. ಜ್ವರ :** ಬೇವಿನ ಗಿಡದ ಹತ್ತು ಎಲೆಗಳು, ಹತ್ತು ಕರಿಮೆಣಸಿನಕಾಳು, ತುಳಸಿದಳ ಐದು ಇವೆಲ್ಲವನ್ನು ಸೇರಿಸಿ ನುಣ್ಣಗೆ ಕಲ್ಲಿನ ಮೇಲೆ ಅರೆದು ಆಹಾರ ಸೇವಿಸುವ ಮುನ್ನ ಅದರ ರಸವನ್ನು ಐದು ದಿನ ಸೇವಿಸಿದರೆ ಜ್ವರ ವಾಸಿಯಾಗುತ್ತದೆ.

**ಇ. ತಲೆನೋವು :** ತಲೆನೋವು ಬಂದರೆ ಬೇವಿನ ಸೊಪ್ಪು ಅರೆದು ಕರಿಮೆಣಸು ನೀರಿನಲ್ಲಿ ಬೆರೆಸಿ ಮೂಗಿನ ಹೊಳ್ಳೆಗಳ ಮೂಲಕ ರಸ ಬಿಟ್ಟರೆ ನಿಧಾನವಾಗಿ ವಾಸಿಯಾಗುತ್ತದೆ ಎನ್ನುತ್ತಾರೆ. ಮೂಗಿನಲ್ಲಿ ರಕ್ತ ಸೋರುವಾಗಲೂ ಇದೇ ಚಿಕಿತ್ಸೆಯನ್ನು ಮಾಡುತ್ತಾರೆ. ಒಮ್ಮೆ ತಲೆನೋವು ಬಲಗಡೆಯಿದ್ದರೆ ಎಡಗಡೆಯ ಮೂಗಿಗೂ, ಎಡಗಡೆ ತಲೆ ನೋವಿದ್ದರೆ ಬಲಗಡೆಯ ಮೂಗಿಗೂ ಬಿಡಬೇಕು. ಮುಂಜಾನೆ ಸೂರ್ಯ ಉದಯ ಮುಂಚಿತದ ಸಮಯದಲ್ಲಿ ಮಾಡಬೇಕು. ಹೀಗೆ ಮೂರು ದಿನ ಬಿಟ್ಟರೆ ತಲೆನೋವು ವಾಸಿಯಾಗುತ್ತದೆ.

**ಈ. ಸೀತಾಳೆ (ದಡಾರ) :** ಚಿಕ್ಕ ಮಕ್ಕಳಿಗೆ ಮೈ ಮೇಲಿನ ಗುಳೆಗಳು ಬಂದರೆ ಸೀತಾಳೆ ಅಥವಾ ದಡಾರದಮ್ಮ ಅಂತಲೂ ಕರೆಯುತ್ತಾರೆ. ಗುಡಾರ ಮಕ್ಕಳ ಸೇರಿ 'ಅಮ್ಮ' ಬಂದಿದ್ದಾಳೆ, ಅಮ್ಮನನ್ನು ಕಳುಹಿಸಬೇಕೆಂದು ಕುಲದ ಮುಖ್ಯಸ್ಥನ ಅಭಿಪ್ರಾಯವಾಗಿತ್ತದೆ. ಅಂದು ಬೇವಿನ ಸೊಪ್ಪು ಮತ್ತು ಅರಿಷಿಣಗಳನ್ನು ಮಿಶ್ರಮಾಡಿ ಅರೆದು ಮೈಗೆಲ್ಲ ಹಚ್ಚಿ ಬಿಸಿನೀರು ಸ್ನಾನ ಮಾಡಿಸುತ್ತಾರೆ. ದಿನ ಬಿಟ್ಟು ದಿನ ಹಾಗೆ ಮಾಡಿದರೆ ಅಮ್ಮ ಅಥವಾ ಸೀತಾಳೆಮ್ಮ ವಾಸಿ ಮಾಡಬಹುದೆನ್ನುತ್ತಾರೆ. ಹಾಗೆಯೆ ಊರ ಹೊರಗಿನ ಬೇವಿನ ಮರದಡಿಯಲ್ಲಿ ಅನ್ನದ ಪೂಜೆ ಸಾಗಹಾಕುವ ಆಚರಣೆಯನ್ನು ಮಾಡುತ್ತಾರೆ. ಅನ್ನದ ಪ್ರಸಾದ ಸ್ವೀಕರಿಸಿಕೊಂಡ ಬಳಿಕ, ಗುಡಾರದ ಮಕ್ಕಳ ಬೇವಿನಮರ ನೋಡದೆ ಅಮ್ಮ, ಅಮ್ಮ ಹೋದಳು............................ ಎಂದು ಜೋರಾಗಿ ಕೂಗುತ್ತಾ ಗುಡಾರ ಹತ್ತಿರ ಬರುತ್ತಾರೆ. ನಂತರ ದೇವರ ಗುಡಾರ ಮಗ ಮತ್ತು ತಾಯಿ ಕೈಮುಗಿದ ಬಳಿಕ ತಮ್ಮ ಮನೆಗೆ ಹೋಗುವುದುಂಟು.

ಉ. ಮಹಿಳೆಯರಿಗೆ ಎದೆನೋವು ಬಂದರೆ : ಗರ್ಭಿಣಿಯರಿಗೆ ಎದೆ ನೋವು ಬರುವುದಕ್ಕೆ ಕಾರಣವೇನೆಂದರೆ ಸಿಂಧೋಳ್ಳು ಮಹಿಳೆಯರು ಬಾಣಂತಿ ಇರುವಾಗಲೇ ಒಮ್ಮೆ ಭಿಕ್ಷೆ ಬೇಡುವುದಕ್ಕೆ ಹೋಗುವುದು. ಬುರ್ರ ಬುರ್ರ ವಾದ್ಯವೂ ತಾಯಿಯ ಎದೆಯಮೇಲೆ ನಿರಂತರ ಇದ್ದಾಗ ಅದರ ಹಗ್ಗವು ಮೊಲೆಗೆ ಬಡಿಯುವುದುಂಟು. ಇದರಿಂದ ಮಹಿಳೆಯರಿಗೆ ಎದೆ ಬಾವು ಬರುವುದು. ಅಂತಹ ಸಂದರ್ಭದಲ್ಲಿ ಹಾಲು ಬರುವ ಬದಲು ಎದೆಯ ತೊಟ್ಟಿನಿಂದ ರಕ್ತ ಬರಲು ಪ್ರಾರಂಭವಾಗುತ್ತದೆಯಂತೆ.[೪೮] ಹುಣ್ಣು ಕೂಡ ಆಗಿರುತ್ತದೆ. ಬಹಳ ಬಾಧೆ ಕೊಡುತ್ತದೆಯಂತೆ. ಅದು ಒಡೆದು ಹೋಗುವವರೆಗೆ ಬಹಳ ತೊಂದರೆ ಕೊಡುವುದು. ಆಗ ಬೇವಿನ ಮರದ ಎಲೆಗಳು ನೀರಿನಲ್ಲಿ ತೇದು (ಅರೆದು) ಹಚ್ಚಿದರೆ ಹುಣ್ಣ ಒಡೆದು ಹೋಗಿ, ಗಾಯವು ವಾಸಿಯಾಗಿ, ರಕ್ತ ಬರುವುದು ನಿಂತುಹೋಗಿ ಸರಿಯಾಗಿ ಹಾಲು ಬರುತ್ತದೆಯಂತೆ. ಇವರು ಬೇವಿನ ಎಲೆಗಳ ತಮ್ಮ ಜೀವವೆಂದು ಭಾವಿಸುವುದುಂಟು.

ಊ. ಹೊಟ್ಟೆ ಉಬ್ಬರಿಸಿ ಕೊಳ್ಳುವುದು : ಭಿಕ್ಷಾಟನೆಯ ಸಂದರ್ಭದಲ್ಲಿ ಅಳಸಲು ಅನ್ನಪದಾರ್ಥಗಳನ್ನು ನೀಡುವುದುಂಟು ಇಂಥ ಆಹಾರದ ಸೇವನೆಯಿಂದ ಒಮ್ಮೊಮ್ಮೆ ಹೊಟ್ಟೆ ಉಬ್ಬರಿಸಿಕೊಳ್ಳುವುದು ಅಥವಾ ಪಿತ್ತದಿಂದ ಹೊಟ್ಟೆ ಉಬ್ಬರಿಸುವುದು. ಇವರು ಇದನ್ನು 'ಡೇಗಾ' ಎಂತಲೂ ಕರೆಯುತ್ತಾರೆ. ಗ್ಯಾಸ್ಟ್ರಿಕ್ ರೋಗಕ್ಕೆ ಸಿಂಧೋಳ್ಳುರು ಔಷಧಿ ನೀಡಬಲ್ಲರು. ಐದು ಆಗಲಕಾಯಿ, ಐದು ತೊಂಡೆಕಾಯಿ, ಹತ್ತು ಆಡುಮುಟ್ಟದ ಎಲೆಗಳು ನೀರಿನಲ್ಲಿ ಕುದಿಸಿ, ತಣ್ಣಗಾದ ಮೇಲೆ ಗಡಿಗೆಯಲ್ಲಿ ಹಾಕಿ, ಬಟ್ಟೆಯಿಂದ ಮಡಕೆಯನ್ನು ಮುಚ್ಚಿ ಐದುದಿನಗಳವರೆಗೆ ಇಡಬೇಕು. ನಂತರ ಪ್ರತಿದಿನ ಬೆಳಿಗ್ಗೆ ಖಾಲಿ ಹೊಟ್ಟೆಗೆ ಒಂದು ಲೋಟದಂತೆ ಒಂಬತ್ತು ದಿನಗಳವರೆಗೆ ಸೇವಿಸಿದರೆ ಹೊಟೆ ಉಬ್ಬರಿಸಿಕೊಳ್ಳುವುದು ಗುಣವಾಗುತ್ತದೆಯಂತೆ.

ಋ. ಮಕ್ಕಳಿಗೆ ಹೊಟ್ಟೆನೋವು : ಮಕ್ಕಳಿಗೆ ಹೊಟ್ಟೆನೋವು ಬಂದಾಗ ಕೊಬ್ಬರಿ ಎಣ್ಣೆ ಕಾಯಿಸಿ ಬೇವಿನ ಕಾಯಿ ರಸ ಮಿಶ್ರಣದೊಂದಿಗೆ ಹೊಕ್ಕಳ ಸುತ್ತ ಹಚ್ಚುತ್ತಾಳೆ.

ಕಾಮಾಲೆ : ಮಾನವನು ಹಳದಿ ರೂಪದಲ್ಲಿ ಬಂದಾಗ, ಕಾಮಾಲೆ ರೋಗ ಅಥವಾ (ಜಾಂಡಿಸ್) ಖಾಯಿಲೆ ಎಂದು ಕರೆಯುತ್ತಾರೆ. ಈ ರೋಗ ಬಂದಾಗ ಕೆಲವೊಮ್ಮೆ ಮಾಟ ಮಾಡಿಸಿದ್ದಾರೆ, ಆದಕಾರಣ ಮುಖ ಹಳದಿ ಬಣ್ಣ ಆಗಿದೆ ಎಂದು ಹೇಳುತ್ತಾರೆ. ಆದರೂ ಕುಲದ ಮುಖ್ಯಸ್ಥನಲ್ಲಿರುವ ಕಾಮಾಲೆ ರೋಗಗಕ್ಕೆ ಔಷಧಿ ನೀಡುವುದುಂಟು. ಇವರು ಕಾಮಾಲೆ ರೋಗಕ್ಕೆ ಮಗ್ಗೆ ತೊಗಟೆಯ ನಾರು ಮತ್ತು ತುಳಸಿಯ ಹತ್ತು ಎಲೆಗಳನ್ನು ಸೇರಿಸಿ ಚೆನ್ನಾಗಿ ಕುಟ್ಟಿ ಪುಡಿಮಾಡಿ ನಿಂಬೆ ಹಣ್ಣಿನ ರಸದೊಂದಿಗೆ ಮಿಶ್ರಣ ಮಾಡಿ, ಮುಖಕ್ಕೆ ಹಚ್ಚುವುದು. ಮೂರರಿಂದ ಹನ್ನೆರಡು ದಿವಸಗಳವರೆಗೆ ಹಚ್ಚಿದರೆ ಕಾಮಲೆ ಕಡಿಮೆಯಾಗುವುದುಂಟು.

ಮೈಮೇಲಿನ ಗುಳ್ಳೆ ಅಥವಾ ಕುರು : ಮನುಷ್ಯನ ಮೈಮೇಲೆ ಮಣ್ಣು ಕುಳಿತುಕೊಂಡಾಗ, ಆ ಜಾಗದಲ್ಲಿ ಗುಳ್ಳೆ ಅಥವಾ ಕುರು ಬರುವುದುಂಟು. ದಿನಾಲು ಸ್ನಾನ ಮಾಡಿದರೆ ಯಾವ ಕುರುವು ಕಾಣಿಸಿಕೊಳ್ಳುವುದಿಲ್ಲ. ಸಿಂಧೋಳ್ಳುರು ವಾಸಿಸುವ ಪ್ರದೇಶ ಕೊಳಚೆ ನೀರಿನ ಸಂಗ್ರಹ, ಸೊಳ್ಳೆಗಳು ವಿಪರೀತವಾಗಿ ಇರುವುದರಿಂದ ಮೈಮೇಲೆ ಗುಳ್ಳೆಗಳು ಬರುವುದುಂಟು. ಇಂತಹ ಸಂದರ್ಭದಲ್ಲಿ ಮೈಮೇಲಿನ

ಗುಳ್ಳೆ/ಕುರುವು ಬಂದಾಗ ನಿಂಬೆ ಗಿಡದ ರಸ ಮತ್ತು ಚಕ್ಕೆ ಚೆನ್ನಾಗಿ ಅರೆದು, ಗುಳ್ಳೆ/ಕುರುವು ಬಂದಿರುವಂತಹ ಜಾಗದಲ್ಲಿ ಔಷಧಿಯನ್ನು ಹಚ್ಚುತ್ತಾರೆ.

**ಹಲ್ಲುನೋವು :** ಸಿಂಧೋಳ್ಳುರು ಮುಂಜಾನೆಯ ಸಮಯದಲ್ಲಿ ಬೇವಿನ ಕಡ್ಡಿಗಳಿಂದ ಹಲ್ಲುಜ್ಜುತ್ತಾರೆ. ಒಮ್ಮೆ ಕರಿ ಇದ್ದಿಲು ಉಜ್ಜುವುದುಂಟು. ಇವರಿಗೆ ಹಲ್ಲುನೋವು ಬಂದಾಗ ಒಣಗಿದ ಬೇವಿನ ಕಾಯಿ ಮತ್ತು ಲವಂಗ ಚೆನ್ನಾಗಿ ಪುಡಿಮಾಡಿ, ಹಲ್ಲು ನೋಯುವ ಸ್ಥಳದಲ್ಲಿ ಇಟ್ಟುಕೊಳ್ಳುತ್ತಾರೆ. ಈ ಕ್ರಿಯೆ ಮೂರು ದಿನಗಳು ಮಾಡಿದರೆ ನಂತರದ ದಿನದಲ್ಲಿ ಹಲ್ಲುನೋವು ಇರುವುದಿಲ್ಲವೆಂದು ಹೇಳುತ್ತಾರೆ.

**ಆಯಾಸ ಅಥವಾ ಉಬ್ಬಸ :** ವಯಸ್ಸು ಆದ ನಂತರ ವೃದ್ಧರಿಗೆ ಕೆಮ್ಮು, ಆಯಾಸ ಒಮ್ಮೊಮ್ಮೆ ಬರಬಹುದು. ಆಯಾಸ ಬಂದಾಗ ಆಸ್ಪತ್ರೆಗಳಿಗೆ ಹೋಗುವುದಿಲ್ಲ. ಆಯಾಸದಿಂದಲೇ ಗುಡಾರದಲ್ಲಿ ಹೊರಳಾಡು ತ್ತಿರುತ್ತಾರೆ. ಆದರೂ ಆಯಾಸ/ಉಬ್ಬಸ ಬಂದಾಗ ಇವರು ಹುರುಳಿ ಸೊಪ್ಪು, ಹಿಂಗ್ರಾಂ ಜೇನುತುಪ್ಪ ಮತ್ತು ಶುಂಠಿ ರಸದ ಮಿಶ್ರಣದೊಂದಿಗೆ ಒಲೆಯ ಮೇಲೆ ಕಾಯಿಸಿಕೊಳ್ಳುತ್ತಾರೆ. ಮೇಲಿನ ತೇವಾಂಶದಿಂದ ಬಂದಿರುವ ರಸವನ್ನು ಶೇಖರಣೆಮಾಡಿ, ಮುಂಜಾನೆಯ ಸಮಯದಲ್ಲಿ ಒಂದು ಚಮಚ ಸೇವನೆ ಮಾಡುತ್ತಾರೆ. ಈ ರೀತಿ ಸೇವನೆ ಒಂದು ತಿಂಗಳವರೆಗೂ ಮಾಡಿದರೆ ಉಬ್ಬಸ ಕಡಿಮೆಯಾಗುತ್ತದೆ ಎಂದು ಹೇಳುತ್ತಾರೆ.

**ಕಣ್ಣುಬೇನೆ :** ಮಕ್ಕಳಿಗೆ ಕಣ್ಣು ನೋವು ಬಂದಾಗ ಕಲ್ಲುಸಕ್ಕರೆಯನ್ನು ತೆಗೆದುಕೊಂಡು ಅಲ್ಯೂಮಿನಿಯಂ ಪಾತ್ರೆಯ ಮೇಲೆ, ಚೆಂಬಿನಿಂದ ಚೆನ್ನಾಗಿ ಪುಡಿಮಾಡಿ ಕಣ್ಣಿನೊಳಗೆ ಹಾಕುವರು ಅಥವಾ ಈರುಳ್ಳಿಯ ರಸವನ್ನು ಕಣ್ಣಿನಲ್ಲಿ ಹಿಂಡುವರು. ಎರಡು ಮೂರು ದಿನಗಳಲ್ಲಿ ಕಣ್ಣು ನೋವು ಕಡಿಮೆಯಾಗುವುದು. ಅಲ್ಲದೇ ಮೊಲೆ ಹಾಲು ಕಣ್ಣಿನೊಳಗೆ ಹಿಂಡುವರು. ಕಣ್ಣಿನಲ್ಲಿ ಕಸ ಬಿದ್ದು ನೋಯುತ್ತಿದ್ದರೆ ನಾಲಿಗೆಯಿಂದ ಕಸವನ್ನು ತೆಗೆಯುವರು. ಕಸ ಬಿದ್ದ ಕಣ್ಣನ್ನು ನೀರು ತುಂಬಿದ ತಟ್ಟೆಯಲ್ಲಿ ಕಣ್ಣನ್ನು ಮಿಟಕಿಸಲು ಹೇಳುವರು.[೪೭]

**ಕಜ್ಜಿ :** ಮಕ್ಕಳಿಗೆ ಕಜ್ಜಿ ಬಂದಾಗ ಸಿಂಧೋಳ್ಳುರ ಗಾದೆ ನೆನೆಪು ಬರುವುದು. "ಕಜ್ಜಿ ಎದ್ದಿರುವ ಮೈಯಿ ವಜ್ರವಿದ್ದಂತೆ" ಎಂದು ಹೇಳುತ್ತಾರೆ.[೪೮] ಕಜ್ಜಿ ಇರುವ ಸ್ಥಳವನ್ನು ಬಿಸಿ ನೀರಿನಲ್ಲಿ ಚೆನ್ನಾಗಿ ತೊಳೆದು ಬಟ್ಟೆಯಿಂದ ಸ್ವಚ್ಛ ಮಾಡುವರು. ನಂತರ ಕೊಬ್ಬರಿ ಎಣ್ಣೆಯಲ್ಲಿ ಎರಡು ಹೊಸ ಕೇರುಗಳನ್ನು ಕುಟ್ಟಿ ಬೆಂಕಿಯಲ್ಲಿ ಕಾಯಿಸಿ ತಣ್ಣಗಾದ ಮೇಲೆ ಮೂರು ದಿನಗಳವರೆಗೆ ಹಚ್ಚುವರು. ಕೆಲವರು ಒಣಗಿರುವ ಬೇವಿನ ಎಲೆಗಳಿಂದ ನೀರಿನಲ್ಲಿ ಅಥವಾ ಲೋಳೆ ರಸದಲ್ಲಿ ತೇದು, ಕಜ್ಜಿ, ಇದ್ದಕಡೆ ಹಚ್ಚುವರು. ಹೀಗೆ ಮಾಡುವುದರಿಂದ ಎರಡು ಮೂರು ದಿನಗಳಲ್ಲಿ ತುರಿಕೆ ಕಡೆಮೆಯಾಗುತ್ತದೆ. ಅಲ್ಲದೆ ಸಣ್ಣ ಪ್ರಮಾಣದ ಗುಳ್ಳೆಗಳು ಹಾಗೂ ಕೀವು ಮುಂದೆ ಬೆಳೆಯುವುದಿಲ್ಲ. ಇವರು ಕಜ್ಜಿ ಬಂದಿರುವ ವ್ಯಕ್ತಿ/ಮಕ್ಕಳನ್ನು ಸಮೀಪದಲ್ಲಿ ಸೇರಿಸಿಕೊಳ್ಳುವುದಿಲ್ಲ.

**ವಿಷ ಜಂತು ಕಡಿತಕ್ಕೆ ಔಷಧ :** ಸಿಂಧೋಳ್ಳುರು ಊರಿನ ಬಯಲು ಸೀಮೆಗಳಲ್ಲಿ ಮತ್ತು ಕಾಡಿನ ಸಮೀಪದ ಸ್ಥಳಗಳಲ್ಲಿ ವಾಸಿಸುವ ಸಂದರ್ಭದಲ್ಲಿ ಸರ್ವೆಸಾಮಾನ್ಯವಾಗಿ ವಿಷಜಂತುಗಳು ಕಾಣಿಸಿಕೊಳ್ಳುತ್ತವೆ. ಕೆಲವು ವಿಷ ಜಂತುಗಳೊಂದಿಗೆ ಸ್ನೇಹದಿಂದ ಸರಸವಾಡುತ್ತಾರೆ. ಒಮ್ಮೊಮ್ಮೆ ವಿಷಜಂತುಗಳು ಸಿಂಧೋಳ್ಳು

ವ್ಯಕ್ತಿಗಳಿಗೆ ಕಚ್ಚಿ ಗಾಯ ಮಾಡುತ್ತವೆ. ಈ ಗಾಯವನ್ನು ವಾಸಿ ಮಾಡಿಕೊಳ್ಳಲಿಕ್ಕೆ ಗಿಡ ಮೂಲಿಕೆಗಳನ್ನು ಬಳಸುತ್ತಾರೆ. ಜನರಿಗೆ ಹಾವಿನಂತಹ ವಿಷಜಂತುಗಳು ಕಚ್ಚಿದಾಗ ಔಷಧ ಕೊಟ್ಟು ಗುಣಪಡಿಸುತ್ತಾರೆ. ಯಾವುದೇ ವಿಷಜಂತುಗಳು ಕಚ್ಚಲಿ ಹಾಗೂ ಗಾಯ ಇರುವ ಸ್ಥಳದಲ್ಲಿ ಮೊದಲನೆಯದಾಗಿ ನಂಜಿನ ಪುಡಿಯನ್ನು ಲೋಟದಲ್ಲಿ ಕಲಿಸಿ ಕುಡಿಸುತ್ತಾರೆ.

**ಹುಚ್ಚುನಾಯಿ ಕಡಿತಕ್ಕೆ ಔಷಧ :** ಹುಚ್ಚುನಾಯಿ ಕಡಿದರೆ ಇವರಲ್ಲಿ ಮದ್ದು ಉಂಟು. ಹುಚ್ಚುನಾಯಿ ಕಚ್ಚಿದರೆ ಪೂಜಾರಿ ಕಚ್ಚಿರುವ ಭಾಗದಲ್ಲಿ ಹಳೆಯ ಬಟ್ಟೆಯನ್ನು ತೆಗೆದುಕೊಂಡು ಒರೆಸುತ್ತಾನೆ. ನಂತರ ಒಣಗಿರುವ ಕೋರೆ ಹುಳುವನ್ನು ಪುಡಿಮಾಡಿ ಕಚ್ಚಿರುವ ಭಾಗದಲ್ಲಿ ಹಚ್ಚುತ್ತಾರೆ. ಹಾಗೂ ಇದೇ ಪುಡಿಯ ನಾಲ್ಕು ಗೋಲಿ ಆಕಾರದ ಮಾತ್ರೆಗಳನ್ನು ಹೊಟ್ಟೆಯಲ್ಲಿ ತೆಗೆದುಕೊಳ್ಳಲು ಕೊಡುತ್ತಾರೆ. ಮಾತ್ರೆಗಳನ್ನು ನುಂಗಿದ ನಂತರ ಮೂತ್ರ ವಿಸರ್ಜನೆ ಮಾಡುವ ಸಮಯದಲ್ಲಿ ವಿಷ ಹೊರ ಬರುವುದು ಮತ್ತು ಕಚ್ಚಿರುವ ಭಾಗದಲ್ಲಿ ಬೇವಿನ ಎಲೆ ರಸವನ್ನು ಹಚ್ಚುವರು.

**ನಾಯಿ ಕಡಿತಕ್ಕೆ ಪಾಲಿಸಬೇಕಾದ ನಿಯಮಗಳು:**

೧. ಲೈಂಗಿಕ ಆಸಕ್ತಿಯನ್ನು ಕಡಿಮೆ ಮಾಡಬೇಕು.

೨. ಎಣ್ಣೆ ಮತ್ತು ಕರಿದ ಪದರ್ಥಾಗಳನ್ನು ಜಾಸ್ತಿ ತಿನ್ನಬಾರದು.

೩. ಮಳೆಯಲ್ಲಿ ನೆನೆಯಬಾರದು

೪. ಮುದ್ದೆ ತಿಳಿಸಾರು ಊಟ ಮಾಡಬೇಕು.

**ಚೇಳು ಕಡಿತ :** ಚೇಳು ಕಡಿದ ಸ್ಥಳಕ್ಕೆ ಮೊಟ್ಟಮೊದಲು ಬಿಳಿವಸ್ತ್ರವನ್ನು ಗಟ್ಟಿಯಾಗಿ ಕಟ್ಟುವರು. ಕಡಿದ ಸ್ಥಳಕ್ಕೆ ತುಳಸಿ ರಸ ಕಚ್ಚಿದ ಜಾಗದಲ್ಲಿ ಹಚ್ಚುವರು. ಚೇಳು ಕಡಿತದಲ್ಲಿ ಚಿಕ್ಕ ಮಕ್ಕಳಿಂದ ಹಿಡಿದು ದೊಡ್ಡವರಿಗೆಲ್ಲಾ ಒಂದೇ ಪ್ರಮಾಣದ ಔಷಧ ಕೊಡುವುದಿಲ್ಲ. ವಯಸ್ಸಿಗನುಗುಣವಾಗಿ ಔಷಧ ನೀಡುತ್ತಾರೆ. ಯಾವುದೇ ಕಾರಣಕ್ಕೂ ಹೊಟ್ಟೆಯೊಳಗೆ ಔಷಧ ಕೊಡುವುದಿಲ್ಲ. ಕೇವಲ ಹೊರಭಾಗದಲ್ಲಿ ಮಾತ್ರ ಔಷಧ ಹಚ್ಚುತ್ತಾರೆ.

**ಜೇನು ಹುಳು ಕಡಿತ :** ಜೇನುಹುಳು ಕಡಿಯುವುದು ಗೊತ್ತಾದರೆ ಮೈಗೆಲ್ಲಾ ಸೀಮೆಎಣ್ಣೆ ಹಚ್ಚಿಕೊಳ್ಳುತ್ತಾರೆ. ಒಂದು ವೇಳೆ ಜೇನುಹುಳು ಕಡಿದರೆ ತಕ್ಷಣವೇ ನೀರಿನಲ್ಲಿ ಮುಳುಗಿ ಬಿಡುತ್ತಾರೆ. ಹಾಗೂ ಕಡಿದಿರುವ ಭಾಗದಲ್ಲಿ ಈರುಳ್ಳಿ ರಸ ಹಿಂಡುವರು. ನಂತರ ಅದೇ ಈರುಳ್ಳಿ ರಸ ಚರ್ಮದ ಎಲ್ಲ ಭಾಗದಲ್ಲಿ ಹಚ್ಚಿಕೊಳ್ಳುವರು. ಎಂತಹ ನೋವಿದ್ದರೂ ಕ್ಷಣದಲ್ಲಿ ಮಾಯವಾಗುತ್ತದೆ.

**ಪ್ರಾಣಿರೋಗ :** ರೋಗ ಮಾನವನಿಗಷ್ಟೇ ಸೀಮಿತವಾಗಿ ಬರುವುದಿಲ್ಲ. ಮನುಷ್ಯ ಸಾಕುವ ಪ್ರಾಣಿಗಳಿಗೂ ಬರುತ್ತದೆ. ಪ್ರಾಣಿ ರೋಗಗಳನ್ನು ತಡೆಗಟ್ಟಲು ಸಿಂಧೋಳ್ಳರಲ್ಲೂ ಮದ್ದುಂಟು. ಇವರು ನಾಯಿ, ಹಂದಿ, ಮೇಕೆ ಮತ್ತು ಕೋಳಿಗಳನ್ನು ಸಾಕುತ್ತಾರೆ. ಅದು ತಮ್ಮ ಪರಿಸರ ರಕ್ಷಣೆಗೋಸ್ಕರ ಹಾಗೂ ಆರ್ಥಿಕ ಫಲಿತಕ್ಕೋಸ್ಕರ. ಇದಕ್ಕೆ ಪ್ರಾಣಿಗಳ ಬಗ್ಗೆ ಪ್ರೀತಿ ಉಂಟು. ಒಮ್ಮೆ ಪ್ರಾಣಿಗಳಿಗೆ ರೋಗಗಳು ಬಂದರೆ ನಿರೋಧಕವನ್ನು ಬಳಸಲಾಗುವುದು. ಇದಕ್ಕಾಗಿ ಪಶುವೈದ್ಯವೆಂದು ಕರೆಯಲಾಗುವುದು. ಅಲೆಮಾರಿಯಾಗಿದ್ದ ಸಿಂಧೋಳ್ಳರು ಭಿಕ್ಷೆ ಬೇಡಲು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಆಗಾಗ

ಪ್ರಯಾಣಿಸುತ್ತಿದ್ದರು. ಅವನಲ್ಲಿರುವ ವಸ್ತುಗಳನ್ನು ದನಗಳ ಮೇಲೆ ಹೇರಿಕೊಂಡು ಹೋಗುತ್ತಿದ್ದನು. ಇಂತಹ ಸಂದರ್ಭದಲ್ಲಿ ಪ್ರಾಣಿಗಳಿಗೆ ಯಾವುದಾದರೂ ರೋಗ ಬಂದರೆ ತಕ್ಷಣವೇ ಚಿಕಿತ್ಸೆ ಮಾಡುತ್ತಾರೆ. ಕೆಲವು ಪದ್ಧತಿಗಳನ್ನು ಈ ಕೆಳಗೆ ವಿವರಿಸಲಾಗಿದೆ-

**ಅ. ಸೆಲೆರೋಗ :** ಗುಡಾರದ ಮುಂದೆ ನಾಯಿಗಳು ಆಹಾರ ಪಾನೀಯವನ್ನು ತೊರೆದು ಬಾಯಿಂದ ಜೊಲ್ಲು ಸುರಿಸುತ್ತಾ, ಮಂಕಾಗಿ ಮಲುಗತ್ತವೆ. ದೇಹವು ಸೊರಗುತ್ತದೆ ಇದನ್ನು ಸೆಲೆರೋಗವೆಂದು ಗುರುತಿಸುತ್ತಾರೆ.[೪೯] ಇದರ ನಿವಾರಣೆಗಾಗಿ ತೊಂಡೆಗಿಡದ ಎಲೆ, ಬೆಳ್ಳುಳ್ಳಿ ಮತ್ತು ಬೇವಿನ ತೊಗಟೆಯನ್ನು ಅರೆದು ಕುಡಿಸುತ್ತಾರೆ. ಆಗ ನಾಯಿಗಳಿಗೆ ಸೆಲೆರೋಗ ವಾಸಿಯಾಗುತ್ತಿದೆಯಂತೆ.

**ಆ. ಉಬ್ಬರಿಕೆ :** ಹಾಲು ಕರೆಯುವ ಮೇಕೆ ಆಡು ಸರಿಯಾಗಿ ಹಾಲು ಕೊಡದಿದ್ದರೆ ಅವುಗಳ ಹೊಟ್ಟೆ ಉಬ್ಬರಿಸಿಕೊಂಡು ಉಸಿರಾಟಕ್ಕೆ ಕಷ್ಟ ಪಡುತ್ತಿದ್ದರೆ ದೇವರಿಗೆ ಹರಕೆ ಬೇಡಿಕೊಳ್ಳುವುದುಂಟು. ಮಂತ್ರಿಸಿದ ವಿಭೂತಿ ಭಂಡಾರ ಬೆನ್ನಿನ ಮೇಲೆ ಕೆಚ್ಚಲಿನ ಮೇಲೆ ಸವರುವುದುಂಟು. ನಂತರ ಕರಿಮೆಣಸಿನ ರಸ ಮತ್ತು ಆಲದ ಸೊಪ್ಪಿನ ರಸವನ್ನು ಅರೆದು ಕುಡಿಸುತ್ತಾರೆ. ಇದರಿಂದ ಉಬ್ಬರಿಕೆ ಕಡಿಮೆಯಾಗುತ್ತದೆ.

**ಇ. ಕಾಲಿನ ಹುಳುಗಳು :** ಸಿಂಧೋಳ್ಳರಿಗೆ ಪ್ರಿಯವಾದ ಪ್ರಾಣಿವೆಂದರೆ ಹಂದಿ. ಹಂದಿ ಸಾಗಾಣಿಕೆಗಾಗಿ ಪ್ರತ್ಯೇಕ ಗುಡಾರ, ಊಟದಡಬ್ಬಿ, ನೀರಿನ ಕೊಳ ಇರುವುದುಂಟು. ಹಂದಿಗಳನ್ನು ಮೇಯಿಸಿಕೊಂಡು ಬರುತ್ತಾರೆ. ಹಂದಿಗಳ ಕಾಲಿನ ಗೊರಸಿನ ನಡುವೆ ಹುಣ್ಣಾಗಿ, ಹುಳು ತುಂಬಿಕೊಂಡು ನಡೆಯಲ್ಲು ಹಿಂಸೆ ಪಡುತ್ತಿದ್ದರೆ ಅದರಿಂದ ಜ್ವರ ಬಂದು ನರಳುತ್ತಿದ್ದರೆ, ನೀರಿನ ಕೊಳದಲ್ಲಿ ಕಾಲಾಡಿಸುವರು. ಅದರಿಂದ ಹುಳಗಳು ಹೊರಬರುತ್ತದೆ. ನಂತರ ಒಣಬಟ್ಟೆಯಿಂದ ಒರೆಸುತ್ತಾರೆ. ನಂತರ ನಿಂಬೆ ಹಣ್ಣಿನ ರಸ ಮತ್ತು ಬೇವಿನ ಗಿಡದ ಎಲೆಗಳ ಬಳ್ಳಿಯಿಂದ ಅರೆದು ದಿನಕ್ಕೆರಡು ಬಾರಿ ಹಚ್ಚುತ್ತಾರೆ. ತದನಂತರ ಹೆಚ್ಚಾಗಿ ಕಾಯಿಲೆಗಳು ಬಂದಿರುವ ಹಂದಿಗಳ ಬಾಲ ಕತ್ತರಿಸಿದ್ದರೆ, ಕಾಯಿಲೆ ಬರುವುದಿಲ್ಲವೆಂಬ ವಾಡಿಕೆಯೂ ಇದೆ.

**ಈ. ಉಚ್ಚುವುದು :** ಮೇಕೆ-ದನಕರುಗಳು ತಿನ್ನುವ ಆಹಾರದ ವ್ಯತ್ಯಾಸದಿಂದಾಗಿ ಈ ಬಾಧೆಯು ಬರುತ್ತದೆ. ಕೆಲವು ಗಿಡಮೂಲಿಕೆಯೊಂದಿಗೆ ಶುಂಠಿ, ಬೆಳ್ಳುಳ್ಳಿಯನ್ನು ಅರೆದು, ಬೆರೆಸಿ ದಿನಕ್ಕೆರಡು ಸಾರಿ ಗಂಜಿಯಲ್ಲಿ ನಾಲ್ಕೈದು ದಿವಸ ಕುಡಿಸುವುದರಿಂದ ಉಚ್ಚುವುದು ನಿಲ್ಲುತ್ತದೆ.

ಹೀಗೆ ಸಿಂಧೋಳ್ಳುರು ಮೇಲೆ ತಿಳಿಸಿರುವ ಮತ್ತು ಇತರೆ ಅಸಂಖ್ಯಾತ ರೋಗಗಳಿಗೆ ಔಷಧಿಯನ್ನು ತಿಳಿದವರಾಗಿದ್ದು, ಬಳಸುವ ಗಿಡಮೂಲಕೆ, ಸಸ್ಯಮರಗಳ ಎಲೆ ಚಕ್ಕೆಗಳನ್ನು ಮಾತ್ರ ಹೆಸರಿಸುತ್ತಾರೆ. ಆದರೆ ಅವುಗಳನ್ನು ತಯಾರಿಸುವ ವಿಧಾನವನ್ನು ವ್ಯವಸ್ಥಿತವಾಗಿ ಹೇಳಲೊಲ್ಲರು. ಅವರು ತಂದೆ ಹತ್ತಿರ ಔಷಧಿಯ ವಿವರಗಳನ್ನು ತಿಳಿದುಕೊಳ್ಳುವಾಗ ತಂದೆಯು ಔಷಧಿಗಳ ವಿವರದ ಜೊತೆಗೆ ಯಾವುದೇ ಔಷಧಿಯನ್ನು ದುರುಪಯೋಗ ಪಡಿಸಿಕೊಳ್ಳಬಾರದು ಎಂಬ ಬುದ್ಧಿ ಮಾತನ್ನು ಮಗನಿಗೆ ತಿಳಿಸುತ್ತಾನೆ.[೫೦] ಹಾಗೂ ಯಾವುದೇ ವ್ಯಾಪಾರಿ ದೃಷ್ಟಿಯಿಂದ ಈ ಕಾರ್ಯವನ್ನು ಮಾಡಬಾರದೆಂದು ಸಹ ಹೇಳಿರುತ್ತಾನೆ. ವ್ಯಾಪಾರ ದೃಷ್ಟಿಯಿಂದ ಔಷಧಿಗಳನ್ನು ನೀಡಿದರೆ ಅದರಿಂದ ಖಾಯಿಲೆ ಗುಣಮುಖವಾಗುವುದಿಲ್ಲವೆಂದು

ನಂಬುತ್ತಾರೆ. ತಾವು ವಾಸಿಸುವ ಪುಕ್ಕಟೆ ವಸ್ತು, ಗಿಡಮೂಲಿಕೆಗಳಿಂದ ತಯಾರಾದ ಪ್ರಕೃತಿದತ್ತವಾಗಿ ದೊರೆಯುವ ಔಷಧಿಗಳನ್ನು ವ್ಯಾಪಾರ ಮಾಡುವುದು ಪ್ರಕೃತಿಗೆ ದ್ರೋಹವೆಸಗಿದಂತೆ ಎಂದು ಕಟ್ಟುಪಾಡುಗಳನ್ನು ಹಾಕಿಕೊಂಡಿರಬಹುದೆನಿಸುತ್ತದೆ. ಇಲ್ಲಿ ಸಿಂಧೋಳ್ಳರ ನಿಸ್ವಾರ್ಥ ಸೇವೆಯ ಬಗೆಗೆ ಅರಿವಾಗದಿರದು. ತಮಗೆ ತಿಳಿದಿರುವ ಉಪಚಾರದಿಂದ ಮತ್ತೊಬ್ಬರಿಗೆ ಸಹಾಯವಾದರೆ ಅಷ್ಟೇ ಸಾಕೆಂಬ ಉಪಕಾರದ ಬುದ್ಧಿಯೂ ಕೂಡ ಇಲ್ಲಿ ಬಿಂಬಿತವಾಗುತ್ತದೆ.

ಕೋಷ್ಟಕ ೩.೨ ಸಿಂಧೋಳ್ಳರ ಬಳಸುವ ನಾಟಿ ಔಷಧಿ

| ಕ್ರ.ಸಂ. | ಔಷಧಿ ಹೆಸರು | ರೋಗದ ಹೆಸರು |
|---|---|---|
| ೦೧. | ಶುಂಠಿ | ಕಿವಿಸೋರುವುದು |
| ೦೨. | ಎಕ್ಕೆ ಗಿಡದ ಹೂವು | ಕೆಮ್ಮು |
| ೦೩. | ನಿಂಬೆ ಹಣ್ಣಿನ ರಸ | ಮಂದಬೇಧಿ |
| ೦೪. | ಕರಿಮೆಣಸುಕಾಳು | ಜ್ವರ ಮತ್ತು ತಲೆನೋವು |
| ೦೫. | ಬೇವಿನ ಸೊಪ್ಪು | ದಡಾರಮ್ಮ, ಎದೆನೋವು |
| ೦೬. | ಅಡುಮುಟ್ಟದ ಎಲೆಗಳು | ಹೊಟ್ಟೆ ಉಬ್ಬರ |
| ೦೭. | ಬೇವಿನಕಾಯಿ | ಹೊಟ್ಟೆನೋವು |
| ೦೮. | ಮಗ್ಗೆ ತೊಗಟೆಯ ನಾರು | ಕಾಮಾಲೆ |
| ೦೯. | ನಿಂಬೆಗಿಡದ ರಸ | ಗುಳ್ಳೆ ಅಥವಾ ಕುರುವು |
| ೧೦. | ಲವಂಗ | ಹಲ್ಲುನೋವು |
| ೧೧. | ಹುರುಳಿ ಸೊಪ್ಪು | ಆಯಾಸ |
| ೧೨. | ಕಲ್ಲುಸಕ್ಕರೆ | ಕಣ್ಣುನೋವು |
| ೧೩. | ಕೇರುಬೀಜ | ಕಜ್ಜಿ |
| ೧೪. | ಕೋರೆ ಹುಳ | ಹುಚ್ಚುನಾಯಿ |
| ೧೫. | ತುಳಸಿ ರಸ | ಚೇಳು ಕಡಿತ |
| ೧೬. | ಹಾಗಲಕಾಯಿ | ಮುಡಬಿನ ಗುಳೆ |
| ೧೭. | ತೊಂಡೆಕಾಯಿ | ಮುಟ್ಟು |
| ೧೮. | ನೆಲ್ಲಿಕಾಯಿ | ಬಿಳಿಸೆರಗು |
| ೧೯. | ಕೋಲೆನ್ನೆ ಸೊಪ್ಪು | ಹೊಟ್ಟೆನೋವು |
| ೨೦. | ಬೆಳ್ಳುಳ್ಳಿ | ಸೆಲೆರೋಗ |
| ೨೧. | ಕರಿಮೆಣಸು | ಉಬ್ಬರಿಕೆ |
| ೨೨. | ತುಳಸಿ ಗಿಡ | ಕೋಳಿರೋಗ |

**ವೈದ್ಯೋಪಚಾರ ಮಾಡುವಾಗ ಸಿಂಧೋಳ್ಳುರು ಅನುಸರಿಸುವ ವಿಧಾನಗಳು**

* ಮುಂಜಾನೆ ಸಮಯದಲ್ಲಿ ಗಿಡಮೂಲಿಕೆಗಳನ್ನು ಸಂಗ್ರಹಿಸುವುದು.
* ಗಿಡಮೂಲಿಕೆ ಔಷಧಿಗಳನ್ನು ದೇವಿಯ ವಾರದಂದು ಕೊಡುವರು.
* ಅನುಭವವಿಲ್ಲದೇ ಯಾವ ಗಿಡಮೂಲಿಕೆಯನ್ನು ರೋಗಿಗಳಿಗೆ ಕೊಡುವುದಿಲ್ಲ.
* ಔಷಧದ ಬಗ್ಗೆ ಅನುಮಾನ ಉಂಟಾದಲ್ಲಿ, ಸಂಕೋಚವಿಲ್ಲದೆ ತಿಳಿದವರ ಬಳಿ ಕೇಳಿ ಔಷಧಿ ತೆಗೆದುಕೊಳ್ಳುತ್ತಾರೆ.
* ಅಂಗಡಿಯಿಂದ ತಂದಿರುವ ಔಷಧವನ್ನು ಮತ್ತೊಮ್ಮೆ ಪರಿಕ್ಷಿಸಿ ವೈವಾಹಿಟು ನಡೆಸಿಕೊಳ್ಳುತ್ತಾರೆ.
* ವೈದ್ಯ ಕೆಲಸ ಮಾಡುವಾಗ ಸಿಂಧೋಳ್ಳುರ ಮಕ್ಕಳ ಕೈ ಕಟ್ಟಬಾರದು ಮತ್ತು ಅಪಶಕುನದ ಯಾವುದೇ ಘಟನೆ ಆಗಬಾರದು.
* ಔಷಧಿ ಮಾಡುವಾಗ ಅವಸರವಾಗಿ ಮಾಡದೇ ಕ್ರಮಬದ್ಧವಾಗಿ ಮಾಡುವರು. ಪ್ರಮಾಣ ಬದ್ಧವಾಗಿ ಹಾಕಿದ ಔಷಧಿಯನ್ನು ಚೆನ್ನಾಗಿ ಕಲಿಸಿ ರೋಗಿಗೆ ಕೊಡುವರು.

ಈ ಎಲ್ಲಾ ವಿಧಾನಗಳನ್ನು ರೋಗಿಯ ಹತ್ತಿರ ಅತಿ ಮಧುರದಿಂದ ವರ್ತಿಸಿ ವೈದ್ಯೋಪಚಾರ ಮಾಡುವರು.

**೨. ಆರ್ಥಿಕತೆ**

ಸಾಮಾಜಿಕ ವ್ಯವಸ್ಥೆಯಲ್ಲಿ ಸಮುದಾಯಗಳ ಸ್ಥಾನಮಾನಗಳನ್ನು ನಿರ್ಧರಿಸುವಲ್ಲಿ ಆರ್ಥಿಕತೆ ಮುಖ್ಯ ಪಾತ್ರವಹಿಸುತ್ತದೆ. ಸಮಾಜದಲ್ಲಿ ಜಾತಿ ಜಾತಿಗಳ ನಡುವೆ ತಾರತಮ್ಯಗಳು ಕಂಡುಬರುತ್ತದೆ. ಸಮುದಾಯದ ಸಾಮಾಜಿಕ ಜೀವನ ನಿರ್ಧರಿಸುವಲ್ಲಿ ಆರ್ಥಿಕ ವೃತ್ತಿಗಳು ಮುಖ್ಯ ಪಾತ್ರವಹಿಸುತ್ತವೆ. ಸಮಾಜದಲ್ಲಿ ಉಳ್ಳವರು-ಉಳ್ಳದೇ ಇರುವವರು, ಬಡವ-ಶ್ರೀಮಂತ, ಮೇಲು-ಕೀಳು, ಮಾಲೀಕ-ಕಾರ್ಮಿಕ ಎಂಬ ಶ್ರೇಣೀಕರಣಗಳಿರುವುದು ಎಲ್ಲರಿಗೂ ತಿಳಿದ ಸಂಗತಿ.

ಬುಡಕಟ್ಟು ಸಮುದಾಯಗಳು ಸಾಮಾನ್ಯವಾಗಿ ಅರಣ್ಯ ವಾಸಿಗಳು. ವ್ಯವಸ್ಥಿತವಾಗಿ ಒಂದೆಡೆ ನಿಂತು ಜೀವನ ನಿರ್ವಹಿಸುವವರಲ್ಲ, ಬೇರೆ ಬೇರೆ ಪ್ರದೇಶಗಳಲ್ಲಿ ವಾಸಿಸುವರು. ಶಾಶ್ವತ ನೆಲೆಗಳನ್ನು ಹೊಂದಿದ್ದರೂ ಸಹ ಅವರು ಅಲೆಮಾರಿ ಪ್ರವೃತ್ತಿಯವರಾಗಿರುತ್ತಾರೆ. ಬಹುಪಾಲು ಜನರು ಕಾಡು ಮೇಡುಗಳಲ್ಲಿ ಸ್ವಚ್ಛಂದವಾಗಿ ವಿಹರಿಸುತ್ತ ಅಲ್ಲಿ ದೊರೆಯುವ ಗಡ್ಡೆ-ಗೆಣಸು, ಹಣ್ಣು-ಹಂಪಲು, ಸೊಪ್ಪು, ಸೆದೆ, ಜೇನು ಮುಂತಾದ ಸಹಜೋತ್ಪನ್ನಗಳನ್ನು ಸೇವಿಸುತ್ತಾ, ಅಗತ್ಯಕ್ಕೆ ತಕ್ಕಂತೆ ಕಾಡಿನ ಪ್ರಾಣಿಗಳನ್ನು ಬೇಟೆಯಾಡುತ್ತ ಬದುಕುವರು. ಕುಮರಿ ಬೇಸಾಯ ಮಾಡಿದರೂ, ಬೇಸಾಯವನ್ನು ಸ್ಥಳದಿಂದ ಸ್ಥಳಕ್ಕೆ ಬದಲಾಯಿಸುವರು. ಬಹುಮಟ್ಟಿಗೆ ಭವಿಷ್ಯದ ಕನಸನ್ನು ಕಾಣದೆ, ಅದಕ್ಕಾಗಿ ಸಂಪತ್ತನ್ನು ಕೂಡಿ ಹಾಕದೆ ಜೀವನಕ್ಕಾಗಿ ಶ್ರಮವಹಿಸುವ ಅಲ್ಪತೃಪ್ತಿಪಡುವ ಜನರಿವರು.

ಬ್ರಿಟಿಷ್‌ರ ಆಡಳಿತ ನಮ್ಮ ದೇಶೀಯ ಪರಿಸರದಲ್ಲಿ ಔದ್ಯೋಗಿಕತೆಯನ್ನು ತಂದಿತು. ಇವರು ಇಲ್ಲಿನ ಸಾಮಾಜಿಕ ಸಮಸ್ಯೆಗಳನ್ನು ಬದಲಾಯಿಸಲಿಕ್ಕೆ ಪ್ರಯತ್ನಪಟ್ಟರು. ಉದಾಹರಣೆಗಾಗಿ ಜಾತಿ ಪದ್ಧತಿಯನ್ನು ತೊಡೆದು ಹಾಕುವುದು. ಸತಿ ಸಹಗಮನ ನಿಷೇಧ ಮತ್ತು ಸ್ಥಳೀಯ ನ್ಯಾಯಲಯಗಳಲ್ಲಿ ಸಮಸ್ಯೆಗಳು ಬಗೆಹರಿಸಲು ಕಾನೂನು ಕಾಯ್ದೆಗಳನ್ನು ಜಾರಿಗೆ ತರಲಾಯಿತು.[೨೯] ಇಲ್ಲಿನ ಆಡಳಿತವನ್ನು

ಭದ್ರಪಡಿಸಲು ವಸಾಹತುಶಾಹಿ ಸರ್ಕಾರವು ಅನೇಕ ಯೋಜನೆಗಳನ್ನು ಜಾರಿಗೆ ತಂದಿತು. ಅವುಗಳೆಂದರೆ. ಸಾರಿಗೆ ಸಂಪರ್ಕ ಅಭಿವೃದ್ಧಿ, ಅರಣ್ಯ, ಕಾನೂನುಗಳು ಮತ್ತು ರೈಲ್ವೇ ಇತ್ಯಾದಿ ಅಂಶಗಳನ್ನು ವಿಸ್ತರಿಸಿ, ಅಭಿವೃದ್ಧಿಪಡಿಸಿದರು. ಭಾರತದಾದ್ಯಂತ ಬುಡಕಟ್ಟು ಸಮುದಾಯಗಳು ಇನ್ನು ಅರಣ್ಯದಲ್ಲಿ ತಳ ಊರಿದವು. ಅವರು ತಮ್ಮ ದೇವರಗಳನ್ನು ಆರಾಧಿಸುತ್ತಾ, ತಮ್ಮದೇ ಆದ ಸಾಂಪ್ರದಾಯಿಕ ವೃತ್ತಿಗಳನ್ನು ಪಾಲಿಸುತ್ತಾ, ಜೀವನ ನಡೆಸಿದರು. ತಮ್ಮದೇ ಸಾಹಿತ್ಯ ಕಲೆಗಳನ್ನು ಸೃಷ್ಠಿಸುತ್ತ ಅನ್ಯೋನ್ಯವಾಗಿ ಬದುಕುತ್ತಿದ್ದರು. ನ್ಯಾಯ ಪಂಚಾಯಿತಿಯಲ್ಲಿ ಹಿರಿಯ ವ್ಯಕ್ತಿಯ ಮಾತನ್ನು ಚಾಚು ತಪ್ಪದೇ ಅವರ ನಿರ್ಣಯಗಳನ್ನು ಪಾಲಿಸುತ್ತಿದ್ದರು.

ಸ್ವಾತಂತ್ರ್ಯ ನಂತರ ಇಲ್ಲಿನ ಸರ್ಕಾರವು ಸಂವಿಧಾನಾತ್ಮಕ ಮತ್ತು ಶಾಸನಬದ್ಧ ಕಾನೂನುಗಳನ್ನು ಜಾರಿಗೆ ತಂದಿತು. "ಇಲ್ಲಿನ ಕೈಗಾರಿಕ ಮತ್ತು ಆಧುನಿಕ ಶಿಕ್ಷಣಗಳಿಂದ ಶ್ರೇಣೀಕೃತ ಜಾತಿ ವ್ಯವಸ್ಥೆ ಮತ್ತು ವೃತ್ತಿ ರಚನೆಗಳ ನಡುವಿನ ಅಪಸರಣಾ ಕ್ಷೀಣಿಸಿ ಜಾತ್ಯಾತೀತ ಕಸುಬುಗಳ ಹುಟ್ಟಿಗೆ ಕಾರಣವಾಯಿತು".[೫೨] ಕೈಗಾರಿಕ ಕ್ರಾಂತಿಯಿಂದ ಬುಡಕಟ್ಟು ಸಮುದಾಯಗಳು ಕಲಾತ್ಮಕ ವಸ್ತುಗಳಾದ ಕುರ್ಚಿ, ಸೋಫಾ, ದಿವಾನ, ಚಾಪೆ, ಏಣಿ, ಬುಕ್ಕಾ, ವಸ್ತುಗಳ ತಯಾರಿಕೆ, ನಾರಿನಿಂದ ಹಗ್ಗ, ಸೂಜಿ, ದಪ್ಪಣ, ಪಿನ್ನು, ಕಸ್ತೂರಿ, ಮಣಿಸರ ಇತ್ಯಾದಿ ವಸ್ತುಗಳ ತಯಾರಿಕೆ ಹೇಗೆ ಹತ್ತು ಹಲವು ಜೀವನೋಪಾಯದ ಕೆಲಸಗಳನ್ನು ನಿರ್ವಹಿಸಿಕೊಂಡು ಬಂದಿದೆ. ಜೊತೆ ಜೊತೆಯಲ್ಲೇ ಉನ್ನತ ಜಾತಿಗಳು ಅನೇಕ ಉದ್ಯೋಗವಕಾಶಗಳನ್ನು ಕಲ್ಪಿಸಿಕೊಂಡರು. ಹೊಸ ಸ್ಥಾನಮಾನಗಳನ್ನು ಸೃಷ್ಟಿಸಿಕೊಂಡರು.

ಅರೆ-ಅಲೆಮಾರಿ(Semi Nomadic)ಗಳಾದ ಸಿಂಧೋಳ್ಳುರು ಪ್ರಾಚೀನ ಕಾಲದಿಂದ ಸ್ವಾತಂತ್ರ್ಯ ದವರೆಗೂ ಅಲೆಮಾರಿಗಳಾಗಿದ್ದರು. ಅವರ ಸಾಂಪ್ರದಾಯಿಕ ವೃತ್ತಿ ಭಿಕ್ಷಾಟನೆಯಾಗಿತ್ತು. ಭೀಕ್ಷಾಟನೆ ವೃತ್ತಿಯನ್ನು ಜೀವನ ನಿರ್ವಹಣೆಗಾಗಿ ನಂಬಿ, ಅವಲಂಬಿಸಿಕೊಂಡಿದ್ದರು. ಬದಲಾದ ಆರ್ಥಿಕ ಪರಿಸ್ಥಿತಿ ಯಲ್ಲಿ ಇವರ ಜೀವನ ಕ್ರಮವೂ ಬದಲಾವಣೆಗೆ ಒಳಪಡುತ್ತಿದೆ. ಪರಂಪರಾಗತವಾದ ಧಾರ್ಮಿಕ ಭಿಕ್ಷಾಟನೆ ಯೊಂದಿಗೆ, ಆಧುನಿಕ ವೃತ್ತಿಗಳು ಸೇರ್ಪಡೆಗೊಂಡಿವೆ. ಇದು ಆರ್ಥಿಕ ಜೀವನದ ಮೇಲೆ ಬದಲಾವಣೆಯನ್ನು ತಂದಿದೆ. ಹಿಂದೆ ಭಿಕ್ಷೆ ಬೇಡುವುದು ಅಪರಾಧವಾಗಿರಲಿಲ್ಲ. ಆದರೆ ಇಂದು ಭಿಕ್ಷೆ ಬೇಡುವುದು ಮತ್ತು ಬೇಟೆಯಾಡುವುದು ಅಪರಾಧವೆಂದು ಸರ್ಕಾರ ಪರಿಗಣಿಸಿದೆ. ಇದನ್ನು ಅರಿತುಕೊಂಡು ಬೇಟೆ ಮತ್ತು ಭಿಕ್ಷೆಯನ್ನು ನಂಬಿಕೊಂಡು ಬದುಕುತ್ತಿರುವವರ ಸಂಖ್ಯೆ ವಿರಳವಾಗಿದೆ, ಆದರೂ ಹೊಟ್ಟೆಪಾಡಿಗಾಗಿ ಭಿಕ್ಷಾಟನೆಯನ್ನು ಇಂದಿಗೂ ವೃತ್ತಿಯನ್ನಾಗಿ ಅವಲಂಬಿಸಿಕೊಂಡಿದ್ದಾರೆ. ಇದನ್ನೇ ನಂಬಿಕೊಂಡು ಬದುಕುತ್ತಿದ್ದ ಇವರಿಗೆ ಹಠಾತ್ತನೆ ಬದುಕಿನ ದಾರಿ ಮುಚ್ಚಿದಂತಾಗಿದೆ.

ಆಧುನಿಕ ಸಂದರ್ಭದಲ್ಲಿ ಸಿಂಧೋಳ್ಳು ಸಮುದಾಯದ ಆರ್ಥಿಕ ಸ್ಥಾನಮಾನಗಳು ಕೆಳಸ್ತರದಲ್ಲಿವೆ. ಸಮಾಜದಲ್ಲಿ ಅನೇಕ ಸಮುದಾಯಗಳು ಮನೆ, ಭೂಮಿ, ಅನನ್ಯ ಸೌಲಭ್ಯಗಳಿಂದ ವಾಸಿಸುತ್ತಿದ್ದಾರೆ. ಇಂತಹ ಜನರ ಸಮೂಹದಲ್ಲಿ ಈ ಸಮುದಾಯ ಅನೇಕ ಸಮಸ್ಯೆಗಳಿಂದ ಜೀವನ ಮಾಡಬೇಕಾದ ಪರಿಸ್ಥಿತಿಯಲ್ಲಿದೆ. ಇವರ ಹೊಸ ವೃತ್ತಿಗಳಿಗೆ ಹೊಂದಿಕೊಳ್ಳುವುದು ಕಷ್ಟಕರವಾಗಿದೆ. ನೆಲೆಯಿಲ್ಲದ

ತಮ್ಮ ಸಂಪ್ರಾದಯಿಕ ವೃತ್ತಿಗಳಿಗೆ ಬದಲಾಗಿ ಆಧುನಿಕ ವೃತ್ತಿಗಳನ್ನು ಅವಲಂಬಿಸಿರುವುದು ಅನಿವಾರ್ಯ. ಅಕ್ಷರ ಜ್ಞಾನವಿಲ್ಲದೆಯೇ ಇವರು ಬುದ್ಧಿವಂತರು. ವೃತ್ತಿಪರರು. ಯಾವುದೇ ಕೆಲಸವಾಗಲಿ ಅತ್ಯಂತ ನಿಷ್ಠೆ ಹಾಗೂ ಶ್ರದ್ಧೆಯಿಂದ ಕೆಲಸಮಾಡುವ ಶಕ್ತಿ ಇವರಲ್ಲಿದೆ. ಯಾವ ಹೊಸ ವೃತ್ತಿಯೇ ಆಗಲಿ ಅದಕ್ಕೆ ಬಹುಬೇಗ ಹೊಂದಿಕೊಳ್ಳುವರು. ಸಿಂಧೋಳ್ಳುರು ತಮ್ಮ ಬದುಕಿನಲ್ಲಿ ನಿತ್ಯ ಅನೇಕ ವೃತ್ತಿಗಳನ್ನು ಮಾಡುತ್ತಾರೆ. ಹೀಗೆ ಅವಲಂಬಿಸಿರುವ ವೃತ್ತಿಗಳೆಲ್ಲವೂ ಕಡಿಮೆ ಬಂಡವಾಳ ಮತ್ತು ಅಧಿಕ ಶ್ರಮ ಇರುವಂತಹವುಗಳು. ಆರ್ಥಿಕವಾಗಿ ತುಂಬಾ ದುರ್ಬಲವಾಗಿರುವ ಇವರ ವೃತ್ತಿ ಜೀವನ ನಿರ್ವಹಣೆಯನ್ನು ಈ ಕೆಳಗಿನ ಕೋಷ್ಟಕದಲ್ಲಿ ನೋಡಬಹುದು.

**ಸಿಂಧೋಳ್ಳು ವೃತ್ತಿ**

| **ಪಶುಸಾಕಾಣಿಕೆ** | **ವ್ಯಾಪಾರ** | **ಕೂಲಿ** | **ಇತರೆ ವೃತ್ತಿ** |
|---|---|---|---|
| | ೧. ಮಹಿಳೆಯರ ವ್ಯಾಪಾರ | ೧. ಭತ್ತ ಸಸಿ ನಾಟಿಯ ಕೆಲಸ | ೧. ಮೀನುಗಾರಿಕೆ |
| | ೨. ಪುರುಷರ ವ್ಯಾಪಾರ | ೨. ಕಳೆ ಕೆಲಸ | ೨. ಬಕೇಟ ರಿಪೇರಿ |
| | | ೩. ಭತ್ತಕೊಯ್ಯುವ ಕೆಲಸ | ೩. ಮನೆ ಕಟ್ಟುವ ಕೂಲಿ ಕೆಲಸ |

**ಪಶುಸಾಕಣಿಕೆ :** ಸಿಂಧೋಳ್ಳು ಸಮುದಾಯದಲ್ಲಿ ಬೇಟೆಯ ನಂತರ ಪಶುಪಾಲನಾ ವೃತ್ತಿ ಕಾಲಿರಿಸಿದೆ. ಆದಿಮಕಾಲದಿಂದ ಸ್ವಾತಂತ್ರ್ಯದವರೆಗೂ ಅಲೆಮಾರಿಗಳಾಗಿದ್ದ ಇವರು ಆಹಾರಕ್ಕಾಗಿ ಮತ್ತು ಧಾರ್ಮಿಕ ಭಿಕ್ಷಾಟನೆಗೆ ಒಂದು ಊರಿನಿಂದ, ಇನ್ನೊಂದು ಊರಿಗೆ ತಂಡೋಪ ತಂಡವಾಗಿ ವಲಸೆ ಹೋಗುತ್ತಿದ್ದರು. ಇವರ ಪ್ರತಿಯೊಂದು ಸಾಮಾನುಗಳು ಕುದುರೆ, ಕತ್ತೆ ಮತ್ತು ಆಕಳುಗಳ ಮೇಲೆ ಹೇರಿಕೊಂಡು ಪ್ರಯಾಣಿ ಸುತ್ತಿದ್ದರು. ಆದರೆ ಇಂದು ಕತ್ತೆ, ಕುದುರೆ ಮತ್ತು ಆಕಳುಗಳು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿಲ್ಲ. ಇವರು ಪಶುಪಾಲನೆ ಮತ್ತು ದೈವಗಳೊಡನೆ ಹೊಂದಿರುವ ಸಂಬಂಧ ಅಂದಿನ ಕಾಲದ ಪಶುಪಾಲನಾ ಸಂಸ್ಕೃತಿಯನ್ನು ಕಟ್ಟಿಕೊಡುತ್ತದೆ. ಈ ಸಮುದಾಯದ ಪೋತರಾಜ, ಮುನಿಸ್ವಾಮಿ ಮತ್ತು ಈರನಾಗಮ್ಮ ಇವರೆಲ್ಲರೂ ಸಾಂಸ್ಕೃತಿಕ ನಾಯಕರಾಗಿದ್ದಾರೆ. ಅಲ್ಲದೆ ಇಂದು ಸಿಂಧೋಳ್ಳು ಸಮುದಾಯದಲ್ಲಿ ದೈವಗಳಾಗಿ ಪೂಜೆಗೊಳ್ಳುತ್ತಿದ್ದಾರೆ.

ಆಧುನಿಕ ಕಾಲದಲ್ಲಿ ಸಿಂಧೋಳ್ಳುರು ಮುಖ್ಯ ವೃತ್ತಿ ಧಾರ್ಮಿಕ ಭಿಕ್ಷಾಟನೆ, ವ್ಯಾಪಾರ ಮತ್ತು ಕೃಷಿ ಕೂಲಿಯಾದರೂ ಇವುಗಳ ಜೊತೆಯಲ್ಲಿ ಉಪವೃತ್ತಿಗಳನ್ನು ಹೊಂದಿದ್ದಾರೆ. ಇವರಲ್ಲಿ ಹೆಚ್ಚಾಗಿ ವೃದ್ಧರು ಪ್ರಾಣಿಗಳನ್ನು ಸಾಕಿಕೊಳ್ಳುತ್ತಾರೆ. ಪ್ರಾಣಿಗಳನ್ನು ಸಾಕಿ ಸಲಹುವುದಕ್ಕೆ ವೃದ್ಧರನ್ನು ನೇಮಕ ಮಾಡುವುದುಂಟು.[೫೩] ವ್ಯಾಪಾರ ಮತ್ತು ಕೂಲಿಯಿಂದ ಬಂದ ಹಣವನ್ನು ದೊಡ್ಡ ಪ್ರಮಾಣದ ಸಮಸ್ಯೆಗಳ ಪರಿಹಾರ ಹಾಗೂ ಅಭಿವೃದ್ಧಿ ಕಾರ್ಯಗಳಿಗೆ ಬಳಸಿಕೊಳ್ಳುತ್ತಾರೆ. ಹಬ್ಬ ಹರಿದಿನಗಳು, ಶುಭ ಕಾರ್ಯ ಕ್ರಮಗಳು ಇತ್ಯಾದಿ ಖರ್ಚಿಗಾಗಿ ಪಶುಗಳನ್ನು ಮಾರಾಟಮಾಡುವುದುಂಟು. ಸಣ್ಣ ಪುಟ್ಟ ನಿವಾರಣೆಗೆ ಮತ್ತು ಅಭಿವೃದ್ಧಿ ಕಾರ್ಯಗಳಿಗೆ ಇವು ಸಹಾಯಕವಾಗುತ್ತವೆ.

ಕೋಷ್ಟಕ ೩.೩ ಸಿಂಧೋಳ್ಳು ಬುಡಕಟ್ಟಿನ ಪಶುಸಂಪತ್ತು

| ಸಂ. | ಜಿಲ್ಲಾವಾರು | ಎತ್ತು | ಎಮ್ಮೆ | ಆಕಳು | ಕುರಿ | ಮೇಕೆ | ಕೋಳಿ | ಹಂದಿ |
|---|---|---|---|---|---|---|---|---|
| ೧. | ಬಳ್ಳಾರಿ | -- | -- | -- | -- | ೨೪ | -- | -- |
| ೨. | ಗುಲ್ಬರ್ಗಾ | -- | -- | -- | -- | -- | -- | ೧೦೮ |
| ೩. | ಬಿಜಾಪುರ | -- | -- | -- | -- | -- | -- | ೯೪ |
| | ಒಟ್ಟು | -- | -- | -- | -- | ೨೪ | -- | ೨೦೨ |

ಸೂಚನೆ : ಕರ್ನಾಟಕದಲ್ಲಿ ಸಿಂಧೋಳ್ಳು ಮೂರು ಜಿಲ್ಲೆಗಳಲ್ಲಿ ಮಾತ್ರ ಪಶುಸಾಗಾಣಿಕೆ ಮಾಡಿಕೊಂಡಿರುತ್ತಾರೆ.

ಕರ್ನಾಟಕದಲ್ಲಿ ಸಿಂಧೋಳ್ಳುರು ಹಂದಿಗಳನ್ನು ಹೆಚ್ಚಾಗಿ ಸಂಪಾದಿಸಿಕೊಂಡಿದ್ದು, ಒಟ್ಟು ಹಂದಿಗಳ ಸಂಖ್ಯೆ ೨೦೨ ಇವೆ. ಇವುಗಳನ್ನು ಸಾಕಲು ಯಾವುದೇ ಖರ್ಚುವೆಚ್ಚಗಳಿಲ್ಲ. ನಗರದಲ್ಲಿ ಹಂದಿ ಮಾಂಸಕ್ಕೆ ಅತಿ ಬೇಡಿಕೆಯಿದ್ದು, ಮಾರ್ಕೆಟ್ ಮಾಲೀಕರು ಗುಡಾರದ ಹತ್ತಿರಕ್ಕೆ ಹಂದಿಗಳನ್ನು ಖರೀದಿಸಲು ಬರುತ್ತಾರೆ. ಹಂದಿಗಳ ಮಾರಾಟ ಮಾಡುತ್ತಾರೆ. ಇವರು ಹಂದಿ ವ್ಯಾಪಾರದಲ್ಲಿ ಬಲು ಜಾಣ್ಮೆಯಿಂದ ವ್ಯವಹರಿಸುತ್ತಾರೆ. ಒಂದು ಹಂದಿಯ ಬೆಲೆ ೫೦೦ ರಿಂದ ೬೦೦ ರೂಪಾಯಿಗಳವರೆಗೆ ಇರುವುದುಂಟು.

ವೃತ್ತಚಿತ್ರ ೩.೧ ಕರ್ನಾಟಕದಲ್ಲಿ ಸಿಂಧೋಳ್ಳುರ ಪಸುಸಾಕಾಣಿ




ಮೇಕೆಗಳು ಇವರ ಬದುಕಿಗೆ ಆಶ್ರಯ ನೀಡುವಂತವುದು. ಇವರು ಕೃಷಿ ದಿನಗೂಲಿಗೆ ಅನ್ಯ ಜಮೀನಗಳಿಗೆ ಹೋದಾಗ, ಮೂರು ನಾಲ್ಕು ಮೇಕೆಗಳನ್ನು ಜೊತೆಯಲ್ಲಿ ತೆಗೆದುಕೊಂಡು ಹೋಗುವರು. ಜಮೀನಿನ ಬದುವಿನಲ್ಲಿ ಅವುಗಳನ್ನು ಮೇಯಿಸುತ್ತಾರೆ. ಸಾಯಂಕಾಲ ಮನೆಗೆ ಬರುವಾಗ ತಮ್ಮೊಂದಿಗೆ ಕರೆದುಕೊಂಡು ಬರುವರು. ಇವುಗಳನ್ನು ಸಾಕುವ ವೆಚ್ಚ ಹೆಚ್ಚಾಗಿರುವುದಿಲ್ಲ. ಬಳ್ಳಾರಿ ಪ್ರಾಂತ್ಯದ ಸಿಂಧೋಳ್ಳುರಲ್ಲಿ ಮೇಕೆಗಳಿದ್ದು, ಇದಕ್ಕಾಗಿಯೇ ಅವರಲ್ಲಿ ಒಬ್ಬರನ್ನು ಪ್ರತ್ಯೇಕವಾಗಿ ಕಾಯಲು ನೇಮಿಸಿಕೊಂಡಿದ್ದಾರೆ. ಮೇಕೆಗಳು ಒಂದು ಸಮಯದಲ್ಲಿ ಎರಡು ಮರಿಗಳನ್ನು ಹಾಕುತ್ತವೆ. ಇವುಗಳನ್ನು ಚೆನ್ನಾಗಿ ಸಾಕಿಕೊಂಡರೆ, ೬ ತಿಂಗಳಿಗೆ ಮರಿ ಹಾಕುವ ಸಾಮರ್ಥ್ಯ ಪಡೆದಿರುತ್ತದೆ. ಕರ್ನಾಟಕದಲ್ಲಿ

ಪಶುಸಾಕಾಣಿಕೆಯಲ್ಲಿ ಮೇಕೆ ಕಡಿಮೆ ಸಂಖ್ಯೆಯಲ್ಲಿದ್ದು, ಮೇಕೆಗಳು ಒಟ್ಟು ಸಂಖ್ಯೆ ೨೪ ಇರುವುದು ಕಂಡುಬಂದಿರುತ್ತದೆ. ಹೀಗಾಗಿ ಸಿಂಧೋಳ್ಳು ಹಬ್ಬ ಹರಿದಿನಗಳಲ್ಲಿ ಮೇಕೆಗಳ ಬಲಿಕೊಡುವುದುಂಟು. ಇವರು ಸಾಮಾನ್ಯವಾಗಿ ಮಾರಾಟ ಮಾಡಿದಾಗ ಒಂದು ಮೇಕೆಯ ಬೆಲೆ ೧೦೦೦ ದಿಂದ ೧೨೦೦ ರೂಪಾಯಿಗಳವರೆಗೂ ಬೆಲೆ ಬರುವುದುಂಟು.

ವ್ಯಾಪಾರ : ಸಾಮಾಜಿಕ ಜೀವನದಲ್ಲಿ ಬುಡಕಟ್ಟು ಸಮುದಾಯಗಳಿಗೆ ವ್ಯಾಪಾರ ಪ್ರಭಾವ ಬಿಸಿ ಮುಟ್ಟಿರುವುದು ನಿಜ. ವ್ಯಾಪಾರವೆಂದರೆ ಗ್ರಾಹಕರಿಗೆ ಅಗತ್ಯವಾದ ವಸ್ತುಗಳನ್ನು ಒದಗಿಸುವುದಾಗಿದೆ. ಪ್ರಾರಂಭದಲ್ಲಿ ವ್ಯಾಪಾರಕ್ಕೆ ಹೆಚ್ಚಿನ ಆದ್ಯತೆ ಇರಲಿಲ್ಲ. ಆದರೆ ದಿನಕಳೆದಂತೆ ವ್ಯಾಪಾರದ ಮಹತ್ವದಿಂದಾಗಿ ಜನಗಳಿಗೆ ಸೇವಾವೃತ್ತಿ ಬಹಳಷ್ಟು ವೇಗದಿಂದ ಬೆಳೆಯುತ್ತಿದೆ. ಒಂದು ಕಾಲದಲ್ಲಿ ಸಿಂಧೋಳ್ಳು ಸಮುದಾಯವು ಧಾರ್ಮಿಕ ಭಿಕ್ಷಾಟನಾ ವೃತ್ತಿಯಲ್ಲಿ ಒಳಗೊಂಡಿತ್ತು. ಅವರ ಕೈಯಲ್ಲಿ ಬುರ್ರ ಬುರ್ರ ವಾದ್ಯ, ಚಾಟಿ ಮತ್ತು ಅಮ್ಮನ ಮೂರ್ತಿ ಪೆಟ್ಟಿಗೆ ಮಾತ್ರ ಇರುತ್ತಿತ್ತು. ಆದರೆ ಇಂದು ಗುಡಾರದಲ್ಲಿಯೂ ವ್ಯಾಪಾರದ ವೃತ್ತಿ ಆಕ್ರಮಿಸಿಕೊಂಡಿದೆ. ಅನೇಕ ವಸ್ತುಗಳನ್ನು ವ್ಯಾಪಾರ ಮಾಡುತ್ತಿದ್ದಾರೆ. ಅವುಗಳಲ್ಲಿ ಕೊಡುಪಾನ, ಸ್ಟೀಲ್‌ಸಾಮಾನುಗಳು, ಬಳೆಗಳು, ಕಿರಾಣಿ ಅಂಗಡಿಯಲ್ಲಿ ಸಿಗುವ ಸಾಮಾನುಗಳು ಇತ್ಯಾದಿ ವಸ್ತುಗಳ ವ್ಯಾಪಾರ ಮಾಡುತ್ತಾರೆ. ಇವರಲ್ಲಿ ಕೆಲವೊಂದು ಕುಟುಂಬಗಳು ವ್ಯಾಪಾರವನ್ನೆ ಅವಲಂಬಿಸಿ ಜೀವನಮಾಡುತ್ತಿವೆ. ವ್ಯಾಪಾರದಲ್ಲಿಯೂ ಸಹ ನಾವು ವೈಶ್ಯರಿಗಿಂತ ಕಡಿಮೆಯೇನಲ್ಲ ಎಂಬುದನ್ನು ತೋರಿಸಿಕೊಟ್ಟಿದ್ದಾರೆ. ಸಿಂಧೋಳ್ಳುರು ವ್ಯಾಪಾರವನ್ನು ಈ ಐದು ವರ್ಷಗಳ ಹಿಂದಿನಿಂದಲೂ ಮಾಡಿಕೊಂಡು ಬಂದಿದ್ದಾರೆ. ಇವರಲ್ಲಿ ಮಾರಾಟದ ಬಗ್ಗೆ ವಿಶೇಷವಾದ ಜ್ಞಾನವನ್ನು ಹೊಂದಿರುವವರೇ ಬೇಕಾಗಿಲ್ಲ. ಕೂಡಿಸುವ ಸಂಖ್ಯೆ ನಮಗೆ ತಿಳಿದರೆ ಸಾಕು, ಎಂದು ಹೇಳುತ್ತಾರೆ. ವ್ಯಾಪಾರ ವೃತ್ತಿಯನ್ನು ಎರಡು ಪ್ರಕಾರಗಳಲ್ಲಿ ವಿಭಾಗಿಸಿ ನೋಡಬಹುದು.

೧. ಮಹಿಳೆಯರ ವ್ಯಾಪಾರ

೨. ಪುರುಷರ ವ್ಯಾಪಾರ

ಮಹಿಳೆಯರ ವ್ಯಾಪಾರ : ಸಿಂಧೋಳ್ಳು ಮಹಿಳೆಯರು ತಾವು ವಾಸಿಸುವ ಸ್ಥಳಗಳಿಂದ ಬೇರೆ ಬೇರೆ ನಗರ, ಹಳ್ಳಿಗಳಿಗೆ ಹೋಗಿ ಅವರಲ್ಲಿದ್ದ ವಸ್ತುಗಳನ್ನು ಮಾರಾಟ ಮಾಡುವುದುಂಟು. ಮಾರಾಟದ ವಸ್ತುಗಳು ಚಿಕ್ಕ ವಸ್ತುಗಳಾಗಿರುತ್ತವೆ. ಮಾರಾಟದ ವಸ್ತುಗಳು ನಗರಗಳಿಂದಲೇ ಕೊಂಡು ತಂದು ಚಿಲ್ಲರೆ ಮಾರಾಟ ಮಾಡುವುದು ಗೃಹಿಣಿಯರ ಕರ್ತವ್ಯವಾಗಿದೆ.

ಸಿಂಧೋಳ್ಳು ಮಹಿಳೆಯರು ಬೀದಿ ಬೀದಿಯಲ್ಲಿ "ಸೂಜಿ... ಪಿನ್ನೇಪೇನಾ... ದರ್ಪಣಾಮ್ಮ.........." ಎಂದು ಕೂಗುತ್ತಾ ಇತರೇ ಜನರನ್ನು ಆಕರ್ಷಿಸುತ್ತಾರೆ.[೫೪] ಮಾರಾಟದ ವಸ್ತುಗಳು ಸಹ ಮಹಿಳೆಯರಿಗೆ ಅತಿ ಪ್ರಿಯವಾದವುಗಳೇ ಆಗಿವೆ. ಮಹಿಳೆಯರನ್ನು ಆಕರ್ಷಿಸುವಂತೆ ಮಾಡಿ, ಅವರುಗಳ ಮನವೊಲಿಸುವಂತೆ ಮಾಡಿ, ಒಂದಾದರೂ ವಸ್ತುವನ್ನು ಕೊಳ್ಳುವಂತೆ ಪ್ರೇರೇಪಿಸಿ ತೆಗೆದುಕೊಳ್ಳುವಂತೆ ಮಾಡುವ ವಿಶಿಷ್ಟ ಗುಣವನ್ನು ಹೊಂದಿದ್ದಾರೆ.[೫೫] ವ್ಯಾಪಾರಕ್ಕಾಗಿ ಆಯ್ಕೆ ಮಾಡಿಕೊಳ್ಳುವ ಸ್ಥಳಗಳು ಸಹ ಗ್ರಾಮೀಣ ಪರಿಸರಕ್ಕೆ

ಸೇರಿದವುಗಳೇ ಹೆಚ್ಚು. ಗ್ರಾಮೀಣ ಭಾಗದ ಮಹಿಳೆಯರಿಗೆ ಹೆಚ್ಚು ಪ್ರಿಯವಾದ ಮತ್ತು ಅಗತ್ಯ ವಸ್ತುಗಳನ್ನು ಮಾರಾಟ ಮಾಡುತ್ತಾರೆ.

ಸಿಂಧೋಳ್ಳು ಮಹಿಳೆಯರು ವ್ಯಾಪಾರದ ಮಾರಾಟವನ್ನು ಗುರುತಿಸಬೇಕಾದರೆ, ಅವರುಗಳು ವ್ಯಾಪಾರ ಮಾಡುವ ಬೀದಿ ಮುಖ್ಯವಾಗಿರುತ್ತದೆ. ಉದಾಹರಣೆಗಾಗಿ ಶಿವಮೊಗ್ಗದಲ್ಲಿ ವಾಸಿಸುವ ಮಹಿಳೆಯರು ಸುಮಾರು ೫ ರಿಂದ ೧೦ ಮಹಿಳೆಯರು ಮುಂಜಾನೆ ೬ ಗಂಟೆಗೆ ಗುಡಾರದಿಂದ ನಿರ್ಗಮಿಸುವರು. ವ್ಯಾಪಾರ ಮಾಡಿದ ಬಳಿಕ ಸಂಜೆ ೫ ಗಂಟೆಗೆ ಎಲ್ಲ ಮಹಿಳೆಯರು ಬಸ್ ನಿಲ್ದಾಣದಲ್ಲಿ ಸೇರಿಕೊಂಡು, ಬರುತ್ತಾರೆ. ಒಮ್ಮೆ ಬಸ್ ಸಿಗದೇ ಇದ್ದಾಗ ನಡೆದುಕೊಂಡು ಬರುವುದುಂಟು. ಹೀಗೆ ದಿನವೊಂದಕ್ಕೆ ಸುಮಾರು ೧೦೦ ರೂಪಾಯಿಗಳಿಂದ ೧೫೦ ರೂ.ಗಳವರೆಗೆ ಸಂಪಾದನೆ ಮಾಡುವರು. ವ್ಯಾಪಾರವಾದ ದಿನದಲ್ಲಿ ಗಳಿಸಿದ ಆದಾಯದಲ್ಲಿ ಊಟ, ತಿಂಡಿ ನಡೆಯುತ್ತದೆ. ದಿನದಲ್ಲಿ ಗಳಿಸಿದ ಆದಾಯದಲ್ಲಿ ೮೦ ರೂ.ರಿಂದ ೧೦೦ ರೂಪಾಯಿಗಳವರೆಗೆ ಮನೆಗೆ ವಾಪಾಸ್ಸುತಂದರೆ, ಬಂಡವಾಳ ಮೂಲವಾಗಿ ಬಡ್ಡಿಯನ್ನು ನೀಡಿ, ಮನೆ ಖರ್ಚುಗಾಗಿ ೩೦ ರೂಪಾಯಿಗಳನ್ನು ಆಹಾರ ಸಾಮಾಗ್ರಿಗಳಿಗಾಗಿ ಬಳಸುವುದುಂಟು. ಇದು ಲಾಭಾಂಶ ಎಂದು ಹೇಳುತ್ತಾರೆ.[೫೬] ಮತ್ತೇ ವ್ಯಾಪಾರದ ಉದ್ದೇಶಕ್ಕಾಗಿ ಸ್ವಲ್ಪ ಹಣವನ್ನು ಶೇಖರಿಸುವುದು ಇವರ ದಿನಚರಿಯಾಗಿದೆ.

ಮೂಲತಃ ಭಿಕ್ಷಾಟನೆಯಿಂದ ಬಂದವರಾಗಿರುವುದರಿಂದ ಶಿಕ್ಷಣ ಪಡೆದವರ ಸಂಖ್ಯೆ ಇಲ್ಲವೆಂದೇ ಹೇಳಬಹುದು. ವ್ಯಾಪಾರ ಮಾಡುವ ಮಹಿಳೆಯರಲ್ಲಿ ಸಾಮಾನ್ಯವಾಗಿ ಮಧ್ಯಮ ವಯಸ್ಸು ಹಾಗೂ ಯುವ ಮಹಿಳೆಯರೆ ಹೆಚ್ಚು. ಮಹಿಳೆಯರು ಹೊಂದಿರುವ ಸಾಮಾಗ್ರಿಗಳು ೫೦೦.೦೦ ರೂ. ಬೆಲೆ ಬಾಳುವಂತದ್ದು. ಕರ್ನಾಟಕದಲ್ಲಿ ಸ್ತ್ರೀಯರ ಸಂಖ್ಯೆ ೧,೫೭೬ ಇದ್ದು ಇದರಲ್ಲಿ ವ್ಯಾಪಾರ ಮಾಡುವ ಮಹಿಳೆಯರ ಸಂಖ್ಯೆ ೧೧೪. ಮಹಿಳೆಯರು ವ್ಯಾಪಾರ ಮಾಡುವ ವಸ್ತುಗಳನ್ನು ಈ ಕೆಳಗಿನ ಕೋಷ್ಟಕದಲ್ಲಿ ವಿವರಿಸಲಾಗಿದೆ.

**ಕೋಷ್ಟಕ ೩.೪ ಸ್ತ್ರೀ ಸಿಂಧೋಳ್ಳು ಸಮುದಾಯದ ವಾಣಿಜ್ಯ ವಾಹಿವಾಟು**

| ಸಂ. | ವ್ಯಾಪಾರ ಮಾಡುವ ವಸ್ತುಗಳು | ಧರ | ಸಿಂಧೋಳ್ಳುರು ಮಾರಾಟ ಮಾಡುವ ವಸ್ತುಗಳ ಧರ | ಲಾಭಂಶ |
|---|---|---|---|---|
| ೧. | ಹೇರ್‌ಪಿನ್ | ೦.೫೦ | ೧.೦೦ | ೦.೫೦ ಪೈ. |
| ೨. | ಟಿಕಲಿ | ೧.೫೦ | ೨.೦೦ | ೦.೫೦ ಪೈ. |
| ೩. | ಕಾಡಿಗೆ | ೩.೦೦ | ೪.೦೦ | ೧.೦೦ ರೂ. |
| ೪. | ತಾಳಿಮಣಿ ಸರ | ೧.೦೦ | ೨.೦೦ | ೧.೦೦ ರೂ. |
| ೫. | ರೀಬನ್ | ೨.೦೦ | ೩.೦೦ | ೧.೦೦ ರೂ. |
| ೬. | ಕನ್ನಡಿ | ೫.೦೦ | ೮.೦೦ | ೩.೦೦ ರೂ. |
| ೭. | ಡಬಣ್ಣ | ೧.೦೦ | ೧.೫೦ | ೦.೫೦ ಪೈ. |

| | | | |
|---|---|---|---|
| ೮. ಸೂಜಿ | ೧.೦೦ | ೧.೫೦ | ೦.೫೧ ಪೈ. |
| ೮. ಮಣಿಸರ | ೫.೦೦ | ೬.೦೦ | ೧.೦೦ ರೂ. |
| ೯. ಬೆಂಡಾಲಿ | ೧೫.೦೦ | ೨೦.೦೦ | ೫.೦೦ ರೂ. |
| ೧೦. ಕಾಫಿ ಫಿಲ್ಟರ್ | ೬.೦೦ | ೮.೦೦ | ೨.೦೦ ರೂ. |
| ೧೧. ಕ್ಲಿಪ್ | ೪.೦೦ | ೫.೦೦ | ೧.೦೦ ರೂ. |
| ೧೨. ಬಾಚಣಿಕೆ | ೨.೦೦ | ೩.೦೦ | ೧.೦೦ ರೂ. |

**ಪುರುಷರ ವ್ಯಾಪಾರ :** ಪೋತರಾಜ ಮಂಗಳವಾರ ಮತ್ತು ಶುಕ್ರವಾರದಂದು ಭಿಕ್ಷಾಟನೆ ಮಾಡಿದ ನಂತರದಲ್ಲಿ ಸುಮ್ಮನೆ ಕೂಡುವುದಿಲ್ಲ. ಆತನು ಪ್ಲಾಸ್ಟಿಕ್ ಕೊಡಗಳ ವ್ಯಾಪಾರ ಮಾಡುತ್ತಾನೆ. ಇಂದಿನ ಮಾರುಕಟ್ಟೆಗಳಲ್ಲಿ ಪ್ಲಾಸ್ಟಿಕ್ ಕೊಡಗಳು ವ್ಯಾಪಾರ ದೃಷ್ಟಿಯಿಂದ ನಿರುದ್ಯೋಗಿಗಳಿಗೆ ಯಾವುದೇ ಬಂಡವಾಳವಿಲ್ಲದೆ ಕೊಡಗಳನ್ನು ಮಾರಾಟ ಮಾಡಿಲಿಕ್ಕೆ ಕೊಡುತ್ತಾರೆ. ಮಾರಾಟವಾದ ನಂತರ ಮಾಲೀಕರು, ಹಣ ವಸೂಲಿ ಮಾಡಿಕೊಂಡು ಬರುವರು. ಇಂತಹ ವ್ಯಾಪಾರದಲ್ಲಿ ಸಿಂಧೋಳ್ಳುರು ಯಾವುದೇ ಬಂಡವಾಳವಿಲ್ಲದೆ, ತಮ್ಮದೇ ಕಾಯಕದಲ್ಲಿ ತೊಡಗಿಸಿಕೊಂಡಿರುತ್ತಾರೆ. ಇದು ಅವರ ಮನಸ್ಸಿಗೆ ಸಂತೋಷಕೊಡುವ ಕೆಲಸವಾಗಿದೆ ಎಂಬುದಾಗಿ ತಮ್ಮ ಅನುಭವವನ್ನು ಹಂಚಿಕೊಳ್ಳುತ್ತಾರೆ.

ಪ್ಲಾಸ್ಟಿಕ್ ಕೊಡಗಳನ್ನು ಸೈಕಲ್‌ಗಳ ಮೇಲೆ ಹಾಕಿಕೊಂಡು "ಪ್ಲಾಸ್ಟಿಕ್ ಕೊಡ....... ಬೇಕೇನಾವ್ವ/ಪ್ಪ....... ಪ್ಲಾಸ್ಟಿಕ್ ಕೊಡಪಾನ" ಎಂದು ಕೂಗಿ ಕೊಳ್ಳುತ್ತಾ, ವಠಾರಗಳಿಗೂ ದಲಿತರ ಕೇರಿಗಳಿಗೂ ಪ್ರತಿಯೊಂದು ಓಣಿಗೂ ಹೋಗುತ್ತಾರೆ.[೫೬] ಇವರ ವ್ಯಾಪಾರ ತಂತ್ರಗಾರಿಕೆ ಮೇಲೆ ನಡೆಯುವಂತಹದ್ದು. ಒಂದು ಪ್ಲಾಸ್ಟಿಕ್ ಕೊಡಪಾನ ಮಾರುಕಟ್ಟೆಯಲ್ಲಿ ೨೦.೦೦ ರೂ.ಗಳಿಗೆ ಧರ ನಿಗದಿಯಾದರೆ, ಸಿಂಧೋಳ್ಳುರು ಮಾರಾಟ ಮಾರುವುದು ೩೦.೦೦ ರೂ.ಗಳಿಗೆ. ಲಾಭ ಬರುವುದು ೧೦.೦೦ ರೂ.ಗಳು ಈ ಹತ್ತು ರೂಪಾಯಿಗಳಲ್ಲಿ ಸಿಂಧೋಳ್ಳುರಿಗೆ ೫.೦೦ ರೂ. ಮಾಲೀಕನಿಗೆ ಉಳಿದ ರೂ. ೫.೦೦ ಲಾಭ ಬರುವುದುಂಟು. ಹೀಗೆ ಪ್ಲಾಸ್ಟಿಕ್ ಕೊಡಪಾನಗಳ ವ್ಯಾಪಾರದಿಂದ ಗುಡಾರಗಳಲ್ಲಿ ೧೦,೦೦೦ ರೂಪಾಯಿಗಳವರೆಗಿನ ಬೆಲೆ ಬಾಳುವಂತಹ ಕೊಡಗಳು ಕೂಡಿ ಹಾಕಿಕೊಂಡಿರುವುದುಂಟು. ಕರ್ನಾಟಕದಲ್ಲಿ ಸಿಂಧೋಳ್ಳು ಪುರುಷರ ಸಂಖ್ಯೆ ೨,೧೨೫. ವ್ಯಾಪಾರ ಮಾಡುವವರ ಸಂಖ್ಯೆ ೧೪೬. ಮತ್ತು ಪುರುಷರ ಮಾರಾಟದ ಕೊಡುಗಳ ಧರ ಪಟ್ಟಿ ಹೀಗಿದೆ.

ಕೋಷ್ಟಕ ೩.೫ ಪುರುಷ ಸಿಂಧೋಳ್ಳು ಸಮುದಾಯದ ವಾಣಿಜ್ಯ ವಾಹಿವಾಟು

| ಸಂ. | ವ್ಯಾಪಾರ ಮಾಡುವ ವಸ್ತುಗಳು | ಸಗಟು ವ್ಯಾಪಾರ | ಸಿಂಧೋಳ್ಳು ಮಾರಾಟ ಮಾಡುವ ವಸ್ತುಗಳ ಧರ | ಲಾಭಾಂಶ |
|---|---|---|---|---|
| ೧. | ಕೊಡುಪಾನ ದೊಡ್ಡದು | ೨೦.೦೦ | ೩೦.೦೦ | ೧೦.೦೦ |
| ೨. | ಕೊಡುಪಾನ ಚಿಕ್ಕದು | ೧೫.೦೦ | ೨೫.೦೦ | ೧೦.೦೦ |
| ೩. | ಪ್ಲಾಸ್ಟಿಕ್ ಚೆಂಬು | ೫.೦೦ | ೮.೦೦ | ೩.೦೦ |
| ೪. | ಪ್ಲಾಸ್ಟಿಕ್ ಮೊರ | ೧೦.೦೦ | ೧೫.೦೦ | ೫.೦೦ |
| ೫. | ಪ್ಲಾಸ್ಟಿಕ್ ಸಾಬೂನ ಬಾಕ್ಸ್ | ೫.೦೦ | ೮.೦೦ | ೩.೦೦ |

ಲಂಬರೇಖಾ ಚಿತ್ರ ೩.೧ ಕರ್ನಾಟಕ ಸಿಂಧೋಳ್ಳುರ ಸಣ್ಣವ್ಯಾಪಾರಿಗಳ ಲಿಂಗ ಪ್ರಮಾಣ




**ಕೂಲಿ :** ಮಾನವನು ಜೀವಿಸುವುದಕ್ಕೆ ಆಹಾರ ಅಗತ್ಯವಾಗಿದೆ. ಉತ್ಪಾದನೆ ಮುಖ್ಯವಾಗಿರುವುದರಿಂದ ಅವಲಂಬಿಸಿರುವ ಕ್ಷೇತ್ರಗಳು ವಿಭಿನ್ನವಾಗಿವೆ. ಅಲೆಮಾರಿಗಳಾದ ಸಿಂಧೋಳ್ಳುರು ನೆಲೆನಿಂತ ನಂತರದ ದಿನಗಳಲ್ಲಿ ರೂಪಿಸಿಕೊಂಡ ವಿಭಿನ್ನವಾದ ಉತ್ಪಾದನಾ ಮಾರ್ಗದಲ್ಲಿ ಕೂಲಿಯೂ ಒಂದು. ಕೂಲಿಯು ಶ್ರಮ ಶಕ್ತಿ ಬೆಲೆಯ ಅಥವಾ ಮೌಲ್ಯದ ಪರಿವರ್ತಿತ ರೂಪ. ಕಾರ್ಮಿಕನು ತನ್ನ ಶ್ರಮಶಕ್ತಿಗೆ ವಿನಿಮಯವಾಗಿ ಏನನ್ನು ಪಡೆಯುತ್ತಾನೋ ಅದೇ ಕೂಲಿ.[೫೮]

ಸಿಂಧೋಳ್ಳುರ ಆರಂಭಿಕ ದಿನಗಳಲ್ಲಿ ಧಾರ್ಮಿಕ ಭಿಕ್ಷೆಯನ್ನು ನಂಬಿ ಜೀವನ ಮಾಡುತ್ತಿದ್ದರು. ಪೂಜಾರಿ ಭಿಕ್ಷೆಗೆ ಹೋಗುವ ಸಂದರ್ಭದಲ್ಲಿ ಕಡಿಮೆ ಹಣ ಬಂದಾಗ, ಜನರು ಸರಿಯಾದ ರೀತಿಯಲ್ಲಿ ಊಟ ನೀಡದೆ ಇದ್ದಾಗ ಅನಿವಾರ್ಯವಾಗಿ ಕೂಲಿಗಾಗಿ ಅವಲಂಬನೆಯಾಗಬೇಕಾಯಿತು. ಇಂತಹ ಸಂದರ್ಭದಲ್ಲಿ ಸಮುದಾಯ ಅವರ ವಾಸಿಸುವ ಸ್ಥಳದಲ್ಲಿ ಜಮೀನಿನಲ್ಲಿ ಕೃಷಿ ಕೆಲಸಗಳು ಇದ್ದಾಗ ಅವರ ಮಾಲಿಕರರಿಂದ ಗೊತ್ತುಪಡಿಸಿಕೊಂಡು ಕೂಲಿಗಾಗಿ ಹೋಗುತ್ತಿದ್ದಿದ್ದರು. ಕೂಲಿಯ ರೂಪದಲ್ಲಿ ಹಣ ಇಲ್ಲವೇ ಧಾನ್ಯಗಳನ್ನು ಪಡೆಯುವುದು ಸಹಜವಾಗಿತ್ತು. ಇವರಲ್ಲಿ ಲಿಂಗ ತಾರತಮ್ಯವಿಲ್ಲದೆ ಸ್ತ್ರೀಯರು ಮತ್ತು ಪುರುಷರು ಜಮೀನಿಗಳಲ್ಲಿ ಕೂಲಿಗಾಗಿ ದುಡಿಯಲು ಹೋಗುವುದುಂಟು. ಕರ್ನಾಟಕದಲ್ಲಿ ಸಿಂಧೋಳ್ಳುರು ಕೂಲಿ ಮಾಡುವವರ ಸಂಖ್ಯೆ ೨೬೦.

**ಕೂಲಿಯ ವಿಧಗಳು :** ಜೀವನ ನಿರ್ವಹಣೆಗೆ ಕೂಲಿಕೆಲಸ ಸಹಕಾರಿಯಾಗಿದೆ. ಕೂಲಿಯಿಂದ ಬರುವ ದುಡಿಮೆಯು ಕುಟುಂಬವನ್ನು ಸುಧಾರೆಗೆ ಸಹಾಯಕವಾಗಿದೆ. ಮೇಲ್ನೋಟಕ್ಕೆ ಇದು ಅಂಥ ಬದಲಾವಣೆಯೇನೂ ಅಲ್ಲ ಅನಿಸದಿದ್ದರೂ, ಇವರ ದೃಷ್ಟಿಯಲ್ಲಿ ಇದು ಗಮನಾರ್ಹವಾದ ಬದಲಾವಣೆಯೇ ಆಗಿದೆ. ಆ ಕೂಲಿಗಳೆಂದರೆ: ೧. ಸಸಿ ನಾಟಿ ಮಾಡುವ ಕೆಲಸ ೨. ಕಳೆ ಕೆಲಸ ೩. ಭತ್ತ ಕಟಾವು ಮಾಡುವ ಕೆಲಸ ಇತ್ಯಾದಿ.

**೧. ಸಸಿ ನಾಟಿ ಮಾಡುವುದು :** ತುಂಗಾಭದ್ರ ಅಚ್ಚುಕಟ್ಟು ಪ್ರದೇಶಗಳಲ್ಲಿ ಭತ್ತ ಹೆಚ್ಚಾಗಿ ಬೆಳೆಯುವುದುಂಟು. ಇಲ್ಲಿನ ಭೂಮಾಲಿಕರು ಭತ್ತ ಸಸಿ ನಾಟಿ ಮಾಡಲಿಕ್ಕೆ ಸ್ತ್ರೀಯರನ್ನು ನೇಮಿಸಿ

ಕೊಳ್ಳುತ್ತಾರೆ. ಸಿಂಧೋಳ್ಳು ಮಹಿಳೆಯರು ಗುಂಪುನೊಂದಿಗೆ ನಾಟಿ ಮಾಡುವಾಗ ದಣಿವು, ಬೇಸರ ಕಳೆಯಲು ಹಾಡುಗಳನ್ನು ಹೇಳುವುದುಂಟು.[illegible] ಭತ್ತ ಕೂಲಿ ಕೆಲಸಕ್ಕಾಗಿ ಕೊಪ್ಪಳ ಜಿಲ್ಲೆಯ ಗಂಗಾವತಿ ತಾಲ್ಲೂಕಿನ ಸಿಂಧೋಳ್ಳುರು ಕೂಲಿಗಾಗಿ ಹೋಗುತ್ತಾರೆ. ಸಸಿ ನಾಟಿ ಮಾಡುವ ಮಹಿಳೆಯರಿಗೆ ದಿನಗೂಲಿ ೩೦.೦೦ ರೂ.ಗಳು ಮತ್ತು ಊಟ ಕೊಡುವುದುಂಟು.

**೨. ಕಳೆ ತೆಗೆಯುವ ಕೆಲಸ** : ಅಧಿಕ ಪ್ರಮಾಣದ ಒಣ ಭೂಮಿ ಹೊಂದಿದ ಭೂ ಮಾಲೀಕರ ಕುಟುಂಬದಲ್ಲಿ ಸಿಂಧೋಳ್ಳು ಮಹಿಳೆಯರು ಕಳೆ ಕೆಲಸಕ್ಕೆ ಹೋಗುವುದುಂಟು. ಜೋಳ, ಶೇಂಗಾ ಮತ್ತು ರಾಗಿ ಕಳೆ ತೆಗೆಯಲು ಹೋಗುತ್ತಾರೆ. ಇದನ್ನು ಕಳೆ ಕೆಲಸ ಎಂದು ಕರೆಯುವುದುಂಟು. ಇದು ಋತುಮಾನಗಳಿಗೆ ಅನುಸಾರವಾಗಿ ದುಡಿಯುತ್ತಾರೆ. ಕೂಲಿ ಬೆಳಗ್ಗೆಯಿಂದ ಸಂಜೆಯವರೆಗೆ ನಿಗದಿಪಡಿಸಲಾಗಿರುತ್ತದೆ. ದಿನ ಕೂಲಿ ಮಾಡುವವರಿಗೆ ಊಟದ ವ್ಯವಸ್ಥೆ ಮಾಡಿರುತ್ತಾರೆ.

**ಕೋಷ್ಟಕ ೩.೬ ಕಳೆಯ ಕೆಲಸದ ಕೂಲಿಯ ಧರಗಳು**

| ಸಂ. | ಕೂಲಿಯ ಹೆಸರು | ರೂಪಾಯಿ |
|---|---|---|
| ೧. | ಜೋಳದ ಕಳೆ | ೧೫.೦೦ |
| ೨. | ಶೇಂಗಾ ಕಳೆ | ೨೦.೦೦ |
| ೩. | ರಾಗಿ ಕಳೆ | ೧೫.೦೦ |
| ೪. | ಸಜ್ಜೆ ಕಳೆ | ೧೫.೦೦ |
| ೫. | ನವಣೆ ಕಳೆ | ೧೫.೦೦ |

**೩. ಭತ್ತಕೊಯ್ಯುವ ಕೆಲಸ** : ಸಿಂಧೋಳ್ಳು ಪುರುಷರು ಹೆಚ್ಚಾಗಿ ಭತ್ತ ಕೊಯ್ಯುವ ಕೆಲಸಕ್ಕೆ ಹೋಗುತ್ತಾರೆ. ಇವರು ಕೆಲವು ತಿಂಗಳ ಕಾಲ ಕಾರಟಗಿ ಮತ್ತು ರಾಯಚೂರು ಸ್ಥಳಗಳಿಗೆ ವಲಸೆ ಹೋಗುವುದುಂಟು. ಭತ್ತ ಕೊಯ್ಯುವ ಸ್ಥಳದಲ್ಲಿ ಒಮ್ಮೆ ಗುಡಾರಗಳನ್ನು ಹಾಕಿಕೊಂಡು ಎಲ್ಲ ಕೆಲಸ ಮಾಡಿದ ನಂತರ ಮಾಲೀಕರು ಚೀಲಗಟ್ಟಲೆ ಭತ್ತ ಉಚಿತವಾಗಿ ಕೊಡುತ್ತಾರೆ. ಬಂದಿರುವ ಭತ್ತವನ್ನು ಜಿನ್‌ಗಳಿಗೆ ಹಾಕಿಸಿ ಅಕ್ಕಿಯನ್ನು ಹಬ್ಬ ಹರಿದಿನಗಳಲ್ಲಿ ಮತ್ತು ಮದುವೆ ಕಾರ್ಯಕ್ರಮದಲ್ಲಿ ಊಟಕ್ಕಾಗಿ ಬಳಸಿಕೊಳ್ಳುತ್ತಾರೆ.

**ಕೋಷ್ಟಕ ೩.೭ ಭತ್ತದ ಕೂಲಿಯ ಧರಗಳು**

| ಸಂ. | ಕೂಲಿಯ ಹೆಸರು | ರೂಪಾಯಿ |
|---|---|---|
| ೧. | ಭತ್ತ ಕೊಯ್ಯುವ ಕೆಲಸ | ೫೦.೦೦ |
| ೨. | ಭತ್ತ ರಾಶಿ ಮಾಡುವುದು | ೫೦.೦೦ |
| ೩. | ಭತ್ತ ಮಿಷನ್‌ಗೆ ಹಾಕುವುದು | ೫೦.೦೦ |
| ೪. | ಭತ್ತದ ಚೀಲಗಳನ್ನು ಹೊರುವುದು | |
| | ಒಂದು ಚೀಲಕ್ಕೆ | ೧.೦೦ |

೪. ಮನೆಕಟ್ಟುವವರ ಜೊತೆಯಲ್ಲಿ ಕೂಲಿಕೆಲಸ/ಬೇಲ್ದಾರ ಕೆಲಸ : ಭಿಕ್ಷಾಟನೆ ಮಾಡಿ ಜೀವನ ಸಾಗಿಸುತ್ತಿದ್ದ ಸಿಂಧೋಳ್ಳುರು ಇಂದು ಮನೆ ಕಟ್ಟುವವರ ಜೊತೆಯಲ್ಲಿ ಕೆಲಸಕ್ಕೆ ಹೋಗುತ್ತಿದ್ದಾರೆ. ಕೇವಲ ಮಳೆ, ಗಾಳಿ, ಚಳಿಯಿಂದ ತಮ್ಮನ್ನು ರಕ್ಷಿಸಿಕೊಳ್ಳಲು ಗುಡಾರವನ್ನು ನಿರ್ಮಿಸಿಕೊಳ್ಳುತ್ತಿದ್ದ ಕೈಗಳು ಇಂದು ಸಿಮೆಂಟು ಕಲಿಸುವ, ಸಾಮರ್ಥ್ಯವನ್ನು ಪಡೆದಿವೆ. ಇದು ಒಂದು ರೀತಿಯ ಕಷ್ಟದ ಕೆಲಸ. ಸಿಂಧೋಳ್ಳುರು ದೈಹಿಕವಾಗಿ ಬಲಶಾಲಿಗಳಾಗಿರುವುದರಿಂದ ಇಂತಹ ಕೆಲಸ ನಿರ್ವಹಿಸುವುದರಲ್ಲಿ ನಿಸ್ಸೀಮರಾಗಿದ್ದಾರೆ. ಈ ವೃತ್ತಿಯನ್ನು ಅವಲಂಬಿಸಿರುವ ಕುಟುಂಬಗಳು ಸುಖ ಜೀವನವನ್ನು ಸಾಗುಸುತ್ತಿವೆ. ಮೊದಲಿಗೆ ಇಂತಹ ಕೆಲಸ ಮಾಡುವಲ್ಲಿ ಈ ಸಮುದಾಯದವರ ಪಾಲು ಸೊನ್ನೆಯಾಗಿತ್ತು. ಕಾಲಕಳೆದಂತೆ ಈ ವೃತ್ತಿ ಅನುಸರಿಸುತ್ತಿರುವುದನ್ನು ಕಾಣಬಹುದಾಗಿದೆ. ಈಗಲೂ ಇತರೆ ಸಮುದಾಯದೊಂದಿಗೆ ಬೆರತು ಕೆಲಸ ನಿರ್ವಹಿಸುತ್ತಿದ್ದಾರೆ.

**ಕೋಷ್ಟಕ ೩.೮ ಮನೆ ಕಟ್ಟುವ ಕೂಲಿಯ ಧರಗಳು**

| ಸಂ. | ಕೂಲಿಯ ಹೆಸರು | ರೂಪಾಯಿ |
|---|---|---|
| ೧. | ಇಟ್ಟಿಗೆ ತುಂಬಿ ಹಾಕುವುದು | ೪೦.೦೦ |
| ೨. | ಕಾಂಕ್ರೀಟ್ ಕಲಿಸುವುದು | ೫೦.೦೦ |
| ೩. | ಸಿಮೆಂಟ್ ಕಲಿಸುವುದು | ೪೦.೦೦ |
| ೪. | ಭಾರವಾದ ಸಾಮಾನುಗಳ ಹೊರುವುದು | ೫೦.೦೦ |
| ೫. | ಕಡಪ ಬಂಡೆಗಳ ಹೊತ್ತು ತರುವುದು | ೫೦.೦೦ |

**ಇತರೆ ವೃತ್ತಿ :** ಸಿಂಧೋಳ್ಳು ಬುಡಕಟ್ಟಿನವರು ಮೀನುಗಾರಿಕೆ ಮತ್ತು ಬಕೇಟ್ ರೀಪೇರಿಯ ಕೆಲಸ ಮಾಡುತ್ತಾರೆ. ಕರ್ನಾಟಕದಲ್ಲಿ ಸಿಂಧೋಳ್ಳುರು ಇತರೆ ವೃತ್ತಿಗಳಲ್ಲಿ ಒಳಗೊಂಡಿರುವ ಸಂಖ್ಯೆ ತುಂಬಾ ಕಡಿಮೆ.

೧. ಮೀನುಗಾರಿಕೆ ವೃತ್ತಿ : ಉತ್ತಮ ಬೇಟೆಗಾರರಾದ ಸಿಂಧೋಳ್ಳುರು ಮೀನು ಹಿಡಿಯುವ ಕೆಲಸವನ್ನು ಚೆನ್ನಾಗಿ ನಿಭಾಯಿಸುತ್ತಾರೆ. ಕೆರೆಯ ಅಕ್ಕಪಕ್ಕದ ಪ್ರದೇಶಗಳಲ್ಲಿ ವಾಸಿಸುವ ಸಿಂಧೋಳ್ಳುರೆಲ್ಲರೂ ಮೀನು ಶಿಕಾರಿಯನ್ನು ಚೆನ್ನಾಗಿ ಹಿಡಿಯಬಲ್ಲರು. ಕೆರೆ ಕಾಲುವೆ ಇನ್ನಿತರ ಪ್ರದೇಶಗಳಲ್ಲಿ ಮೀನು ಸಾಕಲು ಹಾಗೂ ಹಿಡಿಯಲು ಅನುಮತಿ ಪಡೆದುಕಂಡು, ಮೀನುಗಾರರ ಸಂಘದ ಕೈಕೆಳಗೆ ಮೀನು ಹಿಡಿದು ಕೊಡುವ ಕೆಲಸಕ್ಕೆ ಸೇರಿಸಿಕೊಳ್ಳುತ್ತಾರೆ. ಒಂದು ಕೆ.ಜಿ. ಮೀನು ಹಿಡಿದರೆ ಇಂತಿಷ್ಟು ಸಂಭಾವನೆ ಎಂಬ ಕರಾರಿನ ಮೇಲೆ ಮೀನು ಹಿಡಿಯುವರು.[೬೦] ಸಾಮಾನ್ಯವಾಗಿ ಒಂದು ಕೆ.ಜಿ. ಮೀನು ಹಿಡಿದರೆ ೧೦ ರಿಂದ ೧೨ ರೂಪಾಯಿ ಸಂಭಾವನೆ ಕೊಡುತ್ತಾರೆ. ಹೀಗೆ ಕನಿಷ್ಟ ದಿನದಲ್ಲಿ ೧೦೦ ರಿಂದ ೧೨೦ ರೂಪಾಯಿಗಳವರೆಗೆ ದುಡಿಯುತ್ತಾರೆ. ಕೆಲವು ಪ್ರದೇಶಗಳಲ್ಲಿ ಕೆರೆ, ಹಳ್ಳಗಳ ಪ್ರದೇಶಗಳಲ್ಲಿ ತಾವೇ ಸ್ವಾತಂತ್ರವಾಗಿ ಮೀನು ಹಿಡಿದು ಊರಲ್ಲಿ ವ್ಯಾಪಾರ ಮಾಡುತ್ತಾರೆ. ಸಾಮಾನ್ಯವಾಗಿ ಪುರುಷರು ಮೀನು ಹಿಡಿದು ತಂದರೆ ಸ್ತ್ರೀಯರು ಮಾರಾಟ ಮಾಡಿ ಹಣ ಸಂಗ್ರಹಿಸುತ್ತಾರೆ.

**ಬಕೇಟ್ ರೀಪೇರಿ :** ಕುಟುಂಬದ ಆರ್ಥಿಕ ಮಟ್ಟವನ್ನು ಸುಧಾರಿಸಿಕೊಳ್ಳಲು ಅನೇಕ ವೃತ್ತಿಗಳಲ್ಲಿ ತೊಡುಗುವುದು ಅನಿವಾರ್ಯವಾಗಿದೆ. ಹೀಗಾಗಿ ಸಿಂಧೋಳ್ಳುರು ಬಕೆಟ್ ರೀಪೇರಿ ಕೆಲಸವನ್ನು ಮಾಡುತ್ತಾರೆ. ಇವರು ಪ್ಲಾಸ್ಟಿಕ್ ಕೊಡ ಮತ್ತು ಬಕೇಟ್ ರೀಪೇರಿ ಮಾಡುವ ಹಳ್ಳಿ ಹಳ್ಳಿಗೂ ಹೋಗುವುದುಂಟು. ಬಕೇಟ್ ರೀಪೇರಿ ಮಾಡಲು ಪರಿಕರಗಳೆಂದರೆ ಕಟ್ಟಿಗೆ ಅಥವಾ ಪ್ಲಾಸ್ಟಿಕ್ ಹಿಡಿಕೆಯುಳ್ಳ ಅಗಲವಾದ ಎರಡು ಕಬ್ಬಿಣದ ಪಟ್ಟಿಕೆಗಳು (L) ಎಲ್ ಆಕಾರದ ಒಂದು ಕಬ್ಬಿಣದ ಸಲಾಕೆ (ಇದು ಇಕ್ಕಟ್ಟಿನ ಸ್ಥಳಗಳಲ್ಲಿ ಬೆಸಿಗೆಯಾಕಲು ಬಳಸುವರು). ಚಿಕ್ಕ ಚಿಕ್ಕ ರಂಧ್ರಗಳು ಒಂದು ತಗಡಿನ ಡಬ್ಬಿ ಇದಕ್ಕೆ ಒಂದು ತಂತಿಯ ಹಿಡಿಕೆಯನ್ನು ಹಾಕಿರುತ್ತಾರೆ. ತೇಪೆ ಹಾಕಲು ಬಳಸುವ ಸಾಧನೆಗಳನ್ನು ಬಿಸಿ ಮಾಡಲು ಇದ್ದಿಲು, ಬೆಂಕಿ ಮಾಡಲು ಊದಲು ಬೇಕಾಗುವ ಒಂದು ಉದೋಗೊಳವಿ, ಶೇವ್ ಮಾಡಿ ಬಿಟ್ಟ ಹಳೇ ಬ್ಲೇಡ್ ಮತ್ತು ತೇಪೆ ಹಾಕಲು ಪ್ಲಾಸ್ಟಿಕ್ ತುಂಡುಗಳು ಬೇಕಾಗುತ್ತದೆ. ಬಕೇಟ್ ರೀಪೇರಿ ಮಾಡುವ ಪರಿಕರಗಳಿಗೆ ಹೆಚ್ಚಿನ ಬಂಡವಾಳದ ಅವಶ್ಯಕತೆಯೂ ಇಲ್ಲ. ಹೆಚ್ಚೆಂದರೆ ೧೦:೩೦ ರೂಪಾಯಿಗಳಿಗೆ ಈ ಎಲ್ಲಾ ಪರಿಕರಗಳು ದೊರಕುತ್ತವೆ. ವಿವಿಧ ರೀತಿಯ ಗುಣಮಟ್ಟದ ಪ್ಲಾಸ್ಟಿಕ್ ವಸ್ತುಗಳನ್ನು ರಿಪೇರಿ ಮಾಡಬೇಕಾದ ಸಂದರ್ಭದಲ್ಲಿ ರೀಪೇರಿ ಮಾಡುವವನಿಗೆ ಇದರಲ್ಲಿ ಹೆಚ್ಚಿನ ಬುದ್ಧಿವಂತಿಕೆ ಇರುತ್ತದೆ. ಈ ಉದ್ಯೋಗ ವಿಶ್ರಾಂತಿಯನ್ನು ನೀಡುವುದಲ್ಲದೆ, ಆರ್ಥಿಕ ಚಟುವಟಿಕೆಯಲ್ಲಿ ಸಹಾಯಕವಾಗಿದೆ.

ಕೋಷ್ಟಕ ೩.೯ ಕರ್ನಾಟಕದ ಸಿಂಧೋಳ್ಳುರ ಬುಡಕಟ್ಟಿನ ವೃತ್ತಿ ವೈವಿಧ್ಯ

| ಸಂ. | ವೃತ್ತಿಗಳು | ಒಟ್ಟುಸಂಖ್ಯೆ |
|---|---|---|
| ೧. | ಕೂಲಿ | ೨೬೦ |
| ೨. | ಧಾರ್ಮಿಕ ಭಿಕ್ಷಾಟನೆ | ೧, ೭೭೬ |
| ೩. | ಹಂದಿಸಾಕಾಣಿಕೆ | ೨೦೨ |
| ೪. | ಸಣ್ಣ ವ್ಯಾಪಾರ | ೨೬೦ |
| ೫. | ಮೀನುಗಾರಿಕೆ | ೧೬೮ |

ಈ ಮೇಲಿನ ಕೋಷ್ಟಕದಲ್ಲಿ ಸಿಂಧೋಳ್ಳುರು ಮಾಡುವ ಕಸುಬುಗಳಲ್ಲಿ ಶೇ. ೧೧ರಷ್ಟು ಕೂಲಿಯನ್ನು ಅವಲಂಬಿಸಿದರೆ. ಶೇ. ೭೬ರಷ್ಟು ಧಾರ್ಮಿಕ ಭಿಕ್ಷಾಟನೆಯನ್ನು ವೃತ್ತಿಯನ್ನಾಗಿಸಿ ಕೊಂಡಿರುವುದು ಕಂಡುಬರುತ್ತದೆ. ಹಾಗೆಯೇ ಶೇ. ೮ರಷ್ಟು ಹಂದಿ ಮತ್ತು ಶೇ. ೭ರಷ್ಟು ಮೀನುಗಾರಿಕೆ ವೃತ್ತಿಗಳಲ್ಲಿ ತೊಡಗಿಸಿಕೊಂಡಿದ್ದರೆ. ಶೇ. ೧೧ರಷ್ಟು ಸಣ್ಣ ವ್ಯಾಪಾರದಲ್ಲಿ ತೊಡಗಿರುವುದನ್ನು ಕಾಣಬಹುದಾಗಿದೆ.

ಸಿಂಧೋಳ್ಳುರ ಆರ್ಥಿಕ ಸ್ಥಿತಿ ತುಂಬಾ ಕೆಳಮಟ್ಟದಲ್ಲಿರುವುದು ಕಂಡುಬರುತ್ತದೆ. ಒಂದೊತ್ತಿನ ಊಟಕ್ಕಾಗಿ ಪರದಾಡುವಂತಹ ಸ್ಥಿತಿ ಇವರದಾಗಿದೆ. ಒಂದು ದಿನ ಭಿಕ್ಷಾಟನೆ ಅಥವಾ ದುಡಿಯಲು ಹೋಗಲಿಲ್ಲವೆಂದರೆ ಅವರು ಅಂದು ಉಪವಾಸವೇ ಸರಿ. ಕೆಲವು ಕುಟುಂಬಗಳಲ್ಲಿ ಒಬ್ಬರಿಗಿಂತ ಹೆಚ್ಚು ಜನ ದುಡಿಯುವವರಿದ್ದರೂ ಸಹ ಅವರ ಆರ್ಥಿಕ ಮಟ್ಟ ಸುಧಾರಿಸಿಲ್ಲ. ಇವರು ಯಾವುದಾದರೂ

ವ್ಯಾಪಾರ ಮಾಡುವುದಕ್ಕೆ ಬಂಡವಾಳದ ಕೊರತೆ ಎದ್ದು ಕಾಣುತ್ತದೆ. ಅಲೆಮಾರಿಗಳಾಗಿರುವುದರಿಂದ ಇವರಿಗೆ ಯಾರೂ ಆರ್ಥಿಕ ಭದ್ರತೆಯನ್ನು ನೀಡಲು ಮುಂದಾಗುತ್ತಿಲ್ಲ. ಇವರ ದುಡಿಮೆಗೆ ಸರಿಯಾದ ಪ್ರತಿಫಲಸಿಗದೇ ಇನ್ನೂ ಶೋಷಣೆಯ ಹಂತದಲ್ಲಿರುವುದರಿಂದ ಇವರ ಜೀವನಮಟ್ಟ ಸುಧಾರಿಸಲು ಸಾಧ್ಯವಾಗುತ್ತಿಲ್ಲ. ಕೆಲವೊಂದು ಪ್ರದೇಶಗಳಲ್ಲಿ ಅವರ ಬುದ್ಧಿಶಕ್ತಿಗನುಗುಣವಾಗಿ ದುಡಿದು, ದುಂದುವೆಚ್ಚ ಮಾಡದೇ ಆರ್ಥಿಕ ಮಟ್ಟವನ್ನು ಉತ್ತಮ ಪಡಿಸಿಕೊಂಡಿದ್ದಾರೆ. ಆದರೂ ಕರ್ನಾಟಕದಲ್ಲಿ ಸಿಂಧೋಳ್ಳರ ಬದುಕು ತುಂಬಾ ಕಷ್ಟದಲ್ಲಿದೆ. ಶಿಕ್ಷಣದಿಂದ ವಂಚಿತವಾದ ಈ ಸಮುದಾಯ ಆಧುನಿಕ ಸಮಾಜದಲ್ಲಿ ತುಂಬಾ ತೊಂದರೆಯನ್ನು ಅನುಭವಿಸುತ್ತಿದೆ. ಹೀಗೆ ಸಿಂಧೋಳ್ಳರ ಬದುಕು ನಿರಂತರವಾಗಿ ಅತಂತ್ರ ಸ್ಥಿತಿಯಲ್ಲಿದೆ. ಆದಕಾರಣ ಸರಿಯಾದ ಸೌಲಭ್ಯಗಳನ್ನು ನೀಡುವುದು ಸರ್ಕಾರದ ಕರ್ತವ್ಯವಾಗಿದೆ.

**ಬೇಟೆ**

ಮಾನವನು ತನ್ನ ಜೀವನಕ್ಕೋಸ್ಕರ ಅರಣ್ಯದಲ್ಲಿ ದೊರೆಯಬಹುದಾದ ಗಡ್ಡೆ ಗೆಣಸು, ಹಣ್ಣು ಹಂಪಲುಗಳನ್ನು ಆಹಾರೋತ್ಪಾದನೆಗಾಗಿ ಬಳಸಿಕೊಂಡನು. ಜೊತೆಯಲ್ಲಿ ತಾನು ವಾಸಿಸುವ ನೆಲೆಗಳ ಮೇಲೆ ಪ್ರಾಣಿಗಳು ಆಕ್ರಮಣ ಮಾಡಿದಾಗ, ರಕ್ಷಣೆಗೋಸ್ಕರ ಹೋರಾಟ ಮಾಡಿದನು. ಅವುಗಳ ತೊಂದರೆಗಳಿಂದ ತಪ್ಪಿಸಿಕೊಳ್ಳುವುದಕ್ಕಾಗಿ ಅವುಗಳನ್ನು ಕೊಲ್ಲತೊಡಗಿದನು. ಪ್ರಾಣಿಯ ಆಹಾರವನ್ನು ಸೇವಿಸತೊಡಗಿದ. ಬೇಟೆಯಾಡಿ ಕೊಂದ ಎಲ್ಲ ಪ್ರಾಣಿಗಳ ಮಾಂಸವನ್ನು ಆತನು ರುಚಿ ನೋಡಿರಲೂ ಬೇಕು. ಅವುಗಳ ಪೈಕಿ ನಾಲಗೆಗೆ ಒಗ್ಗಿದ, ಹೊಟ್ಟೆಗೆ ಪಥ್ಯವೆನಿಸಿದ ಪ್ರಾಣಿಗಳ ಮಾಂಸ ಮಾತ್ರ ಆಹಾರಕ್ಕೆ ಯೋಗ್ಯವಾಗಿ ಮುಂದುವರೆದಿರಬಹುದು.[೬೧] ಮೊದಲು ರಕ್ಷಣೆಯ ನೆಪದಲ್ಲಿ ಆರಂಭವಾದ ಬೇಟೆ ಹಸಿವನ್ನು ನೀಗುವ ಸಾಧನವಾಯಿತು. ಅದಕ್ಕಾಗಿ ಪ್ರಾಣಿ ಮಾಂಸ ಉಪಯೋಗಿಸಿದ ನಂತರ ಚರ್ಮಗಳನ್ನು ಸುಲಿದು, ಒಣಗಿಸಿ, ಮೈಯಿಗೆ ಸುತ್ತಿಕೊಳ್ಳತೊಡಗಿದನು. ಕಾಲಕ್ರಮೇಣ ಅವನಲ್ಲಿ ಅಲಂಕಾರ ಪ್ರಿಯತೆ ಬೆಳೆದು ಮತ್ತು ಮಾಂಸದ ಎಲುಬುಗಳನ್ನು ಸಂಗ್ರಹಿಸಿಕೊಂಡನು. ಜೊತೆಯಲ್ಲಿ ಪ್ರಾಣಿಗಳನ್ನು ಹಿಡಿಯುವ ಅಭ್ಯಾಸದಿಂದ ಹಿಡಿದು ವ್ಯವಸಾಯದವರೆಗೂ ತನ್ನ ವೃತ್ತಿಗಳನ್ನು ಬೆಳಸಿಕೊಂಡನು. ಅಲ್ಲದೇ ಅರಣ್ಯದ ಮಧ್ಯೆ ಕಳ್ಳಕಾಕರಿಂದ ರಕ್ಷಣೆ ಪಡೆಯಲು ಪ್ರಮುಖ ಪ್ರಾಣಿಗಳನ್ನು ಸಾಕಿಕೊಂಡ. ಹೀಗೆ ರಕ್ಷಣೆ ಮತ್ತು ಹಸಿವನ್ನು ನೀಗಿಸಿಕೊಳ್ಳುವುದು ಬಹಳ ಪ್ರಯಾಸದ ಕೆಲಸವಾಗಿತ್ತು. ಅದನ್ನು ತಕ್ಷಣದಲ್ಲಿ ಪಡೆದುಕೊಳ್ಳಲು ಸಾಧ್ಯವಿರಲಿಲ್ಲ. ಅದನ್ನು ಪಡೆದುಕೊಳ್ಳಲು ಅನಿವಾರ್ಯವಾಗಿ ಸಾಹಸಪಡಬೇಕಾಗಿತ್ತು. ಅದೇ ಅವನಿಗೆ ಬೇಟೆಯೆಂಬುದನ್ನು ಕಲಿಸಿತು. ಅದರಲ್ಲಿಯೇ ಹೆಚ್ಚು ಅವಲಂಬಿತನಾದನು. ಸುತ್ತಲಿನ ಪ್ರಕೃತಿ ಅವನಿಗೆ ಹೆಚ್ಚಿನ ಬೇಟೆಯ ವಿಧಾನವನ್ನು ಕಲಿಸಿಕೊಟ್ಟಿತು.

ಬುಡಕಟ್ಟು ಸಮುದಾಯಗಳು ಬೇಟೆಯ ಆಚರಣೆಯಲ್ಲಿ ಬಹಳ ನಿಪುಣರಾಗಿದ್ದಾರೆ. ಆದಕಾರಣ "ಬುಡಕಟ್ಟು ಸಮುದಾಯಗಳಿಗೆ ಬೇಟೆಯಾಡುವುದು ಮೊದಲನೆಯ ಹಂತ"[೬೨]ವಾಗಿತ್ತು ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯವಾಗಿದೆ. ಸಿಂಧೋಳ್ಳರು ಬೇಟೆಯಾಡಿ ಹಸಿವನು ಇಂಗಿಸಿಕೊಳ್ಳುತ್ತಿದ್ದರು. ಒಮ್ಮೆ ಭಿಕ್ಷೆ ಬೇಡುವುದು ಬಿಡಬಹುದು. ಆದರೆ ಬೇಟೆ ಆಚರಣೆ ಎಂದಿಗೂ ಬಿಡುವುದಿಲ್ಲವೆಂದು ಹೇಳುವುದುಂಟು.[೬೩] ಅವರಿಗೆ ದಿನನಿತ್ಯ ಧಾರ್ಮಿಕ ಕಾಯಕವಾಗಿದೆ. ಬಹುಶಃ ತಾವು ವಾಸಿಸುವ

ಪ್ರದೇಶಗಳಲ್ಲಿ ಪ್ರಾಣಿಗಳ ಹಾವಳಿಯನ್ನು, ನಿಯಂತ್ರಿಸುವ ಉದ್ದೇಶದಿಂದ ಮಾಡುವ ಬೇಟೆ ಮುಂದೆ ವಿದ್ಯುಕ್ತ ಸ್ವರೂಪಕ್ಕೆ ಬಂದಿರಬೇಕು. ಹೀಗಾಗಿ ಬೇಟೆ ವಿವಿಧ ತಂತ್ರೋಪಾಯಗಳನ್ನು ಕಲಿತಿರುವುದು ಪ್ರಮುಖ ಅಂಶವಾಗಿದೆ. ಸಿಂಧೋಳ್ಳರು ತಾವು ವಾಸಿಸುವ ಸ್ಥಳಗಳಲ್ಲಿ ಪ್ರಾಣಿಗಳನ್ನು ಸಾಕಿಕೊಂಡರು. ಅವುಗಳಲ್ಲಿ "ನಾಯಿಗಳ ನೆರವನ್ನು ಇವರು ಹೆಚ್ಚಾಗಿ ಪಡೆದುಕೊಳ್ಳುವುದು ಕಂಡು ಬರುತ್ತದೆ".[೬೪] ಬೇಟೆ ನಾಯಿಗಳೆಂದೇ ಕರೆಯಿಸಿಕೊಳ್ಳುವ ನಾಯಿಗಳು ಬೇಟೆಯಲ್ಲಿ ಪ್ರಾಣಿಗಳನ್ನು ಹಿಡಿಯಲು ಪ್ರಮುಖ ಪಾತ್ರವಹಿಸುತ್ತವೆ. ಆದರೆ ಎಲ್ಲಾ ನಾಯಿಗಳು ಬೇಟೆಗೆ ಬರುವುದಿಲ್ಲ. ಸಿಂಧೋಳ್ಳರ ನಾಯಿಗಳು ದಷ್ಟಪುಷ್ಟವಾಗಿ ಕಂಡುಬರುತ್ತವೆ. ಯಾರಾದರೂ ಗುಡಾರದ ಹತ್ತಿರ ಹೋದರೆ ನಾಯಿ ಇದೆ, ಇಲ್ಲವೆಂದು ತಿಳಿದುಕೊಂಡು ಹೊಗಬೇಕಾಗುತ್ತದೆ. ನಾಯಿಗಳು ಬಹಳ ಜಾಗುರಕತೆಯಿಂದ ಇರುತ್ತವೆ ಎಂದು ಹೇಳುತ್ತಾರೆ.[೬೫] ಆದಕಾರಣ ಬೇಟೆ ನಾಯಿಗಳನ್ನು ಸಾಕಿಕೊಂಡಿರುತ್ತಾರೆ. ಇವು ಪ್ರಾಣಿಗಳ ಹೆಜ್ಜೆಯ ಗುರುತಿನ ಮೇಲೆ ಬೇಟೆಯಾಡುತ್ತವೆ. ಈ ಲಕ್ಷಣಗಳನ್ನುಳ್ಳ ನಾಯಿಗಳನ್ನು ಮಾತ್ರ ಬೇಟೆಗಾಗಿ ಆಯ್ಕೆ ಮಾಡಿಕೊಳ್ಳುತ್ತಾರೆ.

ದಿನಾಲೂ ಭಿಕ್ಷೆ ಮುಗಿಸಿಕೊಂಡು, ಪ್ರತಿ ಗುಡಾರದಲ್ಲಿ ಸದಸ್ಯರಂತೆ ಮಧ್ಯಾಹ್ನ ಸಮಯದಲ್ಲಿ ಬೇಟೆಗೆ ಹೋಗುತ್ತಾರೆ. ಅರಣ್ಯ ಪ್ರವೇಶಿಸುವ ಮೊದಲು ಕುಲದೇವರುಗಳನ್ನು ಸ್ಮರಿಸಿಕೊಂಡು ಬೇಟೆಗೆ ಕೊಂಡೊಯ್ಯಲಿರುವ ಸಾಧನಗಳೆನ್ನೆಲ್ಲ ಒಂದಡೆ ಇಟ್ಟು ಪೂಜಿಸಿ ಒಳ್ಳೆಯ ಬೇಟೆ ಸಿಗಲಿ ಎಂದು ಪ್ರಾರ್ಥಿಸಿಕೊಳ್ಳುವರು. ಯಾವುದೇ ಅಡ್ಡಿ ಆತಂಕಗಳು ಒದಗದಿರಲೆಂದು ಪೂಜಾರಿ ಹೇಳುತ್ತಾನೆ.[೬೬] ನಂತರ ಪ್ರತಿ ಸದಸ್ಯರೆಲ್ಲರೂ ಭರ್ಜಿ, ಕತ್ತಿ, ಕೊಡಲಿ, ಗಂಡುಕೊಡಲಿ, ಕುಡುಗೋಲು, ಈಟಿ, ಕೋವಿ. ಮಚ್ಚು, ಮೀನಿನ ಬಲೆ. ಬೋನುಗಳು ಇತ್ಯಾದಿ ಹೀಗೆ ಹತ್ತಾರು ಆಯುಧಗಳನ್ನು ಹಿಡಿದುಕೊಂಡು, ಅರಣ್ಯದಲ್ಲಿ ನುಸುಳಿಕೊಳ್ಳುತ್ತಾರೆ. ಬೇಟೆ ಮಾಡುವಾಗ ಸಮುದಾಯದ ಜನರ ಸಹಕಾರ ಅಗತ್ಯವಾಗಿದೆ. ಬೇಟೆಗಾರರು ಪ್ರಾಣಿಗಳ ಚಲನ ವಲನಗಳನ್ನು, ಅವುಗಳ ಹೆಜ್ಜೆ, ಕೂಗು ಇತ್ಯಾದಿಗಳಿಂದ ಗುರುತಿಸುವ ಜಾಣ್ಮೆ ಹೊಂದಿದವರಾಗಿರುತ್ತಾರೆ. ಅವರು ಬೇಟೆಯಾಡುವ ತಂಪುಗಾರಿಕೆ ಅತ್ಯಂತ ಕುತೂಹಲಕರವಾಗಿದೆ.

ಉಡದ ಬೇಟೆ : ಬಂಡೆಯ ಸಂದುಗಳಲ್ಲಿ ಉಡಗಳು ಕಾಣಿಸಿಕೊಳ್ಳುತ್ತವೆ. ಸಿಂಧೋಳ್ಳರು ಉಡ ಹಿಡಿಯಬೇಕಾದರೆ, ಬಹಳ ಬುದ್ಧಿವಂತಿಕೆಯಿಂದ ಹಿಡಿಯುತ್ತಾರೆ. ಬಂಡೆಯ ಪಕ್ಕದಲ್ಲಿ ಒಲೆಯೋ ಪಾದಿಯಲ್ಲಿ ಕಲ್ಲುಗಳನ್ನು ಜೋಡಿಸಿ, ಆ ಜಾಗದಲ್ಲಿ ಬೆಂಕಿ ಹಚ್ಚಿ, ಹಸಿರು ಸೊಪ್ಪನ್ನು ಹಾಕಿ ಬಲವಾಗಿ ಗಾಳಿ ಬೀಸುತ್ತಾರೆ. ಹಾಗೆ ಬೀಸುವ ಗಾಳಿಯ ರಭಸಕ್ಕೆ ದಟ್ಟವಾದ ಹೊಗೆಯಿಂದ ಎರಡು ಬಂಡೆಗಳಲ್ಲಿ ನಡುವಿನ ಗುಹೆಗೆ ನುಗ್ಗುತ್ತದೆ. ವ್ಯಾಪಕವಾಗಿ ನುಗ್ಗಿದ ದಟ್ಟ ಹೊಗೆಯನ್ನು ತಾಳಲಾರದೆ. ಉಸಿರು ಕಟ್ಟಿದ ಉಡ ಹೊರಬರಲು ಸ್ಥಳ ಹುಡುಕುತ್ತದೆ. ಹಾಗೆ ಹೊರ ಬರುವ ಜಾಗದಲ್ಲಿ ಇಬ್ಬರು ಬಲವಾದ ವ್ಯಕ್ತಿಗಳು ಕಾಯ್ದಿದ್ದು ಬರುತ್ತಿರುವ ಉಡವನ್ನು ಹಿಡಿಯುತ್ತಾರೆ. ಉಡ ಗುಡಾರದಲ್ಲಿ ತಂದಾಗ ಅದರ ಪಕ್ಕೆಗಳಲ್ಲಿ ತುಪ್ಪವಿರುತ್ತದೆ. ಆ ತುಪ್ಪವನ್ನು ತೆಗೆದು ಬೆಂಕಿಯಿಂದ ಕಾಯಿಸಿ, ಹದಮಾಡಿ ಒಂದು ಬಾಟಲಿಗೆ ತುಂಬಿಡುತ್ತಾರೆ. ಕೈಕಾಲು ಮೂಳೆ ಮುರಿತಕ್ಕೆ, ಉಳುಕಿಗೆ, ವಾಯು ಹಿಡಿದುಕೊಂಡರೆ ನೋವಾಗಿರುವ ಜಾಗಕ್ಕೆ ತುಪ್ಪ ಉಜ್ಜಿದರೆ ಗುಣವಾಗುತ್ತದೆ ಎಂಬುವುದು ಇವರ ನಂಬಿಕೆಯಾಗಿದೆ.

**ಅಳಿಲು ಬೇಟೆ :** ಮರದ ಮೇಲೆ ವಾಸಮಾಡುವ, ಬಾಚಿಹಲ್ಲುಳ್ಳ ಪ್ರಾಣಿ ವರ್ಗಕ್ಕೆ ಸೇರಿದ ಪೊದೆಯ ಬಾಲದ ಒಂದು ಸಣ್ಣ ಪ್ರಾಣಿ. ಇದಕ್ಕೆ ಬೆನ್ನಿನ ಮೇಲೆ ಬಂಗಾರ ವರ್ಣದ ಮೂರು ಗೆರೆಗಳಿರುತ್ತವೆ. ಇವುಗಳನ್ನು ಶ್ರೀರಾಮ ಚಂದ್ರನು ಕೊಟ್ಟನೆಂದು ಹೇಳುತ್ತಾರೆ. "ಸಮುದ್ರಕ್ಕೆ ಸೇತುವೆ ಮಾಡುವಾಗ ಈ ಚಿಕ್ಕ ಪ್ರಾಣಿ, ಪ್ರಮಾಣಿಕವಾಗಿ ಸೇವೆಗೈದುದರ ಫಲವಾಗಿ ಮೂಲಕ ಶ್ರೀರಾಮನು ಮೆಚ್ಚಿ ಕರುಣಿಸಿದನಂತೆ".[೬] ಬಂಗಾರದ ಆಸೆಗಾಗಿ ಅದನ್ನು ಕೊಲ್ಲಲಾರಂಭಿಸಿದರಂತೆ. ಅದರ ಸಂತತಿ ನಾಶವಾಗುತ್ತಾ ಬಂದಾಗ ತಕ್ಷಣ ದೇವರಲ್ಲಿ ಮೊರೆ ಇಡಲಾಗಿ ಬಂಗಾರದ ಬದಲಿಗೆ ಬಂಗಾರದ ವರ್ಣವನ್ನು ಕರುಣಿಸಿದನಂತೆ ಎಂಬ ಕಥೆ ಇದೆ. ಇದನ್ನು 'ಉಡತಿ' ಎಂದಲೂ ಕರೆಯುತ್ತಾರೆ. ಸಿಂಧೋಳ್ಳರು ಅಳಿಲು ಇರುವ ಸ್ಥಳಗಳನ್ನು ನೋಡಿ, ಮರದಲ್ಲಿದ್ದರೆ ರೇಶ್ಮೆಯ ಬಲೆಯನ್ನು ಮರದ ಕೊಂಬೆಯಲ್ಲಿ ಕಟ್ಟುರುತ್ತಾರೆ. ಅಳಿಲುಗಳನ್ನು ಮಧ್ಯದಲ್ಲಿ ಇಳಿಯುವಾಗ ಹಾಗೂ ಹತ್ತುವಾಗ ಬಲೆಯಲ್ಲಿ ಬೀಳುತ್ತವೆ. ಅಳಿಲುಗಳು ಬೆಂಕಿಯಲ್ಲಿ ಬೇಯಿಸಿಕೊಂಡು ತಿನ್ನುತ್ತಾರೆ.

**ಮೊಲದ ಬೇಟೆ :** ಸಿಂಧೋಳ್ಳರು ಗುಡಾರಗಳ ಸುತ್ತ ಇರುವ ಜೋಳದ ಹೊಲಗಳಿಗೆ ಹಸಿರು ಹುಲ್ಲು ತಿನ್ನುವುದಕ್ಕಾಗಿ ಮೊಲಗಳು ಬರುವುದುಂಟು. ಇಂತಹ ಸಂದರ್ಭದಲ್ಲಿ ಮೊಲಗಳನ್ನು ಹಿಡಿಯಲು ಬಹಳ ಸುಲಭವಾದ ಸಾಧನವನ್ನು ಮಾಡಿಕೊಂಡಿದ್ದಾರೆ. ಉದ್ದನೆಯ ರೇಶ್ಮೆಯದಾರ ಎರಡು ಬದಿಯ ಕಟ್ಟಿಗೆಯಲ್ಲಿ ಸಾಲಾಗಿ ಕಟ್ಟಿರುತ್ತಾರೆ. ಇದು ೧೦ ರಿಂದ ೨೦ ಅಡಿ ಉದ್ದವಿರುತ್ತದೆ. ಹೊಲದ ಬದುವಿನಲ್ಲಿ ಇಲ್ಲವೇ ಹೊಲಕ್ಕೆ ಹೋಗುವ ಕಾಲುದಾರಿಗಳಲ್ಲಿ ಕಟ್ಟಿಗೆ ಹೊಡೆದು ಅಕ್ಕ ಪಕ್ಕ ಚಿಕ್ಕ ಚಿಕ್ಕ ಗಿಡಗಳಿಗೆ ಅರ್ಧದಷ್ಟು ಎತ್ತರಕ್ಕೆ ಇರುವಂತೆ ಎಳೆದು ಕಟ್ಟುತ್ತಾರೆ. ಬೆಳೆ ತಿನ್ನಲು ಅಥವಾ ಹಸಿರು ಹುಲ್ಲುಗಳಲ್ಲಿ ಬರಲು, ಮೊಲ ಕತ್ತಲಿನಲ್ಲಿ ಕಾಣದ ಬಲೆಗೆ ತಲೆ ತೂರಿಸಿ ರಭಸದಿಂದ ಮುನ್ನುಗ್ಗುವಾಗ ಬಲೆಗೆ ಸಿಕ್ಕಿ ಕೊಳ್ಳುತ್ತದೆ. ಮುಸ್ಸಂಜೆಗೆ ಹಾಕಿದ ಬಲೆಯಲ್ಲಿ ಒಂದೆರಡು ಮೊಲಗಳಾದರೂ ಸಿಕ್ಕಿಕೊಂಡಿರುತ್ತದೆ. ಅದೇ ಬಲೆಯಲ್ಲಿ ಚೀರಿಕೊಂಡು, ಒದ್ದಾಡಿ ಪ್ರಾಣಬಿಟ್ಟಿರುವ ಮೊಲಗಳನ್ನು ಬೆಳಿಗ್ಗೆ ತಂದು ಅದನ್ನು ಕೊಯ್ದು ಮಾಂಸದಡಿಗೆ ಮಾಡಿ ಊಟ ಮಾಡುತ್ತಾರೆ.

**ಹಂದಿಬೇಟೆ :** ಹಂದಿ ಬೇಟೆಗೆ ಹೋಗುವ ಸಿಂಧೋಳ್ಳರು ಅರಣ್ಯದಲ್ಲಿ ಗುಪ್ತದಳದಂತೆ ಹೋಗುತ್ತಾ ಯಾವ ಜಾಗದಲ್ಲಿ ಹಂದಿಗಳು ಇವೆ. ನೀರು ಕುಡಿಯಲು ಹಂದಿಗಳು ಎಂತಹ ಸಮಯದಲ್ಲಿ ಬರಬಹುದು. ಅವುಗಳ ಲೆಕ್ಕಚಾರ ಹಾಕಿಕೊಂಡು ಬೇಟೆಯಾಡುತ್ತಾರೆ. ಮೊದಲನೆಯ ಪ್ರಯೋಗದಂತೆ ಸೂರ್ಯನ ಎದುರಿನಲ್ಲಿ ಒಂದರ ಹಿಂದೆ ಒಂದರಂತೆ ಮೂರು ಬಲೆಗಳನ್ನು ಕಟ್ಟಿರುತ್ತಾರೆ. ಬಲೆಗಳಿಗೆ ಮೂರು ಅಡಿ ಉದ್ದದ ಮರದ ಗೂಟಗಳಿಗೆ ಕಟ್ಟಿರುತ್ತಾರೆ. ಇನ್ನೂ ಕೆಲವರು ಹಂದಿಗಳನ್ನು ಎಬ್ಬಿಸಿಕೊಂಡು, ತಾವು ಅನುಸರಿಸುವ ನಿಯಮದಂತೆ ಆ............ ಹೂ............ ಬಂತು ಹಾ! ಹಾ! ಬಂತಲೇ ಹಂದಿ ಬಂತು ಎಂದು ಕೂಗಿಕೊಳ್ಳುತ್ತಾ ಹಿಂದೆಯೇ ಬರುತ್ತಾರೆ. ಈ ನಿಯಮದಂತೆ ಹಂದಿಗಳು ಬಲೆಗಳಿಗೆ ಬಿದ್ದೆ ಬೀಳುತ್ತವೆ. ಬಲೆಗೆ ಬಿದ್ದಿರುವ ಹಂದಿಗಳನ್ನು ಹಿಡಿದು ಅದರ ಕಾಲು ಕಟ್ಟಿಬಿಡುತ್ತಾರೆ. ದೊಡ್ಡ ಹಂದಿಯಾದರೆ ಭರ್ಜಿಯಿಂದ ಹಾಗೂ ಕೊಡಲಿಯಿಂದ ಹೊಡೆದು ಸಾಯಿಸುತ್ತಾರೆ. ತದನಂತರ ಬಲೆಯಲ್ಲಿ ಬಿದ್ದಿರುವ ಹಂದಿಗಳಿಗೆ ಮೂರು ಮೆಣಸಿನಕಾಯಿ, ಮೂರು ಹರಳು, ಒಂದಿಷ್ಟು ಉಪ್ಪು ಮತ್ತು

ನಿಂಬೆಹಣ್ಣು ಹೋಳುಮಾಡಿ, ನಾಯಿಗಳ ಮೇಲೆ ಮತ್ತು ಬಲೆ ಮೇಲಿಂದ ನಿವಾಳಿಸಿ, ಹಂದಿಯ ಮೇಲೆ ಎಸೆಯುತ್ತಾರೆ.[೬೮] ಹೀಗೆ ಮಾಡುವುದರಿಂದ ಹಂದಿಗಳು ಬಲೆಯಲ್ಲಿ ಬೀಳುತ್ತವೆಂಬ ನಂಬಿಕೆ ಅವರಲ್ಲಿದೆ. ಇವರು ಬೇಟೆಗೆ ಹೋಗಿರುವ ಸಂದರ್ಭದಲ್ಲಿ ಬುರ್ರ ಬುರ್ರವಾದ್ಯ ಇರುವುದುಂಟು. ಸಿಂಧೋಳ್ಳು ವ್ಯಕ್ತಿ ಹಂದಿಯನ್ನು ತಲೆಯ ಮೇಲೆ ಹೊತ್ತುಕೊಂಡು, ಬರುವ ಸಮಯದಲ್ಲಿ ಬುರ್ರ ಬುರ್ರ ವಾದ್ಯ ಬಾರಿಸಿಕೊಳ್ಳುತ್ತಾ ನೃತ್ಯ ಮಾಡಿಕೊಳ್ಳುತ್ತಾ ಬರುತ್ತಾರೆ.[೬೯]

**ಇಲಿ ಬೇಟೆ :** ಸಿಂಧೋಳ್ಳುರಿಗೆ ಯಾರಾದರೂ ಮಾಟ ಮಂತ್ರ ಮಾಡಿಸಿದ್ದರೆ, ಇಲಿಯ ಮಾಂಸವನ್ನು ತಿನ್ನು ಎಲ್ಲ ಸರಿ ಹೋಗುವುದು ಎಂದು ಹೇಳುತ್ತಾರೆ. ಇಲಿ ಬೇಟೆಯನ್ನು ಸಿಂಧೋಳ್ಳುರು ಎರಡು ಬಗೆಗಳಲ್ಲಿ ಮಾಡುತ್ತಾರೆ.

೧. **ಮಣ್ಣಿನಲ್ಲಿ ಅಗೆಯುವುದು :** ಮಳೆಗಾಲದಲ್ಲಿ ಇಲಿಗಳನ್ನು ಹುಡುಕಿಕೊಂಡು ಜಮೀನುಗಳ ಹತ್ತಿರ ಹೋಗುತ್ತಾರೆ. ಇಲಿಯ ಮಣ್ಣಿನ ರಂಧ್ರದ ಗುರುತು ಸಿಕ್ಕಿದಾಗ ಅಲ್ಲಿಯೇ ಸಲಿಕೆಯಿಂದ ಮತ್ತು ಗುದ್ದಲಿಯಿಂದ ಅಗೆಯುತ್ತಾರೆ. ಸುತ್ತಲೂ ಕೈಯಲ್ಲಿ ದಪ್ಪ ಕೋಲುಗಳನ್ನು ಹಿಡಿದು ನಿಂತಿರುತ್ತಾರೆ. ಅಗೆಯುವ ಸದ್ದಿಗೆ ಹೊರಬಂದ ಇಲಿಗಳನ್ನು ಕೋಲಿನಿಂದ ಹೊಡೆದು ಹಿಡಿಯುತ್ತಾರೆ. ಕೋಲಿನ ಹೊಡೆತದಿಂದ ತಪ್ಪಿಸಿಕೊಂಡರೂ ಅವರ ಜೊತೆಯಲ್ಲಿರುವ ಬೇಟೆ ನಾಯಿಗಳು ಹಿಡಿಯುತ್ತವೆ.

೨. **ಇಲಿ ಬೋನು :** ಸಣ್ಣ ಸಣ್ಣ ಗಿಡಗಳ ಹತ್ತಿರ ಹೆಚ್ಚಾಗಿ ಹಿಡಿಯುತ್ತಾರೆ. ಅದಕ್ಕಾಗಿಯೇ ವಿಶಿಷ್ಟವಾಗಿ ತಯಾರಿಸಿದ ಬೋನನ್ನು ಇಲಿಗಳು ಹೆಚ್ಚಾಗಿ ಓಡಾಡುವ ಸ್ಥಳದಲ್ಲಿ ಇಡುತ್ತಾರೆ. ಬೋನಿನೊಳಕ್ಕೆ ತಿಂಡಿಯನ್ನು ಹಾಕಿ ಬೋನಿನ ಬಾಯಿ ತೆರೆದಿಡುತ್ತಾರೆ. ತಿಂಡಿಯ ವಾಸನೆ ಹಿಡಿದು ಬೋನಿನೊಳಗೆ ಇಲಿ ನುಗ್ಗಿದ ಕೊಡಲೇ ಅದರ ಬಾಗಿಲು ಹಾಕಿಕೊಂಡು ಅಲ್ಲಿ ಅದು ಸಿಕ್ಕಿ ಬೀಳುತ್ತದೆ. ಅನಂತರ ಅದನ್ನು ಹಿಡಿದು ಕೊಲ್ಲುತ್ತಾರೆ.

**ಆಮೆ ಬೇಟೆ :** ಬಾವಿ ಮತ್ತು ಕೆರೆಗಳಲ್ಲಿ ಸಿಂಧೋಳ್ಳುರು ಬಲೆಯನ್ನು ಹಾಕುವುದು ರೂಢಿಯಾಗಿದೆ. ಬಾವಿಯಲ್ಲಿ ಐದು ಅಡಿ ಉದ್ದ ರೇಶ್ಮೆ ಬಲೆ ಇಳಿಬಿಡುತ್ತಾರೆ. ಅದರ ಪಕ್ಕದಲ್ಲಿ ಕಟ್ಟಿಗೆಗಳನ್ನು ಸೇರಿಸುತ್ತಾರೆ. ಆಮೆಗಳು ಚಲಿಸುವ ಸಂದರ್ಭದಲ್ಲಿ ಬಲೆಗಳಲ್ಲಿ ಬೀಳುವುದುಂಟು ಎಂದು ಹೇಳುತ್ತಾರೆ.

**ಖವಜ ಬೇಟೆ :** ಖವಜ ಕೋಳಿ ಜಾತಿಗೆ ಸೇರಿದ ಪಕ್ಷಿ. ಖವಜ ಪಕ್ಷಿ ಎಂತಲೂ ಕರೆಯುತ್ತಾರೆ. ಖವಜಗಳು ಹೆಚ್ಚಿನದಾಗಿ ಅರಣ್ಯದ ಪೊದೆಗಳಲ್ಲಿ ದೊಡ್ಡ ಮರಗಳಲ್ಲಿ ಹೆಚ್ಚಾಗಿ ಕಂಡುಬರುತ್ತವೆ. ಪೊದೆಗಳ ಪಕ್ಕದಲ್ಲಿ ಬಿದಿರು ಕಡ್ಡಿಗಳಿಂದ ತಯಾರಿಸಿದ ಬಿದಿರು ಬಲೆಯನ್ನು ಹಾಕಲಾಗುವುದು. ಜೊತೆಗೆ ಬಿದಿರು ಕಡ್ಡಿಗಳ ಮಧ್ಯದಲ್ಲಿ ಅಕ್ಕಿಕಾಳು, ಜೋಳದ ಕಾಳು ಹಾಕಲಾಗುವುದು. ನಂತರ ಪೊದೆಯ ಪಕ್ಕದಲ್ಲಿ ಕುಳಿತುಕೊಂಡು ಸೀಳುಧ್ವನಿ ಮಾಡುವರು.[೭೦] ಸೀಳು ಧ್ವನಿ ಕೇಳಿಸಿದ ತಕ್ಷಣ ಬಿದುರು ಕಡ್ಡಿಗಳ ಹತ್ತಿರ ಖವಜಗಳು ಬರುವುದುಂಟು. ಮತ್ತೆ ಖವಜಗಳು ಹಾರುವ ಸಮಯದಲ್ಲಿ ಬಿದಿರು ಕಡ್ಡಿಗಳಲ್ಲಿ ಸಿಕ್ಕಿಹಾಕಿಕೊಂಡಿರುತ್ತವೆ. ತದನಂತರ ಖವಜಗಳನ್ನು ತಂದು ಸಾಕಿ ಕೊಳ್ಳುತ್ತಾರೆ.

**ನೀರುಕೋಳಿ ಬೇಟೆ :** ಸಿಂಧೋಳ್ಳುರು ವಾಸಿಸುವ ನೆಲೆಗಳಲ್ಲಿ ಕೆರೆಗಳು, ಬಾವಿಗಳು, ಒಂದೊಂದು

ಸ್ಥಳದಲ್ಲಿ ಕಂಡುಬರುತ್ತವೆ. ನೀರುಕೋಳಿ, ಕೋಳಿಯ ರೂಪದಲ್ಲಿ ಚಿಕ್ಕದಾಗಿರುತ್ತದೆ. ಕಣ್ಣಿನ ಸುತ್ತಾ ಕೆಂಪು ಬಣ್ಣದ ಚರ್ಮದಿಂದ ಕೂಡಿದ್ದು, ಮೈಮೇಲೆ ಪುಕ್ಕಗಳಿರುವುದಿಲ್ಲ. ಬರೀ ಕಪ್ಪು ಚುಕ್ಕೆಗಳು ಇರುತ್ತವೆ. ಇವು ಹೆಚ್ಚಾಗಿ ನೀರಿನಲ್ಲಿ ವಾಸಿಸುತ್ತವೆ. ಆದಕಾರಣ ಸಿಂಧೋಳ್ಳರು ನೀರು ಕೋಳಿ ಸಾಹೇಬ್ರ ಎಂದು ಕರೆಯುತ್ತಾರೆ. ನೀರುಕೋಳಿಯನ್ನು ಹಿಡಿಯಲು 'ಪಾಜಿ'ಯನ್ನು ಬಳಸುತ್ತಾರೆ. ಪಾಜಿ ಎಂದರೆ ಸಣ್ಣ ಸಣ್ಣ ಬಿದಿರುಗಳು ಮತ್ತು ಹಗ್ಗದಿಂದ ತಯಾರಿಸಿದ ಸರಳವಾದ ಬೇಟೆಯ ಸಾಧನ. ಮಡಿಚಿಕೊಳ್ಳುವಂತಿದ್ದು ಬೇಕೆಂದಾಗ ಬಿಡಿಸಿಕೊಳ್ಳಲು ಅನುಕೂಲಕರವಾಗುವಂತೆ 'Z' ಆಕಾರದಲ್ಲಿ ಮಾಡಿರುತ್ತಾರೆ. ಬೇಕಾದಡೆಗೆ ಸುಲಭವಾಗಿ ಕೊಂಡಯ್ಯಲು ಅನುಕೂಲಕರವಾಗಿ ಇದರ ರಚನೆಯಾಗಿರುತ್ತದೆ. ಇವರು ನೀರು ಇರುವ ಆಯಕಟ್ಟಿನ ಜಾಗದಲ್ಲಿ ಪಾಜಿಯನ್ನು ಇಳಿ ಬಿಟ್ಟಿರುತ್ತಾರೆ. ಬೇಟೆಗಾರ ಸ್ವಲ್ಪ ದೂರದಲ್ಲಿ ಆ ಪಾಜಿಯ ಎದುರಿಗೆ ಅವಿತುಕುಳಿತಿರುತ್ತಾನೆ. ನೀರು ಕೋಳಿಗಳ ಸ್ವರವನ್ನೇ ಅನುಸರಿಸಿ ಶಬ್ದ ಮಾಡುತ್ತಾನೆ. ಈ ಅನುಕರಣೀಯ ಧ್ವನಿ ನೀರುಕೋಳಿ ಧ್ವನಿಯಂತೆಯೇ ಇರುತ್ತದೆ. ಒಂದು ಸಲ ಕೋಳಿಯಂತೆ, ಹುಂಜದಂತೆ ಬದಲಾಯಿಸಿ ಕೂಗುತ್ತಾನೆ.[೭೧] ಪ್ರಣಯದ ಧ್ವನಿಯಂತಿರುವ ಈತನ ಧ್ವನಿಗೆ ಮರುಳಾಗಿ ನೀರುಕೋಳಿ ಕುಣಿದು ಕುಪ್ಪಳಿಸಿ, ಪಾಜಿಯಲ್ಲಿ ಬಿದ್ದು ಬೀಳುತ್ತವೆ. ಬೇಟೆಗಾರ ಸುಲಭವಾಗಿ ಅವುಗಳನ್ನು ಹಿಡಿದುಕೊಳ್ಳುತ್ತಾನೆ.

**ಬೆಕ್ಕಿನ ಬೇಟೆ :** ಸಿಂಧೋಳ್ಳರು ಹೆಚ್ಚಾಗಿ ಬೆಕ್ಕಿನ ಮಾಂಸ ಉಪಯೋಗಿಸುತ್ತಾರೆ. ಅವರು ಬೆಕ್ಕು ಹಿಡಿಯುವ ರೀತಿ ಬಹಳ ಸ್ವಾರಸ್ಯಕರವಾಗಿರುತ್ತದೆ. ಬೆಕ್ಕು ಹಿಡಿಯುವುದು ರಾತ್ರಿ ಸಮಯದಲ್ಲಿ ಮಾತ್ರವಂತೆ. ಕಾರಣವೆನೆಂದರೆ ಬೆಕ್ಕಿನ ಹೊಳಪು ಕಣ್ಣುಗಳಿಂದ, ಸುಲಭವಾಗಿ ಹಿಡಿಯಬಹುದೆಂದು ಹೇಳುತ್ತಾರೆ. ಬೆಕ್ಕು ಬರುವ ಸ್ಥಳವನ್ನು ನಿಗದಿಮಾಡಿಕೊಳ್ಳುತ್ತಾರೆ. ಆ ದಾರಿಯಲ್ಲಿ ಒಂದು ಅಡಿ ಗುಣಿಯ ವ್ಯಾಸ ಮಣ್ಣು ತೆಗೆದು, ಅದರೊಳಕ್ಕೆ ರುಚಿಕರವಾದ ತಿಂಡಿ ತಿನುಸುಗಳನ್ನು ಹಾಕುವುದುಂಟು. ನಂತರ ನಾಲ್ಕು ಜನ ದಿನಾಲೂ ಬೆಕ್ಕು ಬರುವಂತಹ ಸ್ಥಳದಲ್ಲಿ, ದೂರದಿಂದ ಓಡಾಡಿಸಿಕೊಂಡು ಬರುತ್ತಾರೆ. ಬೆಕ್ಕು ಓಡಿ ಬಂದು ಕುಣಿಯೊಳಗೆ ಬಿದ್ದಾಗ, ಭರ್ಜಿಯಿಂದ ಸಾಯಿಸುತ್ತಾರೆ. ಕೆಲವೊಮ್ಮೆ ಬೆಕ್ಕಿನ ಮಾಂಸ ಪೇಟೆಗೆ ಹೋಗಿ ಮಾರಾಟ ಮಾಡುತ್ತಾರೆ.

**ಪಾರಿವಾಳ ಬೇಟೆ :** ಪಾರಿವಾಳ ಹೆಚ್ಚಾಗಿ ಅರಣ್ಯ ಪ್ರದೇಶಗಳಲ್ಲಿ ವಾಸಿಸುತ್ತಿದ್ದು, ಇದು ಮುಖ್ಯವಾದ ಆಹಾರ ಎಂದು ಪರಿಗಣಿಸುತ್ತಾರೆ. ಒಂದು ಬಗೆಯ ವಿಶಿಷ್ಟ ಹಕ್ಕಿ ಹೌದು. ಇದು ಸುಮಾರು ೧/೪ ಕೆ.ಜಿ. ತೂಕವಿರುತ್ತದೆ. ಇದು ಸಾಮಾನ್ಯವಾಗಿ ಮರ, ಪೊಟರೆಗಳಲ್ಲಿ ಮತ್ತು ಕಲ್ಲು ಬಂಡೆಗಳ ಸಂದಿನಲ್ಲಿಯೇ ಮೊಟ್ಟೆಗಳು ಇಡುವುದುಂಟು. ಕ್ಯಾಟರಿ ಬಿಲ್ಲಿನಿಂದ, ಪಾರಿವಾಳಗಳಿಗೆ ಗುರಿ ಇಟ್ಟು ಹೊಡೆಯುತ್ತಾರೆ. ಕೆಲವು ಬಾರಿ ಬಲೆಯನ್ನು ಹಾಕಿ ಹಿಡಿಯುತ್ತಾರೆ. ಹಿಡಿದು ತಂದಿರುವ ಪಾರಿವಾಳವನ್ನು ಬೆಂಕಿಯಲ್ಲಿ ಬೇಯಿಸಿಕೊಂಡು ತಿನ್ನುತ್ತಾರೆ. ಪಾರಿವಾಳ ಚಿಕ್ಕದಾದರೂ ಆಹಾರದಲ್ಲಿ ಉಪ್ಪಿನಕಾಯಿಯಂತೆ ಬಲು ರುಚಿ ಇರುತ್ತದೆ. ಆದಕಾರಣ ಬೇಟೆಯಲ್ಲಿ ಪ್ರಾಣಿಗಳು ವಿಫಲವಾದಾಗ, ಕೊನೆಗೆ ಪಾರಿವಾಳ ಬೇಟೆಯಾಡಿಕೊಂಡು ಬರುತ್ತಾರೆ. ಹೀಗೆ ಅನೇಕ ಪ್ರಾಣಿ ಮತ್ತು ಪಕ್ಷಿಗಳನ್ನು ಬೇಟೆಯಾಡುವುದು ಕಾಣಬರುತ್ತದೆ. ಬೇಟೆ ಅವರ ಜೀವನದ ಅವಿಭಾಜ್ಯ ಅಂಗವಾಗಿ ಬೆಳೆದುಬಂದಿದೆ ಎಂದು ಹೇಳಬಹುದು.

**ಮಾಂಸ ಹಂಚಿಕೆ ಅಥವಾ ಪಾಲುದಾರಿಕೆ :** ಬೇಟೆಯಲ್ಲಿ ದೊರೆತ ಪ್ರಾಣಿ ಪಕ್ಷಿಯ ಮಾಂಸದ ಹಂಚಿಕೆಯು ಗುಡಾರದಲ್ಲಿ ಬಲು ವಿಶಿಷ್ಟವಾಗಿರುತ್ತದೆ. ಯಾವುದೇ ರೀತಿಯ ಅಧುನಿಕ ತೂಕದ ವಸ್ತುಗಳನ್ನು ಬಳಸದೇ ಬರಿ ಕೈ ಅಂದಾಜಿನ ಮೇಲೆ ಹಂಚಿಕೊಳ್ಳುತ್ತಾರೆ. ಬೇಟೆಯಲ್ಲಿ ಭಾಗವಹಿಸಿದ ನಾಯಿಗಳು, ಜನ ಹಾಗೂ ಸಾಮಾನುಗಳಲ್ಲದೆ, ಕುಲದೇವರ ಪೂಜೆ ಮಾಡಿದ ಪೂಜಾರಿಗೂ ವಿಶೇಷ ಪಾಲು ನೀಡಲಾಗುತ್ತದೆ. ಬೇಟೆಯಲ್ಲಿ ಬಂದಿರುವ ಪ್ರಾಣಿ ಮಾಂಸ ಕುಲದೇವರುಗಳಿಗೆ ನೈವೇದ್ಯ ಕೊಟ್ಟನಂತರ, ಪೂಜಾರಿ ಸ್ವೀಕರಿಸಿಕೊಳ್ಳುತ್ತಾನೆ. ನಂತರ ಬೇಟೆಯ ಆಡಳಿತಕ್ಕೊಳಪಟ್ಟ ಬೇಟೆಗಾರರು ಊಟ ಮಾಡುತ್ತಾರೆ.

### ೩. ಶೈಕ್ಷಣಿಕತೆ

ಶಿಕ್ಷಣ ಯಾವುದೇ ಸಮಾಜದ ಗತಿಶೀಲತೆಯನ್ನು ಸೂಚಿಸುವ ದಿಕ್ಸೂಚಿ ಎಂದು ಪರಿಭಾವಿಸಲಾಗುತ್ತದೆ. ಒಂದು ಸಮಾಜದಲ್ಲಿ ಲಭ್ಯವಿರುವ ಶಿಕ್ಷಣವು ಆ ಸಮಾಜ ಪ್ರಭಾವಿಸುವ ಮುಖ್ಯ ಮೌಲ್ಯಗಳನ್ನು, ಸಮಾಜದ ಗುಣಾತ್ಮಕತೆಯನ್ನು ಹಾಗೂ ಅದರ ಭವಿಷ್ಯವನ್ನು ಅನಾವರಣಗೊಳಿಸುತ್ತದೆ. ಸಮಾನ ಅವಕಾಶಗಳಿರುವ ಸಮಾಜದ ಭವಿಷ್ಯವನ್ನು ಸಾಕಾರಗೊಳಿಸಿಕೊಳ್ಳುವ ಆಶಯದಲ್ಲಿಯೆ ನಾವು ನಮ್ಮ ಮಕ್ಕಳನ್ನು ಶಾಲೆಗಳಿಗೆ ಕಳಿಸುತ್ತೇವೆ. ಅಂದರೆ ಶಾಲೆಗಳು ನಮ್ಮ ಸಮಾಜದ ಕನಸಿನ ಭವಿಷ್ಯದ ಬೀಜ ಅಂಕುರಿಸಲು ಹದಗೊಂಡಿರುವ ಭೂಮಿ ಎಂದು ನಾವೆಲ್ಲ ಭಾವಿಸಿಬೇಕಾಗಿದೆ. ಈ ಹಿನ್ನೆಲೆಯಲ್ಲಿಯೇ ಶಾಲೆಗೆ ಹೋಗಲು ಅರ್ಹರಾಗಿರುವ ಸಮಾಜದ ಎಲ್ಲ ಮಕ್ಕಳು ಒಂದು ನಿರ್ದಿಷ್ಟ ಕಾಲಮಿತಿಯಲ್ಲಿ ಕಲಿಯಬೇಕಾಗಿದೆ. "ಭಾರತ ಸರ್ಕಾರವು ಸಂವಿಧಾನದ ನಾಲ್ಕನೆಯ ಪರಿಚ್ಛೇಧದ ನಿರ್ದೇಶಕ ಸೂತ್ರಗಳಲ್ಲಿ ಬರುವ ೪೫ನೇ ವಿಧಿಯ ಪ್ರಕಾರ ೬ ರಿಂದ ೧೪ ವರ್ಷದ ವಯೋಮಾನದವರೆಗಿನ ಎಲ್ಲಾ ಮಕ್ಕಳಿಗೂ ಉಚಿತ ಮತ್ತು ಕಡ್ಡಾಯ ಶಿಕ್ಷಣ ಒದಗಿಸಲು ಶ್ರಮವಹಿಸುತ್ತದೆ."[೨] ಅಂದರೆ ಎಲ್ಲರು ಕೂಡಾ ಶಿಕ್ಷಣವನ್ನು ಈಗ ಸುಲಭವಾಗಿ ಪಡೆಯಬಹುದಾಗಿದೆ. ಅದರ ಜೊತೆಯಲ್ಲಿ ಉಚಿತ ಶಿಕ್ಷಣ ಒದಗಿಸಲು ಪ್ರಯತ್ನಿಸುತ್ತಿದೆ.

ಶಿಕ್ಷಣದ ವಿಚಾರದ ಬಗ್ಗೆ ಗಮನಿಸಬೇಕಾದರೆ, ಶಿಕ್ಷಣ ವ್ಯವಸ್ಥೆಯಲ್ಲಿ ಯಾರಿಗೆ ಎಷ್ಟು ಅನುಕೂಲಕರವಾಗಿದೆ. ಯಾರಿಗೆ ಅನ್ಯಾಯವಾಗಿದೆ ಎಂಬುದನ್ನು ಅರಿತುಕೊಳ್ಳಬೇಕು. ಸಂವಿಧಾನದ ವಿಧಿಯ ಪ್ರಕಾರ ಬುಡಕಟ್ಟು ಮಕ್ಕಳ ಕ್ಷೇಮಾಭಿವೃದ್ಧಿ ಆಗಬೇಕೆಂದು ಒತ್ತಾಯಿಸಿ ಹೇಳಿದೆ. ಆದರೆ ಬಹುಕಾಲದಿದಂದಲೂ ಶಿಕ್ಷಣದಿಂದ ವಂಚಿರಾದಂತಹ ಅನೇಕ ಸಮುದಾಯಗಳಿವೆ. ಅದರಲ್ಲೂ ಸಿಂಧೋಳ್ಳು ಸಮುದಾಯವೂ ಒಂದು.

ದೇಶೀಯ ನೆಲೆಯಲ್ಲಿ ಬುಡಕಟ್ಟು ಸಮುದಾಯಗಳನ್ನು ಹೊರತುಪಡಿಸಿ, ಅನೇಕ ಸಮುದಾಯಗಳು ಬುಡಕಟ್ಟು ಜನರಿಗೆ ಶಿಕ್ಷಣದ ಅವಕಾಶಗಳನ್ನು ನಿರಾಕರಿಸುತ್ತಾ ಬಂದಿದ್ದಾರೆ. ಅಬರಲ್ಲೂ ಉನ್ನತ ಜಾತಿಗಳು ಬುಡಕಟ್ಟು ಸಮುದಾಯಗಳಿಗೆ ಶಿಕ್ಷಣ ನೀಡುವುದರಲ್ಲಿ ಒಲವು ತೋರಿಸಲಿಲ್ಲ. ಉನ್ನತ ಸಮುದಾಯಗಳು ಬುಡಕಟ್ಟು ಜನರು ಅನಕ್ಷರಸ್ಥರು, ಅನಾಗರಿಕರು ಅವರಿಗೆ ಶಿಕ್ಷಣ ಕಲಿಯುವ ಹಕ್ಕು ಇಲ್ಲ. ಇತ್ಯಾದಿ ಅಂಶಗಳಿಂದ ಶಿಕ್ಷಣವನ್ನು ಕಲಿಸಬಾರದು ಎಂದು ತೀರ್ಮಾನಿಸಿದೆಯಂತೆ. ಅದರಲ್ಲೂ

ವೇದ, ಉಪನಿಷತ್ತು ಗ್ರಂಥಗಳ ಬಗ್ಗೆ ಕಲಿಸಲಿಲ್ಲ. ಅದು ಮೇಲ್ವರ್ಗದ ಮಕ್ಕಳಿಗೆ ಮೀಸಲಾಗಿತ್ತು. ಈ ವ್ಯವಸ್ಥೆಯಿಂದ ಗುಲಾಮಗಿರಿ, ಅಜ್ಞಾನ, ಅಂಧಕಾರ ಮತ್ತು ಮೂಢನಂಬಿಕೆಗಳು ಸಹಜವಾಗಿ ಉಳಿದಿವೆ.

ಬುಡಕಟ್ಟು ಸಮುದಾಯಗಳು ಅನುಕರಣೀಯ ವೃತ್ತಿಗಳನ್ನು ಮಾಡುತ್ತಾ, ಅವರು ಮಾನಸಿಕ ಮತ್ತು ದೈಹಿಕ ಶೋಷಣೆಗಳಿಂದ ಜಿಗುಪ್ಸೆಗೊಂಡವರಾಗಿದ್ದಾರೆ. ಶೋಷಿತ ಜನರು ಅದನ್ನು ವಿರೋಧಿಸಿ ತಮ್ಮ ಹಕ್ಕು ಭಾದ್ಯತೆಗಳಿಗಾಗಿ ಹೋರಾಡಲು ಯಾರ ಬೆಂಗಾವಲು ಇಲ್ಲದೆಯೆ ಜೀವಂತ ಶವವಾಗಿದ್ದರು. ಶಿಕ್ಷಣವು ಅವರ ಪಾಲಿಗೆ ಮರೀಚಿಕೆಯಾಗಿತ್ತು.

ಶಿಕ್ಷಣದ ಒಲವು : ಶಿಕ್ಷಣವು ವ್ಯಕ್ತಿಯ ಜೀವನದಲ್ಲಿ ತನ್ನದೇ ಆದ ಪ್ರಭಾವವನ್ನು ಬೀರಬಲ್ಲದು. ಶಿಕ್ಷಣವು ವಿಶಾಲ ಮನೋಭಾವನೆ, ವಿವೇಚನೆ, ನಯವಿನಯ ಮತ್ತು ಸಮಾಜವನ್ನು ಪ್ರಗತಿಯತ್ತ ಸಾಗಿಸುವಲ್ಲಿ ಕಾರಣೀಭೂತವಾಗಿದೆ. ಶಿಕ್ಷಣವಿಲ್ಲದಿದ್ದರೆ ಬಹುಶಃ ಮಾನವ ಪ್ರಾಣಿಯಂತೆ ಉಳಿಯುತ್ತಿದ್ದ. ಮಾನವನಲ್ಲಿ ಶಕ್ತಿ ಸಾಮಾರ್ಥ್ಯ ಮತ್ತು ಚೇತನವನ್ನು ಪ್ರಕರಗೊಳಿಸುವುದು ಶಿಕ್ಷಣವೇ ಆಗಿದೆ. ಪ್ರಸ್ತುತ ದಿನಗಳಲ್ಲಿ  ಶಿಕ್ಷಣವ್ಯವಸ್ಥೆಯಲ್ಲಿ ಬುಡಕಟ್ಟು ಸಮುದಾಯಗಳು ಹೊಸ ಬಗೆಯ ಎಚ್ಚರ ಪಡೆದು ಕೊಂಡಿದೆ. ತಮ್ಮ ಹಕ್ಕುಗಳನ್ನು ನೆನಪಿಸಿಕೊಂಡಿವೆ. ಹೋರಾಟದ ಹಾದಿಯನ್ನು ತುಳಿದಿವೆ. ಶಿಕ್ಷಣ ಸಾಮಾಜಿಕ ಕ್ಷೇತ್ರದಲ್ಲಿ ಬಹುದೊಡ್ಡ ಸವಾಲ್ ಆಗಿ, ಶಕ್ತಿಯನ್ನು ತಂದುಕೊಟ್ಟಿದೆ. ಅಂದು ಭಿಕ್ಷೆ ಬೇಡುತ್ತಿದ್ದ ಮಕ್ಕಳು ಇಂದು ಶಾಲೆಗಳಿಗೆ ಹೋಗಲು ಒಲವು ತೋರುತ್ತಿದ್ದಾರೆ. ತಂದೆ ತಾಯಿಗಳು ಮಕ್ಕಳಿಗೆ ಶಾಲೆಗೆ ಕಳಿಸಲು ಉತ್ಸುಕರಾಗಿದ್ದಾರೆ. ಅವರಿಗೆ ಮಕ್ಕಳೆಂದರೆ ಪ್ರಾಣ. ಪ್ರಗತಿಯ ಪ್ರತೀಕದಂತೆ ಕಂಡುಬರುತ್ತಾರೆ. ನಾವು ಪಡೆಯದ ವಿದ್ಯೆಯನ್ನು ನಮ್ಮ ಮಕ್ಕಳು ಪಡೆಯಲಿ ನಮಗೆ ಸಿಗದ ಸ್ವಾಭಿಮಾನ ನಮ್ಮ ಮಕ್ಕಳಿಗೆ ಸಿಗಲಿ, ನಮಗಿಂತ ನಮ್ಮ ಮಕ್ಕಳು ದೊಡ್ಡವರಾಗಲಿ, ಭಿಕ್ಷೆ ಬೇಡುವುದು ಬಿಡಲಿ ಎಂದು ಅವರು ಬಯಸುವುದುಂಟು. ಇನ್ನೂ ಕೆಲವು ಕುಟುಂಬಗಳು ಭಿಕ್ಷಾಟನೆಯನ್ನು ಮುಂದು ವರಿಸಿಕೊಂಡು ಅದೇ ವೃತ್ತಿಯನ್ನು ಅವಲಂಬಿಸಿದ್ದಾರೆ.

ಕೋಷ್ಟಕ ೩.೧೦ ಕರ್ನಾಟಕ ರಾಜ್ಯದ ಸಿಂಧೋಳ್ಳುರ ಶೈಕ್ಷಣಿಕ ಮಟ್ಟ

| ಸಂ. ಜಿಲ್ಲೆಗಳು | ಶೈಕ್ಷಣಿಕ ಮಾದರಿಗಳು | | | | | | | | | |
|---|---|---|---|---|---|---|---|---|---|---|
| | ಪ್ರಾಥಮಿಕ | | ಮಾಧ್ಯಮಿಕ | | ಪ್ರೌಢ | | ಪಿ.ಯುಸಿ. | | ಪದವಿ | |
| | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ | ಗಂ | ಹೆ |
| ೦೧ ಬಾಗಲಕೋಟೆ | ೦೩ | - | - | - | - | - | - | - | - | - |
| ೦೨ ಬಳ್ಳಾರಿ | ೧೫ | ೧೦ | - | ೦೧ | - | - | - | - | - | - |
| ೦೩ ಬೆಳಗಾವಿ | ೧೦ | ೦೧ | ೧೨ | - | ೧೨ | ೦೨ | ೦೧ | - | ೦೨ | - |
| ೦೪ ಬೀದರ | ೦೧ | - | ೦೩ | - | - | - | - | - | - | - |
| ೦೫ ವಿಜಾಪುರ | - | ೦೧ | - | - | - | - | - | - | - | - |
| ೦೬ ಚಿಕ್ಕಮಗಳೂರು | - | - | - | - | - | - | - | - | - | - |

| | | | | | | | | | | |
|---|---|---|---|---|---|---|---|---|---|---|
| ೦೭ ಚಿತ್ರದುರ್ಗ | - | - | - | - | - | - | - | - | - | - |
| ೦೮ ದಾವಣಗೆರೆ | - | ೦೧ | - | - | - | - | - | - | - | - |
| ೦೯ ಧಾರವಾಡ | - | - | - | - | - | - | - | - | - | - |
| ೧೦ ಗದಗ | ೦೬ | - | ೦೧ | - | - | - | - | - | - | - |
| ೧೧ ಗುಲ್ಬರ್ಗಾ | - | - | - | - | - | - | - | - | - | - |
| ೧೨ ಹಾಸನ | - | - | ೦೨ | - | - | - | - | - | - | - |
| ೧೩ ಹಾವೇರಿ | ೧೧ | ೦೩ | ೨೪ | - | ೦೩ | - | ೦೧ | - | ೦೧ | - |
| ೧೪ ಕೊಪ್ಪಳ | ೦೩ | ೦೧ | - | - | - | - | - | - | - | - |
| ೧೫ ಮಂಡ್ಯ | ೦೧ | ೦೧ | - | - | - | - | - | - | - | - |
| ೧೬ ಮೈಸೂರು | - | - | - | - | - | - | - | - | - | - |
| ೧೭ ರಾಯಚೂರು | ೦೪ | - | ೦೧ | - | ೦೨ | - | - | - | - | - |
| ೧೮ ಶಿವಮೊಗ್ಗ | ೦೧ | - | - | - | - | - | - | - | - | - |
| ೧೯ ತುಮಕೂರು | ೦೨ | ೦೩ | ೦೨ | ೦೨ | ೦೧ | ೦೨ | - | - | - | - |
| ೨೦ ಉತ್ತರ ಕನ್ನಡ | - | - | - | - | - | - | - | - | - | - |
| ಒಟ್ಟು | ೫೭ | ೨೧ | ೨೫ | ೦೩ | ೧೮ | ೦೪ | ೦೨ | -- | ೦೩ | -- |

ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಿಂಧೋಳ್ಳು ಸಮುದಾಯದ ಶೈಕ್ಷಣಿಕ ಪ್ರಮಾಣದ ಬಗೆಗೆ ಮಾಹಿತಿ ಪಡೆಯಲಾಗಿದೆ. ಪ್ರಾದೇಶಿಕವಾಗಿ ಸಿಂಧೋಳ್ಳುರಲ್ಲಿ ಭಿನ್ನತೆಗಳಿವೆ. ಎಲ್ಲಿ ಸಿಂಧೋಳ್ಳುರು ಸ್ಥಿರವಾಗಿ ನೆಲೆಯೂರಿದ್ದಾರೆಯೋ ಅಂತಹ ಕಡೆ ಸಿಂಧೋಳ್ಳುರು ಶಿಕ್ಷಣ ಕ್ಷೇತ್ರಕ್ಕೆ ಕಾಲಿರಿಸಿ ಬೆಳಗಾವಿ, ಬಳ್ಳಾರಿ, ಹಾವೇರಿ ಮೊದಲಾದ ಜಿಲ್ಲೆಗಳಲ್ಲಿ ಸಿಂಧೋಳ್ಳು ಕಾಲೋನಿಗಳಲ್ಲಿ ಪ್ರಾಥಮಿಕ ಶಾಲೆಗಳಿರುವುದು ಕಂಡು ಬಂದಿದೆ. ಎಲ್ಲಿ ಸಿಂಧೋಳ್ಳುರು ಅಲೆಮಾರಿ ಜೀವನವನ್ನು ಅನುಸರಿಸಿದ್ದಾರೆಯೋ ಅಂತಹ ಕಡೆ ಸಿಂಧೋಳ್ಳುರು ಶಿಕ್ಷಣ ಕ್ಷೇತ್ರಕ್ಕೆ ಪ್ರವೇಶ ಪಡೆದಿರುವುದಿಲ್ಲ. ಭಿಕ್ಷೆಯ ಸಂಪಾದನೆಯಲ್ಲಿ ಶಿಕ್ಷಣ ಪಡೆದ ನಿದರ್ಶನಗಳಿವೆ. ಭಿಕ್ಷೆ ಮಾಡಿಕೊಂಡೇ ಬಿ.ಎ. ಪದವಿ ಪಡೆದ ನಿದರ್ಶನಗಳೂ ಇವೆ.

ಸಾಕ್ಷರತೆಯ ಶೇಕಾಡವಾರನ್ನು ಗಮನಿಸಿದಾಗ ಅಧ್ಯಯನದ ವ್ಯಾಪ್ತಿಗೆ ಸಂಬಂಧಪಟ್ಟ ೨೦ ಜಿಲ್ಲೆಗಳ ೮೪೪ ಕುಟುಂಬಗಳಲ್ಲಿ ಬಹಳಷ್ಟು ಕಡಿಮೆ ಪ್ರಮಾಣದಲ್ಲಿ ಶಿಕ್ಷಣ ಪಡೆದವರಾಗಿದ್ದಾರೆ. ಪ್ರಾಥಮಿಕ ಶಿಕ್ಷಣದವರೆಗೆ ಮಾತ್ರ ಕೆಲವರು ಕಲಿತಿದ್ದಾರೆ. ಉಳಿದಂತೆ ಮುಂದಿನ ವಿದ್ಯಾಭ್ಯಾಸಕ್ಕೆ ಹೋದವರ ಸಂಖ್ಯೆ ಕಾಣಬರುವುದಿಲ್ಲ. ಅದರಲ್ಲಿ ಲಿಂಗವಾರು ಸಾಕ್ಷರತೆಯ ಪ್ರಮಾಣದಲ್ಲಿ ಪುರುಷರು ಮೈಲುಗೈಯನ್ನು ಹೊಂದಿದವರಾಗಿದ್ದು, ಅದರಲ್ಲಿ ಸ್ತ್ರೀಯರು ಶಾಲಾ ಮೆಟ್ಟಿಲನ್ನು ಹತ್ತುವುದರಲ್ಲಿ ಹಿಂದುಳಿದು ಅನಕ್ಷರಸ್ಥರಾಗಿರುವುದು ಗಮನಾರ್ಹ ಸಂಗತಿಯಾಗಿದೆ.

**ಅಡಿಟಿಪ್ಪಣಿಗಳು**

೧. ಭೈರಪ್ಪ ಕೆ., ಭಾರತೀಯ ಸಮಾಜ, ಎಂ.ಎ. ಪ್ರಕಾಶನ, ಬೆಂಗಳೂರು. ಪು.೧೦೭

೨. ವಕ್ತೃ: ಸಿಂಗಾರೆಪ್ಪ, (೬೦) ಗುಡಾರ ನಗರ ಶ್ರೀಧರಗಡ್ಡೆ, ಬಳ್ಳಾರಿ, ಸಂದರ್ಶನ ದಿನಾಂಕ: ೦೭.೦೬.೨೦೦೩

೩. ನಲ್ಲೂರು ಪ್ರಸಾದ್., (ಲೇ) ಗಂಗಡಿಕಾರ ಒಕ್ಕಲಿಗರು, ಅಪ್ರಧಿನ ಪ್ರಕಾಶನ, ಬೆಂಗಳೂರು, ಪು. ೧೬೦

೪. ವಕ್ತೃ: ಮುನಿಯಮ್ಮ (೨೪) ಸಿಂಧೋಳ್ಳು ಆಶ್ರಯಕಾಲೋನಿ, ಕಂಪ್ಲಿ, ಹೊಸಪೇಟೆ (ತಾ.) ಸಂದರ್ಶನ ದಿನಾಂಕ: ೧೦.೦೬.೨೦೩

೫. ವಕ್ತೃ: ಕಾಟೆವ್ವ (೪೦) ಗದ್ದಿನಕರೆ ಕ್ರಾಸ್ ಬಾಗಲಕೋಟೆ, ಸಂದರ್ಶನ ದಿನಾಂಕ: ೨೫.೦೫.೨೦೦೩

೬. ಭೈರಪ್ಪ, ಕೆ., (ಲೇ) ಸಮಾಜಶಾಸ್ತ್ರದ ಮೂಲ ತತ್ವಗಳು, ಸುರೇಶ ಪಬ್ಲಿಕೇಷನ್, ಗದಗ, ೧೯೯೫, ಪು.೧೭

೭. ಕೃಷ್ಣಮೂರ್ತಿ ಎನ್., (ಸಂ) ಒಡಿಗ ಬುಡಕಟ್ಟು ಸಮುದಾಯ ಒಂದು ಅಧ್ಯಯನ, ಕನ್ನಡ ವಿಶ್ವವಿದ್ಯಾಲಯಕ್ಕೆ ಅಪ್ರಕಟಿತ ಪಿಎಚ್.ಡಿ. ಪ್ರಬಂಧ, ಪು. ೫೭

೮. ವಕ್ತೃ: ಮುನಿಯಪ್ಪ (೩೫), ತೆಕ್ಕಲಕೋಟೆ ಸಿರುಗುಪ್ಪ ತಾ. ಸಂದರ್ಶನ ದಿನಾಂಕ: ೦೮.೦೬.೨೦೦೩

೯. ವಕ್ತೃ: ಅಶಾಪ್ಪ (೬೦), ಬಸವನಗರ, ಬಸವನ ಬಾಗೇವಾಡಿ ಬಿಜಾಪುರ (ಜಿ.)

೧೦. ಚನ್ನಬಸಪ್ಪ ಗೊ.ರು., ಗ್ರಾಮಜ್ಯೋತಿ, ಕೆ.ಆರ್. ಲಿಂಗಪ್ಪನವರ ಅಭಿನಂದನ ಸಮಿತಿ, ಬೆಂಗಳೂರು, ೧೯೭೬

೧೧. ವಕ್ತೃ: ದುರುಗಮ್ಮ, ಮುತ್ತವ್ವ, ಪಾರ್ವತಿ., ಪಿ.ಡಬ್ಲ್ಯೂ.ಡಿ. ಆವರಣ ದೇವರ ಹಿಪ್ಪರಗಿ, ಸಿಂಧಗಿ (ತಾ.) ಸಂದರ್ಶನ ದಿನಾಂಕ: ೨೪.೧೧.೨೦೦೩

೧೨. ಅವರೇ

೧೩. ಮತಿಘಟ್ಟ ಕೃಷ್ಣಮೂರ್ತಿ, (ಲೇ) ಕನ್ನಡ ಜನಪದ ಸಾಹಿತ್ಯ ಭಂಡಾರ, ಪು. ೧೪೪

೧೪. ವಕ್ತೃ: ಯಲ್ಲಮ್ಮ (೪೦), ಶಿವಾಜಿನಗರ, ಜೋಳದಹಾಳ್ ಚನ್ನಗಿರಿ (ತಾ.) ಸಂಗರ್ಶನ ದಿನಾಂಕ: ೦೨.೧೨.೨೦೦೩

೧೫. ಅವರೇ

೧೬. ಅವರೇ

೧೭. ಪ್ರೊ. ವೆಂಕಟಸುಬ್ಬಯ್ಯ, (ಲೇ) ಕನ್ನಡ ನಿಘಂಟು ಪು. ೨೭೮೬

೧೮. ರಾಯಕರ ಕೆ.ಜಿ., (ಲೇ) ಕರ್ನಾಟಕದಲ್ಲಿ ಚಿನ್ನ ಬೆಳ್ಳಿಯ ಕುಶಲ ಕೈಗಾರಿಕೆ, ಪು. ೪-೫

೧೯. ವಕ್ತೃ: ರಾಮಕ್ಕ (೨೫), ಅರೆಹಳ್ಳಿ ವಠಾರ ಹೊಳಲ್ಕೆರ್ ತಾ. ಸಂದರ್ಶನ ದಿನಾಂಕ: ೦೩.೧೨.೨೦೦೩

೨೦. ಅವರೇ

೨೧. ಹರಿಕಾರ ಕೆ.ಎಸ್., ಪ್ರಜಾವಾಣಿ ದೀಪಾವಳಿ ವಿಶೇಷಾಂಕ (ಲೇ) ಹೆಣ್ಣಿನ ಸೌಭಾಗ್ಯದ ಲಕ್ಷಣಗಳು, ೧೯೭೨, ಪು.೪

೨೨. ನರಸಿಂಹಚಾರ ಎಸ್.ಜಿ., (ಲೇ) ಆದಿಪುರಾಣ, ಪು. ೧೨

೨೩. ಶ್ರೀನಿವಾಸಚಾರ, ಡಿ. ರಂಗಸ್ವಾಮಿ, (ಲೇ) ಅನಂತ ಪುರಾಣ, ಪು. ೧೫-೪೫

೨೪. ಅಲ್ಲೀಬಾಯಿ ದಸ್ತಗಿರಿ, (ಲೇ) ಉತ್ತರ ಕರ್ನಾಟಕದ ಜನಪದ ಒಡಪುಗಳು, ಪು. ೯೨

೨೫. ವಕ್ತೃ: ರಾಮಕ್ಕ (೨೫), ಅರೆಹಳ್ಳಿ ವಠಾರ ಹೊಳಲ್ಕೆರ್ (ತಾ.) ಸಂದರ್ಶನ ದಿನಾಂಕ: ೦೩.೧೨.೨೦೦೩

೨೬. ಪ್ರೊ. ವೆಂಕಟಸುಬ್ಬಯ್ಯ ಜಿ., ಕನ್ನಡ ನಿಘಂಟು, ಸಂಪುಟ-೪, ಪು. ೩೮೭೬

೨೭. ಹರಿಕುಮಾರ ಕೆ.ಎನ್. ಪ್ರಜಾವಾಣಿ ದೀಪಾವಳಿ ವಿಶೇಷಾಂಕ (ಲೇ) ಚಿದಾನಂದಮೂರ್ತಿ ಎಂ., ಹೆಣ್ಣಿನ ಸೌಭಾಗ್ಯದ ಲಕ್ಷಣಗಳು, ೧೯೭೨, ಪು.೪

೨೮. ಡಾ. ಕೃಷ್ಣ ಎಂ.ಎಚ್., (ಲೇ) ಕರ್ನಾಟಕ ಪೂರ್ವ ಚರಿತ್ರೆ ೧೯೫೭, ಪು. ೨೯

೨೯. ವಕ್ತೃ: ಮುನಿಯಮ್ಮ (೨೪), ಸಿಂಧೋಳ್ಳು ಆಶ್ರಯ ಕಾಲೋನಿ, ಕಂಪ್ಲಿ, ಹೊಸಪೇಟೆ (ತಾ.) ಸಂದರ್ಶನ ದಿನಾಂಕ: ೦೫.೦೬.೨೦೦೩

೩೦. ಅವರೇ

೩೧. ಸುಂಕಾಪುರ ಎಂ.ಎಸ್., (ಲೇ) ಗಿರಿಜಾಕಲ್ಯಾಣ, ಪು. ೧೯೬

೩೨. ಚೆನ್ನಬಸಪ್ಪ ಪುರಾಣ, (ಲೇ) ಬಸವನಾಳ ಶಿ.ಶಿ. ಮತ್ತು ಇತರರು, ಪು. ೪೨

೩೩. ವಕ್ತೃ: ಯಲ್ಲಪ್ಪ (೩೨), ತೆಕ್ಕಲಕೋಟೆ ಸಿರಗುಪ್ಪ (ತಾ.)

೩೪. ಅವರೇ

೩೫. ಪಾಠಕ, (ಲೇ) ಕವಿರಾಜಮಾರ್ಗ, ಪು. ೩-೧೦೩

೩೬. ನರಸಿಂಹಚಾರ ಎಸ್.ಜಿ., (ಲೇ) ಆದಿಪುರಾಣ, ಪು. ೭-೧೦೬

೩೭. ಕುವೆಂಪು ಮತ್ತು ಮಾಸ್ತಿ ವೆಂಕಟೇಶ್ ಅಯ್ಯಂಗಾರ, ಕುಮಾರವ್ಯಾಸ ಮಹಾಕವಿಯ ಕರ್ನಾಟಕ ಭಾರತ ಕಥಾಮಂಜರಿ, ೬-೭, ಪು. ೩೨೭

೩೮. ವಕ್ತೃ: ರಾವುಲೋರ ನಾಗಪ್ಪ (೪೦), ಸಿಂಧೋಳ್ಳು ಆಶ್ರಯ ಕಾಲೋನಿ, ಕಂಪ್ಲಿ, ಹೊಸಪೇಟೆ (ತಾ.) ಸಂದರ್ಶನ ದಿನಾಂಕ: ೦೫.೦೬.೨೦೦೩

೩೯. ಅವರೇ

೪೦. ವಕ್ತೃ: ಬಿಚ್ಚಪ್ಪ (೩೦), ಗುಡಾರ ನಗರ, ಶ್ರೀಧರಗಡ್ಡೆ, ಬಳ್ಳಾರಿ (ಜಿ.) ಸಂದರ್ಶನ ದಿನಾಂಕ: ೦೬.೦೭.೨೦೦೪

೪೧. ವಕ್ತೃ: ಗಾಳೆಪ್ಪ, (೨೮), ಗುಡಾರ ನಗರ ಶ್ರೀಧರಗಡ್ಡೆ, ಬಳ್ಳಾರಿ (ಜಿ.) ಸಂದರ್ಶನ ದಿನಾಂಕ: ೦೬.೦೭.೨೦೦೪

೪೨. ಅವರೇ

೪೩. ಎಸ್.ಕೆ. ಕರೀಂಸಾಬ್, (ಲೇ) ಜಾನಪದ ವೈದ್ಯ, ಕರ್ನಾಟಕ ಯಕ್ಷಗಾನ ಆಕಾಡೆಮಿ, ಬೆಂಗಳೂರು, ೧೯೮೯, ಪು. ೨೮೯

೪೪. ವಕ್ತೃ: ಸಿಂಗಾರೆಪ್ಪ, (೬೦), ಗುಡಾರ ನಗರ, ಶ್ರೀಧರಗಡ್ಡೆ, ಬಳ್ಳಾರಿ (ಜಿ.) ಸಂದರ್ಶನ ದಿನಾಂಕ: ೦೭.೦೬.೨೦೦೩

೪೫. ಅವರೇ

೪೬. ಅವರೇ

೪೭. ಅವರೇ

೪೮. ಅವರೇ

೪೯. ಅವರೇ

೫೦. ಅವರೇ

೫೧. ಅಂಬಳಿಕೆ ಹಿರಿಯಣ್ಣ., (ಲೇ) ಗಿರಿಜನ ಸಂಸ್ಕೃತಿ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪು. ೧೨೪

೫೨. ಅವರೇ

೫೩. ವಕ್ತೃ: ಜಂಬಲಮ್ಮ (೩೮) ಗುಡಾರನಗರ, ಬಳ್ಳಾರಿ ಜಿಲ್ಲೆ.

೫೪. ವಕ್ತೃ: ಜಂಬಲ್ಲಮ್ಮ (೩೬) ಡಬಲ್‌ಟ್ಯಾಂಕ್ ಹತ್ತಿರ, ಎಂ.ಆರ್.ಎಸ್. ಬಿಲ್ಡಿಂಗ್ ಹತ್ತಿರ, ಶಿವಮೊಗ್ಗ.

೫೫. ಅವರೇ

೫೬. ಅವರೇ

೫೭. ವಕ್ತೃ: ಅಂಜಿನಪ್ಪ (೩೮) ತಂದೆ ಗಂಗಪ್ಪ ಹೊನ್ನಹಳ್ಳಿ, ತುಮಕೂರು ಜಿಲ್ಲೆ, ಸಂದರ್ಶನ ದಿನಾಂಕ ೦೮.೦೮.೨೦೦೪

೫೮. ಗೋಪಾಲಕೃಷ್ಣರಾವ್., (ಲೇ) ಸಾಮಾಜಿಕ ರಾಜಕೀಯ ಜ್ಞಾನ, ಪು. ೪೯

೫೯. ವಕ್ತೃ: ಮಾರಕ್ಕ (೪೦) ಗಂಡ ಜಂಬಣ್ಣ, ಗಂಗಾವತಿ, ಕೊಪ್ಪಳ ಜಿಲ್ಲೆ.

೬೦. ವಕ್ತೃ: ಡಿ. ನಾಗಪ್ಪ (೪೦) ಆಶ್ರಯಕಾಲೋನಿ, ಕಂಪ್ಲಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.

೬೧. ವಿವೇಕ ರೈ., ಬೇಟೆ ಜಾನಪದ ವಿಶಿಷ್ಟ ಜಾನಪದ ವಿಚಾರ ಸಂಕೀರ್ಣ ಪ್ರಬಂಧಗಳು (ಸಂ) ಎಚ್.ಜೆ. ಲಕ್ಕಪ್ಪಗೌಡ., ಬಿ.ಆರ್. ಪ್ರಾಜೆಕ್ಟ್, ಕನ್ನಡ ವಿಭಾಗ ಸ್ನಾತಕೋತ್ತರ ಕೇಂದ್ರ, ಮೈಸೂರು ವಿಶ್ವವಿದ್ಯಾಲಯ, ೧೯೮೪

೬೨. ಗಂಗಾಧರ ದೈವಜ್ಞ., ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೮

೬೩. ವಕ್ತೃ: ಮಾರೆಪ್ಪ (೫೦) ತಂದೆ ಜಂಬಯ್ಯ, ಹೊಳಲ್ಕೆರೆ, ಚಿತ್ರದುರ್ಗ ಜಿಲ್ಲೆ.

೬೪. ಅಂಬಳಿಕೆ ಹಿರಿಯಣ್ಣ., ಮಲೆನಾಡಿನ ವೈಷ್ಣವ ಒಕ್ಕಲಿಗರ ಸಂಸ್ಕೃತಿ, ಕನ್ನಡ ಪುಸ್ತಕಪ್ರಾಧಿಕಾರ ಕರ್ನಾಟಕ ಸರ್ಕಾರ. ಬೆಂಗಳೂರು, ೧೯೯೯

೬೫. ವಕ್ತೃ: ದೊಡ್ಡ ದುರುಗಪ್ಪ (೫೪) ತಂದೆ ಭೀಮಪ್ಪ, ನೆಲವಾಲ್‌ಕ್ಯಾಪ್, ಶಿಕಾರಿಪುರ, ಶಿವಮೊಗ್ಗ ಜಿ.

೬೬. ಅವರೇ

೬೭. ಸ.ಚಿ. ರಮೇಶ., ಬೇಟೆ ಸಾಂಸ್ಕೃತಿಕ ಪದ ಕೋಶ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೯

೬೮. ವಕ್ತೃ: ಸುಂಕಪ್ಪ (೫೦) ತಂದೆ ಸುಂಕಪ್ಪ, ವುರಕುಂದ್ಲಿ ಈರಣ್ಣ ನಗರ, ರಾಯಚೂರು.

೬೯. ವಕ್ತೃ: ಶಂಕ್ರಪ್ಪ (೩೮) ತಂದೆ ವೆಂಕಟಪ್ಪ, ದರ್ಗಾಹತ್ತಿರ, ಕೂಡ್ಲಿಗಿ ತಾ. ಬಳ್ಳಾರಿ ಜಿಲ್ಲೆ.

೭೦. ಅವರೇ

೭೧. ಅವರೇ

೭೨. ಕೊಪ್ಪಳ ಜಿಲ್ಲೆ ಗಂಗಾವತಿ ತಾಲ್ಲೂಕಿನ ಸರ್ಕಾರಿ ಪ್ರೌಢಶಾಲೆಗಳಲ್ಲಿ ಅಭ್ಯಾಸಿಸುತ್ತಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ವಿದ್ಯಾರ್ಥಿಗಳ ಶೈಕ್ಷಣಿಕ ಸಮಸ್ಯೆಗಳ ಅಧ್ಯಯನ, ಸಂಶೋಧಕರು: ಸುರೇಶ ಕುಮಾರ್, ಶಿಕ್ಷಣ ಸ್ನಾತಕೋತ್ತರ ಪದವಿ ಭಾಗಶಃ ಅವಶ್ಯಕತೆಗಾಗಿ ಗುಲ್ಬರ್ಗಾ ವಿಶ್ವವಿದ್ಯಾಲಯ (ಅಪ್ರಕಟಿತ ಎಂ.ಇಡ್. ಸಂಪ್ರಬಂಧ) ಪು. ೩

ಅಧ್ಯಾಯ - ೪

## ಸಂಪ್ರದಾಯ ಮತ್ತು ಆಚರಣೆಗಳು

೧. ಜನನ

೨. ನಾಮಕರಣ

೩. ಋತುಮತಿ ಶಾಸ್ತ್ರ

೪. ವಿವಾಹ ಪದ್ಧತಿ

೫. ಶವ ಸಂಸ್ಕಾರ

೬. ನ್ಯಾಯ ಪಂಚಾಯಿತಿ

೭. ನಂಬಿಕೆ-ನಿಷೇಧಗಳು



# ಸಂಪ್ರದಾಯ ಮತ್ತು ಆಚರಣೆಗಳು

ಮಾನವ ಜೀವನವನ್ನು ರೂಪಿಸುವಲ್ಲಿ, ಸಂಸ್ಕೃತಿಯನ್ನು ಪೋಷಿಸುವಲ್ಲಿ, ಸಾಮಾಜಿಕ ಜೀವನ ಬೆಳೆಸುವಲ್ಲಿ ಸಂಪ್ರದಾಯ ಆಚರಣೆಗಳಿಗೆ ವಿಶಿಷ್ಟ ಮಹತ್ವವಿದೆ. ಅವು ಅವನ ಬಾಳಿನ ಅವಿಭಾಜ್ಯ ಸಂಗತಿಗಳಾಗಿವೆ. ಸಮಾಜವನ್ನು ಒಂದು ಗೂಡಿಸುವ ಮತ್ತು ಮುಂದಿನ ಪೀಳಿಗೆಗೆ ಶಕ್ತಿ ಪುಂಜಗಳಾಗಿವೆ. ನಡವಳಿ ಹಾಗೂ ವ್ಯವಹಾರಗಳು ಸಂಪ್ರದಾಯ ಬದ್ಧವಾಗಿಯೇ ಜರಗುತ್ತವೆ. ಸಮುದಾಯದ ಬದುಕಿನ ಜೀವನಕ್ಕೆ ಸಂಪ್ರದಾಯಳೇ ಆಧಾರ. ಸಂಪ್ರದಾಯಗಳೇ ಸಾಮಾಜಿಕ ಜೀವನವಾಗಿ ಪರಿಣಮಿಸುತ್ತವೆ. ಆದ್ದರಿಂದಲೇ ಇಂದಿನ ವಿದ್ಯಾಮಾನದಲ್ಲಿ ಸಂಪ್ರದಾಯಗಳು ಕಾನೂನಾಗಿ ಪರಿಣಮಿಸುತ್ತವೆ. ಸಮಾಜದಲ್ಲಿ ಸಮುದಾಯದಿಂದ ಸಮುದಾಯಕ್ಕೆ ಕುಲದಿಂದ ಕುಲಕ್ಕೆ ವ್ಯತ್ಯಾಸಗೊಳ್ಳುವ ಕೆಲವು ಸಂಪ್ರದಾಯಗಳು ಸಾರ್ವತ್ರಿಕ ವ್ಯಾಪ್ತಿಯೊಳಗೆ ಸೇರದೆ ಹೊರಚ್ಚಾಗಿಯೇ ನಿಲ್ಲುವ ಸಂಭವವುಂಟು.

ಕುಟುಂಬ ಸಮಾಜದ ಕೇಂದ್ರಬಿಂದು. ಸಮುದಾಯಗಳು ತಮ್ಮ ಸಾಂಸ್ಕೃತಿಕ ಬದುಕನ್ನು ಕಟ್ಟಿಕೊಳ್ಳುವ ಸಂದರ್ಭದಲ್ಲಿ ಹಲವು ಬಗೆಯ ಆಚಾರ-ವಿಚಾರಗಳನ್ನು ಬೆಳೆಸಿಕೊಂಡು ಬಂದಿವೆ. ಈ ಆಚಾರ-ವಿಚಾರಗಳು ಕಾಲ ಕ್ರಮೇಣ ಹಾಗೇ ಮುಂದುವರೆದುಕೊಂಡು ಬಂದು ಸಂಪ್ರದಾಯಗಳಾಗಿ ಪರಿಣಮಿಸಿವೆ. ಈ ಆಚರಣೆ ಮತ್ತು ಸಂಪ್ರದಾಯಗಳು ಜಾತಿ, ಧರ್ಮ ಮತ್ತು ಪ್ರಾದೇಶೀಕವಾಗಿ ವೈವಿಧ್ಯಮಯವಾಗಿದ್ದು, ಸಮುದಾಯಗಳನ್ನು ಪ್ರತಿನಿಧಿಸುವ ಸಂಗತಿಗಳಾಗಿವೆ. ನಾಮಕರಣ, ಮದುವೆ, ಮರಣಸಂಸ್ಕಾರ ಇತ್ಯಾದಿ ಸಂಪ್ರದಾಯಗಳು ವಿಧಿ ಕ್ರಿಯೆಗಳಾದರೆ ಇವುಗಳು ಮಾಡಬೇಕಾದ ಕಾರ್ಯಗಳನ್ನು ಆಚರಣೆಗಳಾಗುತ್ತವೆ. ಇವು ನಿರಂತರವಾಗಿ ಬೆಳೆಯುತ್ತಲೇ ಬಂದಿವೆ.

ಸಂಪ್ರದಾಯಗಳು ಮೂಲತಃ ವೈಯಕ್ತಿಕ ಮನೋಭಾವನೆಗಳೆಂಬುದು ಸ್ಪಷ್ಟ. ಪ್ರಭಾವ ಶಾಲಿಯಾದ ವ್ಯಕ್ತಿಯೊಬ್ಬನ ಮನೋಭಾವನೆಗಳನ್ನು ಸುತ್ತಮುತ್ತಣ ಜನ ಅನುಕರಿಸುವುದು ಸಹಜ. ಉನ್ನತ ಸಮುದಾಯದವರು ತುಳಿಸಿ ಗಿಡಕ್ಕೆ ಪೂಜೆ ಮಾಡುವುದು, ಕೆಳಜಾತಿ ಜನರು ಸೂರ್ಯನಿಗೆ ನಮಸ್ಕರಿಸುವುದು ಸಂಪ್ರದಾಯವಾಗಿದೆ. ಒಮ್ಮೆ ಸಮಾಜದಲ್ಲಿ ಸಂಪ್ರದಾಯಗಳು ಜನರ ಆಚರಣೆ ದೋಷರಹಿತವಾದು ದಿರಬೇಕು, ಶುಭದಾಯಕವಾದುದರಿಬೇಕು, ಸಭ್ಯತೆಯ ಕುರುಹು ಆಗಿರಬೇಕು. ಆದ್ದರಿಂದ ಅದೆಲ್ಲ ಸತ್ಯ ಅದಕ್ಕೆ ವಿರುದ್ಧವಾದದ್ದೆಲ್ಲ ಅಸತ್ಯ ಎಂಬ ಭಾವನೆ ಸಾಮಾನ್ಯ ಜನತೆಯ ಮನಸ್ಸಿನಲ್ಲಿ ಬೇರೂರಿರುತ್ತದೆ. ಲೋಕರೂಢಿಯಲ್ಲಿ ಮಾನವನಿಗೆ ಅನುಕರಣೆ ವಿಶಿಷ್ಟ ಗುಣ. ಉದಾಹರಣೆಗೆ ತಂದೆಯಿಂದ ಮಗ, ತಾಯಿಯಿಂದ ಮಗಳು, ಗುರುವಿನಿಂದ ಶಿಷ್ಯ, ದೊಡ್ಡವರಿಂದ ಚಿಕ್ಕವರು

ಸಂಪ್ರದಾಯಗಳನ್ನು ಕಲಿಯುವುದು ರೂಢಿ. "ಯದ್ಯದಾಚರತಿ ಶ್ರೇಷ್ಠಸ್ತತ್ತ ದೇವೇತರೂ ಜನಾಃ ಸಯತ್ಪ್ರಮಾಣಂ ಕುರತೇ ಲೋಕಸ್ತದನು ವರ್ತತೇ"[೧] ದೊಡ್ಡವರಲ್ಲಿ ಅತೀವ ಶ್ರದ್ಧೆಯುಳ್ಳ ಜನ ಹಿಂದೆ ಮುಂದೆ ವಿಚಾರಿಸದೆ ಅವರು ಮಾಡಿದ್ದನ್ನೆಲ್ಲಾ ತಾವೂ ಅಕ್ಷರಶಃ ಆಚರಿಸುತ್ತಾರೆ. ಹಿರಿಯರೆಂದ ಮೇಲೆ ಅವರು ನಡೆದದ್ದು ಅಥವಾ ನುಡಿದದ್ದು ಸರಿಯೇ, ತಪ್ಪೇ ಎಂದು ವಿಚಾರಿಸುವ ಗೋಜು ಅವರಿಗೆ ಬೇಕಾಗಿಲ್ಲ. ಹೀಗಾಗಿ ಸಂಪ್ರದಾಯಗಳು ಸಾಮೂಹಿಕ ಸ್ವರೂಪವನ್ನು ಪಡೆಯುತ್ತವೆ. "ಸಂಪ್ರದಾಯವೆಂಬುದು ವೈಯಕ್ತಿಕವಾದುದಲ್ಲ. ಸಾಮೂಹಿಕವಾದದು. ಜನರು ಏನು ಮಾಡುತ್ತಾರೆಂಬುದನ್ನು ತಿಳಿಸುವುದೇ ಸಂಪ್ರದಾಯ".[೨]

ಒಂದು ನಿರ್ದಿಷ್ಟ ಸಾಮಾಜಿಕ ಪರಿಸರದಲ್ಲಿ ಜನತೆಯ ಅಂಗೀಕಾರದ ಮುದ್ರೆಯನ್ನು ಪಡೆಯದೇ ಸಮುದಾಯಗಳು, ಕುಟುಂಬಗಳು, ಗುಂಪುಗಳು ಸೀಮಿತಗೊಂಡಿರುವ ಆಚರಣೆ ಸಂಪ್ರದಾಯವೆನಿಸಿಕೊಳ್ಳುವುದಿಲ್ಲ. ಅಭಿರುಚಿ ವೈವಿಧ್ಯವೂ, ಪರಿಸರದ ಒತ್ತಡವೂ, ಸಂಸ್ಕೃತೀಕರಣವೋ, ಕಾರಣವಾಗಿ ಉಗಮಗೊಳ್ಳುವ ಆಚರಣೆಗಳು ಕೇವಲ ತಾತ್ಕಾಲಿಕಗಳಾಗಿಯೋ, ರೂಪರೇಷಗಳಾಗಿಯೋ ಉಳಿಯುತ್ತವೆ. ಅವು ಅನುಕರಿಸುವ ಸ್ವರೂಪವಾಗಿ ಕೆಲವು ಜನತೆಗೆ ಮಾತ್ರ ಸೀಮಿತಗೊಳ್ಳುವುದರಿಂದ ಸಂಪ್ರದಾಯಗಳು ಉನ್ನತಕ್ಕೇರಲಾರವು. ಯಾವುದೊ ಒಂದು ವೃತ್ತಿ ಅನುಕರಣೆ ಮಾಡಿದಾಗ ಉದಾಹರಣೆ ಕೃಷಿ ಉದ್ಯೋಗಕ್ಕೆ ಸಂಬಂಧಿಸಿದ ಸಂಪ್ರದಾಯವಾದರೆ, ಕೃಷಿಯ ಸಲಕರಣೆಗಳಿಗೆ ಪೂಜೆ ಮಾಡುವುದು ಆಚರಣೆ ಆಗಿರುತ್ತದೆ. ಇದೇ ವೃತ್ತಿಯಲ್ಲದೇ ಅನೇಕ ವೃತ್ತಿಗಳು ಅವು ಸಾಮೂಹಿಕ ಕ್ರಿಯೆಗಳಾಗಿ ಸಮಾಜದಲ್ಲಿ ಸಂಪ್ರದಾಯಗಳ ಸ್ಥಾನಮಾನಗಳನ್ನು ಪಡೆಯಬಹುದು.

ಬುಡಕಟ್ಟು ಸಮುದಾಯಗಳಲ್ಲಿ ಸಂಪ್ರದಾಯಗಳು ಮತ್ತು ಆಚರಣೆಗಳು ಪ್ರಬಲವಾಗಿರುತ್ತವೆ. ಅವುಗಳ ಬಿಗಿಯಾದ ಹಿಡಿತದಿಂದ ಯಾರೂ ತಪ್ಪಿಸಿಕೊಳ್ಳುವಂತಿಲ್ಲ. ಅವು ಚಾಲ್ತಿಯಲ್ಲಿರುವ ಸಮುದಾಯವಾಗಲಿ, ಜನಾಂಗವಾಗಲಿ, ಜಾತಿಯಾಗಲಿ, ಗುಂಪಾಗಲಿ ಮಿತವಾಗಿದ್ದಷ್ಟು ಅವುಗಳ ಏಕರೂಪತೆಗೆ ಭಂಗ ಬರುವುದಿಲ್ಲ. ಅನ್ಯ ಪ್ರಭಾವಕ್ಕೆ ಕುಂದುಂಟಾಗುವುದಿಲ್ಲ. ಭೌಗೋಳಿಕ ಪರಿಸರದಲ್ಲಿ ವಾಸಿಸುವ ಹಿನ್ನೆಲೆಯಲ್ಲಿ ಬುಡಕಟ್ಟು ಜನರ ಮನೋಧರ್ಮವನ್ನು ಅವಲಂಬಿಸಿ ಸಂಪ್ರದಾಯಗಳು ಉಗಮಗೊಳ್ಳುತ್ತವೆ. ಒಮ್ಮೆ ಬುಡಕಟ್ಟು ಜನರ ವಲಸೆ ಹಾಗೂ ನಾನಾರೀತಿಯ ಸಂಪರ್ಕಗಳಿಂದಾಗಿ ಅವು ಹರಡುವುದಾದರೂ, ಅವುಗಳ ಉಗಮಸ್ಥಾನ ಬಹುತ್ವವನ್ನು ನಿರಾಕರಿಸುವಂತಿಲ್ಲ. ಬುಡಕಟ್ಟು ಜನರ ಬೌದ್ಧಿಕ, ಮಾನಸಿಕ ಹಾಗೂ ಶಾರೀರಿಕ ಗುಣಲಕ್ಷಣ ಕ್ರಿಯೆಗಳು ಸಾರ್ವತ್ರಿಕವಾಗಿ ಏಕರೂಪವಾಗಿರುವುದರಿಂದ ಒಂದೇ ಬಗೆಯ ಸಂಪ್ರದಾಯಗಳು ಭಿನ್ನ ಭಿನ್ನ ಪ್ರದೇಶಗಳಲ್ಲಿ ಇರುವುದುಂಟು. ಆದ್ದರಿಂದಲೇ ಅನೇಕ ಬುಡಕಟ್ಟು ಸಮುದಾಯಗಳಲ್ಲಿ ಚಾಲ್ತಿಯಲ್ಲಿರುವ ವಿವಾಹ ಸಂಬಂಧವಾದ ಹಾಗೂ ಮರಣೋತ್ತರ ಸಂಪ್ರದಾಯದವರೆಗೂ ವ್ಯತ್ಯಾಸಗಳು ಇರುವುದುಂಟು. ಈ ಕಾರಣದಿಂದಾಗಿ ಸಿಂಧೋಳ್ಳುರ ಸಂಸ್ಕೃತಿ ವಿಶಿಷ್ಟವಾದುದು. ಸಂಸ್ಕೃತಿಯ ವಿಕಾಸ ಕ್ರಮದಲ್ಲಿ ಆಹಾರ ಸಂಗ್ರಹಣೆ ಹಂತವನ್ನು ದಾಟಿ, ಬೇಟೆ ಸಂಸ್ಕೃತಿಯ ಹಂತಕ್ಕೆ ಸೇರಿದ ಸಿಂಧೋಳ್ಳುರ ಸಂಪ್ರದಾಯ ಆಚರಣೆಗಳು ಆದಿಮ ಸಂಸ್ಕೃತಿಯ ಹತ್ತು ಹಲವು ವಿವರಗಳನ್ನು ನೀಡುತ್ತವೆ. 'ಗುಡಾರ' ಸಂಸ್ಕೃತಿಯ ನಾಡಿನ ಜನತೆಯೊಂದಿಗೆ ಕೈಗೂಡಿಸುವ ಹಂತದಲ್ಲಿಯ ಹಲವು ಮಜಲುಗಳಲ್ಲಿ ಗೋಚರವಾಗುತ್ತದೆ.

ಸಿಂಧೋಳ್ಳು ಸಮುದಾಯುವೊಂದರ ಸಂಸ್ಕೃತಿಯ ಮೂಲ ಸ್ವರೂಪವನ್ನು ಅರ್ಥಮಾಡಿಕೊಳ್ಳಲು ಈ ಸಮುದಾಯದ ಹುಟ್ಟು, ಸಾವು, ಮದುವೆ, ನ್ಯಾಯ ಪಂಚಾಯಿತಿ ಸತ್ಮದ ಅವಲೋಕನಕ್ಕೆ ಸಂಬಂಧಿಸಿದ ಸಂಪ್ರದಾಯ ಆಚರಣೆಗಳು ಹೆಚ್ಚು ಪ್ರಯೋಜನಕಾರಿಯಾಗುತ್ತದೆ. ಈ ಹಿನ್ನೆಲೆಯಲ್ಲಿ ವ್ಯಾಪಕವಾಗ ನಾಗರಿಕತೆಯ ತೆಕ್ಕೆಗೆ ಇದುವರೆಗೂ ಸಿಕ್ಕಿ ಬೀಳದ ಸಿಂಧೋಳ್ಳರ ಜೀವನಾವರ್ತನದ ಆಚರಣೆಗಳ ವಿವರಗಳನ್ನು ಇಲ್ಲಿ ದಾಖಲಿಸಲಾಗಿದೆ. ಹುಟ್ಟು, ಸಾವು ಮಾನವ ಜೀವನದ ಮಹತ್ವದ ಎರಡು ಕ್ಷಿತಿಜಗಳು. ಹುಟ್ಟು ಆಕಸ್ಮಿಕ, ಸಾವು ನಿಶ್ಚಿತ. ಈ ಹುಟ್ಟು ಸಾವು ಎಂಬ ಧ್ರುವಗಳೆರಡರ ಸಂದರ್ಭದಲ್ಲಿ ಹಾಗೂ ಮಧ್ಯದ ಮಹತ್ವದ ಘಟ್ಟಗಳಲ್ಲಿ ಕೆಲವು ಸಂಸ್ಕಾರ ವಿಧಿಗಳನ್ನು ಮಾಡುವುದು ಎಲ್ಲ ಜನ ಜಾತಿಗಳಲ್ಲೂ ಕಂಡುಬರುತ್ತದೆ. ಆದಾಗ್ಯೂ ಪ್ರಸ್ತುತ ಅಧ್ಯಾಯದಲ್ಲಿ, ಕ್ಷೇತ್ರಕಾರ್ಯದ ಸಂದರ್ಭದಲ್ಲಿ ವಕ್ತೃಗಳಿಂದ ಸಂಗ್ರಹಿಸಿದ ಮಾಹಿತಿಯನ್ನು ಆಧರಿಸಿ, ಕೆಲವು ಸಂಪ್ರದಾಯ ಹಾಗೂ ಆಚರಣೆಗಳನ್ನು ಈ ಕೆಳಗೆ ವಿಶ್ಲೇಷಿಸಲಾಗಿದೆ.

೧. ಜನನ

ಹೆಣ್ಣು ಮೊದಲು ಗರ್ಭಧರಿಸಿದ್ದನ್ನು 'ಚೊಚ್ಚಲ ಬಸಿರು' ಎಂದು ಕರೆಯುವರು. ವಂಶದ ಕುಡಿಯನ್ನು ಒಡಲಲ್ಲಿ ತುಂಬಿಕೊಂಡಳೆಂದು ಅತ್ತೆ, ಮಾವ, ಪರಿವಾರದವರೂ ಗರ್ಭಿಣಿಯನ್ನು ಎಲ್ಲರೂ ಅತ್ಯಂತ ಎಚ್ಚರದಿಂದ ನೋಡಿಕೊಳ್ಳುತ್ತಾರೆ. ಕೊಟ್ಟ ಮನೆಯ ಗೌರವ ಹೆಚ್ಚಿಸಿ, ತವರಿನ ಮರ್ಯಾದೆ ಪೆಚ್ಚಿಸಿದಳೆಂದು ಹೆತ್ತವರು ಸಂತೋಷದಿಂದ ಹಿಗ್ಗುತ್ತಾರೆ. ಬಸಿರಾದ ಹೆಣ್ಣಿನ ಬಯಕೆಗಳು ಹತ್ತು ಹಲವು. ಆಕೆ ಬಯಸುವ ಬಯಕೆಗಳು ತಿಂಡಿ-ತಿನಿಸುಗಳು, ಒಮ್ಮೆ ತಾಯಿ ಮನೆಯಲ್ಲಿಯೆ ತಿಂಡಿ ತಿನಿಸು ಮಾಡಿ ಕೊಡುತ್ತಾಳೆ. ಸಾಧ್ಯವಾಗದಿದ್ದರೆ, ಊರಲ್ಲಿ ಭಿಕ್ಷೆಗೆ ಹೋಗಿ ತನಗೆ ಬೇಕಾಗಿದ್ದ ಮನೆಯವರ ಬಳಿಯಿಂದ ಮಗಳು ಬಸಿರಿಯೆಂದು ಹೇಳಿ, ಬೇಡಿಕೊಂಡು ತಂದು ತಿನ್ನಿಸುತ್ತಾಳೆ. ಬಸಿರು ಹೆಣ್ಣು ಹೂವು ಮುಡಿಯುವುದು, ಗುಡಾರದ ಒಳಗಡೆ ಕನ್ನಡಿಯಲ್ಲಿ ಅಲಂಕರಿಸಿಕೊಳ್ಳುವುದು, ಹೆಣ್ಣು ಮಕ್ಕಳನ್ನು ಎತ್ತಿ ಮುದ್ದಾಡುವುದು, ಕೆಲವೊಮ್ಮೆ 'ಕರಿಇದ್ದಿಲು' ಮತ್ತು 'ಕೆಮ್ಮಣ್ಣು' ತಿನ್ನಲು ಬಯಸುವುದುಂಟು.

ಪ್ರಾರಂಭದ ಘಟ್ಟ: ಹೆಣ್ತನದ ಪರಿಪೂರ್ಣತೆ ಬಸಿರಿಯಾದಾಗ ಸಾಧ್ಯವಾಗುತ್ತದೆಯೆಂಬ ನಂಬಿಕೆ ಇವರಲ್ಲಿದೆ. ಸಮುದಾಯದವರು ಮಹಿಳೆ ಗರ್ಭಿಣಿಯಾದ ಸುದ್ದಿಯನ್ನು ತವರು ಮನೆಯವರಿಗೆ ತಿಳಿಸುತ್ತಾರೆ. ಈ ಸಮುದಾಯದವರು ಎಲ್ಲಿ ವಾಸಿಸುತ್ತಾರೋ, ಅಲ್ಲಿ ಗರ್ಭಿಣಿಯಾದ ಮಹಿಳೆ ಹೆರಿಗೆಯಾಗುವುದು. ಇವರಲ್ಲಿ ಗರ್ಭಿಣಿ ಮಹಿಳೆಗೆ ಪ್ರತ್ಯೇಕ ಗುಡಾರ ಇರುವುದು. ಗುಡಾರದ ಒಳಗಡೆ ಚಾಪೆ, ಮೊರ, ಬಿಸಿನೀರಿನ ಗಡಿಗೆ ಇತ್ಯಾದಿ ಸಾಮಾನುಗಳು ಇರುವುದು.

ಗರ್ಭಿಣಿ ಮಹಿಳೆಗೆ ಹೆರಿಗೆ ನೋವು ಬಂದಾಗ ಸಮುದಾಯದ ಜನರು ಸೇರಿಕೊಂಡು ತಮ್ಮ ದೇವರುಗಳಾದ ಈರನಾಗಮ್ಮ, ಮುನಿಸ್ವಾಮಿ, ಜಂಬಲಮ್ಮ, ಕೂಗಮ್ಮ ಇತ್ಯಾದಿ ಕುಲದೇವತೆಗಳಿಗೆ ತಮ್ಮ ನೋವನ್ನು ಪ್ರಾರ್ಥಿಸಿಕೊಳ್ಳುತ್ತಾರೆ. "ಅವ್ವ ತಾಯಿ ನನ್ನ ಮಗಳಿಗೆ ಹೆರಿಗೆ ನೋವು ಕಾಣಿಸಿಕೊಂಡಿದೆ. ದ್ಯಾವರ್ ನಿನ್ನ ಮಗಳು ಅಂತ ತಿಳಿದುಕೊಂಡು, ಜೀವ ಉಳಿಸವ್ವ-ನಮ್ಮವ್ವ ನಿನಗೆ ಹರಕೆ ಮಾಡಿಕೊಳ್ಳುತ್ತೇವೆ. ಎಂದು ಬೇಡಿಕೊಳ್ಳುತ್ತಾರೆ.[೩] ಕುಲದ ಮುಖ್ಯಸ್ಥರುಗಳು ತಮ್ಮ ತಮ್ಮ ಗುಡಾರದ ಹೊರಗಡೆಯಲ್ಲಿ ಕುಳಿತುಕೊಂಡು, ಹೆರಿಗೆ ಹೇಗಾಗುವುದೋ ಎಂಬ ಆತಂಕದಲ್ಲಿರುತ್ತಾರೆ.

ಹೆರಿಗೆ ಸಂದರ್ಭದಲ್ಲಿ ಸಹಾಯ ಮಾಡಲು ಈ ಸಮುದಾಯದ ಸೂಲಗಿತ್ತಿಯನ್ನು ಕರೆದುಕೊಂಡು ಗುಡಾರದಲ್ಲಿ ಹೋಗುವರು.[೪] ಅನುಭವಸ್ಥೆ ಸೂಲಗಿತ್ತಿ ಗರ್ಭಿಣಿ ಮಹಿಳೆಗೆ ಹೆರಿಗೆ ಮಾಡಿಸುತ್ತಾಳೆ. ಸೂಲಗಿತ್ತಿ ತಾಯಿಗರ್ಭದಿಂದ ಮಗು ಹೊರಬಂದಾಗ ಅದರ ಹೊಕ್ಕಳ ಬಳ್ಳಿ ಕುಡುಗೋಲಿನಿಂದ ಕೊಯ್ದು, ಮಗುವನ್ನು ಬೇರ್ಪಡಿಸುತ್ತಾಳೆ. ನಂತರ ಮಗುವನ್ನು ಹಳೇ ಚಾಪೆ ಮೇಲೆ ಹಾಕುವರು. ಇದಕ್ಕಾಗಿ ಮೊದಲೇ ತರಿಸಿಟ್ಟಿದ ಮಣ್ಣಿನ ಹೊಸ ಗಡಿಗೆಯಲ್ಲಿ ಹೊಕ್ಕಳ ಬಳ್ಳಿ ಮಾಂಸವನ್ನು ತುಂಬಿ, ಮೇಲೊಂದು ಮುಚ್ಚಳವನ್ನು ಮುಚ್ಚುತ್ತಾರೆ. ಆ ಹೊಸ ಗಡಿಗೆಯನ್ನು ಪೂಜೆ ಮಾಡಿ, ಗುಡಾರದ ಬಚ್ಚಲಿನ ನೀರು ಹರಿದು ಹೋಗುವ ಜಾಗದಲ್ಲಿ 'ಗುಂಡಿ' ತೋಡಿ ಅದನ್ನು ಹೂಳಿಟ್ಟು ಅದರ ಮೇಲೆ ಮಣ್ಣು ಮುಚ್ಚುತ್ತಾರೆ. ಈ ಕಾರ್ಯ ಮುಗಿದ ಮೇಲೆ ತಾಯಿಗೆ ಬಿಸಿ ನೀರಿನ ಸ್ನಾನ ಮಾಡಿಸಿ, ಶೀತವಾಗದಂತೆ ತಲೆಗೆ ಕಿವಿ ಮುಚ್ಚಿಕೊಳ್ಳುವಂತೆ ಹಳೇ ಬಟ್ಟೆಗಳನ್ನು ಕಟ್ಟುತ್ತಾರೆ.

ಸಿಂಧೋಳ್ಳರ ಮುಖ್ಯಸ್ಥರುಗಳಿಗೆ ಕುಲ ದೈವದ ಪ್ರಕಾರ ಟೀ, ಸಾರಾಯಿ ಕುಡಿಸುವುದುಂಟು. ಮೂರು ದಿವಸಗಳ ನಂತರ ಗುಡಾರದ ಒಳಗಡೆಯಲ್ಲಿ ಸಗಣಿ ನೀರಿನಿಂದ ನೆಲಸಾರಿಸಿ, ಸ್ವಚ್ಛತೆ ಮಾಡುತ್ತಾರೆ. ಚಾಪೆ ಮೇಲೆ ಹಾಕಿರುವ ಮಗುವನ್ನು ಮೊರದಲ್ಲಿ ಹಾಕಲಾಗುವುದು. ಆ ದಿನ ಸಂಜೆ ಸಮಯದಲ್ಲಿ ಗುಂಡಿಯಲ್ಲಿ ಇಟ್ಟಿರುವ ಹೊಕ್ಕಳಬಳ್ಳಿ ಮಾಂಸದ ಗಡಿಗೆಗೆ ಪೂಜೆ ಮಾಡಿ, ಅನ್ನ ಬೆಲ್ಲದ ಎಡೆಹಾಕಿ ಎಡೆಯನ್ನು ಅಲ್ಲಿಯೇ ಇಟ್ಟು ಬರುತ್ತಾರೆ.[೫] ಗರ್ಭಿಣಿಯು ತಲೆ ತುಂಬಾ ಕೌದಿ ಹೊದ್ದುಕೊಂಡು, ಕೈಯಲ್ಲಿ ಹೊಕ್ಕಳ ಬಳ್ಳಿ ಕೊಯ್ದು, ಕುಡುಗೋಲು ಗಡಿಗೆ ಪಕ್ಕದಲ್ಲಿ ಇಟ್ಟು ಪೂಜೆ ಮಾಡುತ್ತಾಳೆ. ಮೊರದಲ್ಲಿ ಐದು ಹಿಡಿ ಅಕ್ಕಿ ಹಾಕಿ, ಮಗುವನ್ನು ಮೊರದಲ್ಲಿ ಹಾಕಿ ನಾಮಕರಣ ಮಾಡಲಾಗುವುದು. ನಂತರ ಮಗುವಿಗೆ ಮರ್ಮಾಂಗದ ಬಳಿ, ಎದೆಯ ಮೇಲೆ ಹಾಗೂ ಕಿಬ್ಬೊಟ್ಟೆಗಳಿಗೆ ಬರೆ ಎಳೆಯುತ್ತಾರೆ.

ಜನಿಸಿದ ಮಗುವಿಗೆ ಮೂರು ದಿವಸಗಳ ಕಾಲ ತಾಯಿಯ ಮೊಲೆ ಹಾಲನ್ನು ಕುಡಿಸುತ್ತಾರೆ. ಗಿಣ್ಣಾಲು ಕುಡಿದರೆ ಮಗು ಗಟ್ಟಿ ಇರುತ್ತದೆಂದು ಹೇಳುತ್ತಾರೆ.[೬] ಮಗು ಹುಟ್ಟಿದ ಮೂರು ದಿನಗಳು ತನಕ ಕೊಬ್ಬರಿ ಎಣ್ಣೆಯನ್ನು ಬೆರಳಿನಿಂದ ಅದ್ದಿ ಚೀಪಿಸುತ್ತಾರೆ. ಮತ್ತೊಮ್ಮೆ ಕೊಬ್ಬರಿ ಎಣ್ಣೆ ಮೈಗೆಲ್ಲ ಲೇಪಿಸಿ ಮೊದಲ ನೀರೆರೆಯುತ್ತಾರೆ. ನಂತರ ಮೈಗೆಲ್ಲಾ ಉಜ್ಜಿ ಎಣ್ಣೆ ಸ್ನಾನ ಮಾಡಿಸುತ್ತಾರೆ. ಸೂಲಗಿತ್ತಿ ಹೆಂಗಸು ಮಣೆಯ ಮೇಲೆ ಕುಳಿತು ಕಾಲುಗಳನ್ನು ನೀಡಿ ಮಗುವನ್ನು ಅಂಗಾತ ಮಲಗಿಸಿಕೊಂಡು ಮಗುವಿನ ಇಡೀ ದೇಹವನ್ನು ಚೆನ್ನಾಗಿ ಎಣ್ಣೆಯಿಂದ ನೀವಿದಾಗ ಮಗು ಕಿಟಾರನೆ, ಕಿರುಚಿದರೂ ಈ ಕ್ರಿಯೆಯನ್ನು ನಿಲ್ಲಿಸುವುದಿಲ್ಲ. ಮಗುವಿಗೆ ಹೀಗೆ ಮಾಡುವುದರಿಂದ ಅದರ ಕೈ, ಕಾಲು, ಸೊಂಟ ಭದ್ರವಾಗುತ್ತದೆ ಎಂಬ ನಂಬಿಕೆಯಿದೆ. ಅನಂತರ ಸ್ನಾನ ಮಾಡಿಸಿ, ಗುಡಾರದ ಒಳಗಡೆ ಹಳೇ ಸೀರೆಯಿಂದ ಮಾಡಿರುವ ಜೋಳಿಗೆಯಲ್ಲಿ ಮಗುವನ್ನು ಮಲಗಿಸಿ, ತೂಗುತ್ತಾಳೆ. ಮಗು ಹಠ ಮಾಡಿದರೆ ಜೋಗುಳ ಹಾಡು ಹೇಳುತ್ತಾಳೆ. ಗರ್ಭಿಣಿಗೆ ಗಡಿಗೆಯಲ್ಲಿ ಕಾಯಿಸಿದ ನೀರು ಹಾಕಿ, ಆಕೆಗೆ ಐದನೇ ದಿನದ ಸ್ನಾನದ ನೀರೆರೆಯುತ್ತಾರೆ. ಬಾಣಂತಿಗೆ ಕೊಡುವ ಆಹಾರ ಪದಾರ್ಥಗಳಲ್ಲಿ ಕಟ್ಟುನಿಟ್ಟಿನ ಕ್ರಮಗಳು ಇರುವುದಿಲ್ಲ. ಇತಂಹದೇ ಊಟ ಮಾಡಬೇಕೆಂಬ ನಿಯಮವಿಲ್ಲ. ಹೆಚ್ಚಾಗಿ ಭಿಕ್ಷೆ ಬೇಡಿ ತಿನ್ನುವ ಸಮುದಾಯ ಇರುವುದರಿಂದ ಕಟ್ಟುನಿಟ್ಟಿನ ಕ್ರಮಗಳು ಇರುವುದಿಲ್ಲ. ಬಿಸಿ ಮುದ್ದೆ ಮತ್ತು ಮಾಂಸದ ಸಾರು ಹೆಚ್ಚಾಗಿ

ಕೊಡುತ್ತಾರೆ. ಪ್ರತಿದಿನ ಕೊಬ್ಬರಿ, ಬೆಲ್ಲ ಮತ್ತು ತುಪ್ಪ ಮಿಶ್ರಣದೊಂದಿಗೆ ಪುಡಿ ಮಾಡಿ ದಿನಾಲೂ ಮುಂಜಾನೆ ಸಮಯದಲ್ಲಿ ತಿನ್ನಿಸುತ್ತಾರೆ. ಇದನ್ನು ಖಾರ ಎಂದು ಕರೆಯುತ್ತಾರೆ.[೬]

ಶಿಶು ಜನನದ ಒಂಬತ್ತನೆ ದಿನ ಮನೆಯ ಪಾತ್ರೆ ಪಡಗಗಳನ್ನು ತೊಳೆದು ಸ್ವಚ್ಛಗೊಳಿಸುತ್ತಾರೆ. ಗುಡಾರದಲ್ಲಿ ದುಂಬು, ಧೂಳು ಹೊಡೆದು ಕೆಲವೊಂದು ಪಾತ್ರೆಗಳನ್ನು ತಣ್ಣೀರು ಬಟ್ಟೆಯಿಂದ ಒರೆಸಿ ಸ್ವಚ್ಛಗೊಳಿಸುತ್ತಾರೆ. ಮಲುಗುವ ಕೌದಿಗಳು, ಹಳೇ ಸೀರೆಗಳನ್ನು ತೆಗೆದು ಹೊರಗಡೆ ಇಡುತ್ತಾರೆ. ಗುಡಾರದ ಕುಲದೇವತೆಗಳಾದ ಈರನಾಗಮ್ಮ, ಮುನಿಸ್ವಾಮಿ, ದುರುಗಮ್ಮ, ಮಾರಮ್ಮ ಮೂರ್ತಿ ಹೊರತೆಗೆದು, ತಮ್ಮ ಗುಡಾರದಲ್ಲಿ ನೆಲಸಾರಿಸಿ ಅದರ ಮೇಲೆ ದೇವರ ಮೂರ್ತಿಗಳನ್ನಿಡುತ್ತಾರೆ. ಬಾಣಂತಿ ಮಹಿಳೆಯು ದೇವರ ಗುಡಾರ ಪೂಜೆ ಮಾಡಿಸಿ, ಜನನ ಸೂತಕ ಕಳೆಯಿತೆಂದು ನಂಬುತ್ತಾರೆ.

### ೨. ನಾಮಕರಣ ಪದ್ಧತಿ

ಸಿಂಧೋಳ್ಳುರು ಇದನ್ನು ಹೆಸರಿಡುವುದು ಅಥವಾ ನಾಮಕರಣ ಎಂದೆಲ್ಲಾ ಕರೆಯುತ್ತಾರೆ. ಒಂಬತ್ತು ದಿನದಲ್ಲಿ ನಾಮಕರಣ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ತಾಯಿ ಮತ್ತು ಮಗುವಿಗೆ ಬಿಸಿ ನೀರಿನಲ್ಲಿ ಸ್ನಾನ ಮಾಡಿಸಿ, ದೇವರ ಗುಡಾರದಲ್ಲಿ ಹೆಸರಿಡುವ ಕಾರ್ಯಕ್ರಮ ಇರುತ್ತದೆ. ಇವರು ಹೆಚ್ಚಾಗಿ ಬೆಡಗಿಗೆ ಮತ್ತು ಕುಲದೇವತೆಗೆ ಅನುಗುಣವಾಗಿ ಹೆಸರು ಕರೆಯುತ್ತಾರೆ. ನಿದರ್ಶನಕ್ಕಾಗಿ ಕೆಲವು ಹೆಸರುಗಳನ್ನು ಗಮನಿಸಬಹುದು.

| ಬೆಡಗು ಹೆಸರು | ಮಗುವಿನ ಹೆಸರು |
|---|---|
| ರಾವುಲೋರ್ | ರಾವುಲೋಪ್ಪ |
| ದ್ಯಾನಮನೋರ್ | ದ್ಯಾನಮನಪ್ಪ |
| ಸಿಂದ್ಯಾಲೋರ್ | ಸಿಂಗಾರೆಪ್ಪ |
| ಚಿನ್ನಿನೋಳ್ | ಚಿನ್ನಿಸ್ವಾಮಿ |
| ಬಾದಾರೋಳ್ | ಬಾದಾರೋಲ್ |
| ಗಂಟೆ | ಗಂಟೆಪ್ಪ |
| ತುಮ್ಮಲೋರು | ತುಮ್ಮಲಮ್ಮ |

| ಕುಲದೇವತೆಗಳ ಹೆಸರು | ಮಗುವಿನ ಹೆಸರು |
|---|---|
| ದುರುಗಮ್ಮ | ದುರಗಮ್ಮ, ದುರುಗಪ್ಪ |
| ಮಾರಮ್ಮ | ಮಾರಮ್ಮ, ಮಾಯಪ್ಪ, ಮಾರಪ್ಪ |
| ಜಂಬಲಮ್ಮ | ಜಂಬಲಮ್ಮ, ಜಂಬಲಪ್ಪ |
| ಕೂಗಮ್ಮ | ಕೂಗಮ್ಮ, ಕೂಗಪ್ಪ |
| ಗಾಳೆಮ್ಮ | ಗಾಳೆಪ್ಪ, ಗಾಳೆಮ್ಮ |
| ಮುನಿಸ್ವಾಮಿ | ಮುನಿಯಪ್ಪ, ಮುನಿಸ್ವಾಮಿ, ಮುನಿರಾಲ್ |
| ಈರನಾಗಮ್ಮ | ಈರನಾಗಪ್ಪ, ಈರನಾಗಮ್ಮ, ಈರನಾಗೇಶ್ |

| | |
|---|---|
| ಪೋತರಾಜ | ಪೋತಪ್ಪ, ಪೋತಮ್ಮ, ಪೋತರಾಜ |
| ಕಾಳಿ | ಕಾಳಪ್ಪ, ಕಾಳಮ್ಮ |
| ಸುಂಕಲಮ್ಮ | ಸುಂಕಪ್ಪ, ಸುಂಕಮ್ಮ, ಸುಂಕ್ಲಪ್ಪ |

ಹೀಗೆ ಇತ್ಯಾದಿ ಹೆಸರುಗಳನ್ನಿಡುತ್ತಾರೆ. ಅವರವರ ಮನೆ ದೇವರುಗಳ ಹೆಸರುಗಳಿಡುವುದು ರೂಢಿ. ಹಾಗೆಯೇ ಅವರು ಸತ್ತ ಹಿರಿಯರ ಹೆಸರುಗಳನ್ನು ಇಟ್ಟುಕೊಳ್ಳುತ್ತಾರೆ. ಇಂದು ಆಧುನಿಕತೆಯ ಪ್ರಭಾವದಿಂದ ಅವರ ಹೆಸರುಗಳು ವಿದ್ಯಾಶ್ರೀ, ಪುಷ್ಪ, ರತ್ನ, ಇಂಧು, ರೇಖಾ, ಮಂಜುಳಾ, ಸೀಮಾ, ಇಷಾ, ರಾಖೇಶ್, ಸಚಿನ್, ನಾಗವರ್ಮ, ದುಂಡಿರಾಜ, ನಾಗರಾಜ್, ನಾಗೇಶ್, ರಾಜಪ್ಪ, ರಾಜಮ್ಮ, ಅಭಿ ಇತ್ಯಾದಿ ರೀತಿಯಲ್ಲಿ ಹೆಸರು ನವೀನವಾಗುತ್ತಿವೆ. ಮಗುವಿಗೆ ಹೆಸರಿಡುವಾಗ ಮಗುವಿನ ತಾಯಿಯ ತಾಯಿ ಅಂದರೆ ಹೆಣ್ಣಜ್ಜಿ ಪಾತ್ರ ಮುಖ್ಯವಾಗಿರುತ್ತದೆ. ಹೀಗೆ ನಾಮಕರಣ ಮುಗಿದ ಮೇಲೆ ಸೂಲಗಿತ್ತಿಗೆ ೯ ಸೇರು ಅಕ್ಕಿ, ೧೦೦ ಗ್ರಾಂ ಅಡಿಕೆ, ೧೦೦ ಎಲೆ ಮತ್ತು ೫೦ ರೂಪಾಯಿಗಳನ್ನು ಕಾಣಿಕೆಯಾಗಿ ನೀಡಲಾಗುವುದು ಹಾಗೂ ಸೂಲಗಿತ್ತಿಗೆ ಸಾಕೆನಿಸುವಷ್ಟು ಊಟ ಮತ್ತು ಸಾರಾಯಿ ಕುಡಿಸಿ, ಸಂತೋಷಪಡಿಸುತ್ತಾರೆ. ಸಂಜೆ ಕುಲದೈವಕ್ಕೆ ಪಾಯಸ, ಅನ್ನ, ಸಾಂಬರು ಮಾಡಿಸಿ ಉಟ ಮಾಡಿಸುತ್ತಾರೆ. ಹಿರಿಯರಿಗೆ ಸಾಯಂಕಾಲ ಸಮಯದಲ್ಲಿ ಸಾರಾಯಿಯನ್ನು ಕುಡಿಸುತ್ತಾರೆ. ಇದರ ಜೊತೆಯಲ್ಲಿ ಕೋಳಿ ಮಾಂಸದ ಅಡಿಗೆ ಮಾಡಿಸಿದ್ದು, ಗರ್ಭಿಣಿ ಮಹಿಳೆಗೆ ಕೋಳಿಮಾಂಸದ ತುಂಡುಗಳನ್ನು ತಿನ್ನಿಸುತ್ತಾರೆ. ಹೀಗೆ ಗುಡಾರದ ಹೆರಿಗೆ ಚಿತ್ರಣ ಹೊಸದಿನಗಳಲ್ಲಿ, ಹೊಸ ಜೀವವೊಂದನ್ನು ಅತ್ಯಂತ ಸಂಭ್ರಮಗಳಿಂದ ಸ್ವಾಗತಿಸುವ ಚಿತ್ರಣ ಸಿಂಧೋಳ್ಳು ಸಮುದಾಯದಲ್ಲಿ ಕಾಣಬರುತ್ತದೆ.

**ತೊಟ್ಟಿಲು ಶಾಸ್ತ್ರ :** ನಾಮಕರಣದ ದಿನವೇ ತೊಟ್ಟಿಲಿಗೆ ಹಾಕುವ ಶಾಸ್ತ್ರವನ್ನು ಮಾಡುತ್ತಾರೆ. ಗುಡಾರದ ಒಳಗಡೆ ಪೂರ್ವ ದಿಕ್ಕಿಗೆ ತೊಟ್ಟಿಲು ಕಟ್ಟಿರುತ್ತಾರೆ. ಅದಕ್ಕೆ ಹೂವು, ಹಸಿರು ಎಲೆಗಳಿಂದ ಸಿಂಗರಿಸಿ, ಬಗೆ ಬಗೆಯ ಹೂಗಳನ್ನು ಹರಡಿ ತೊಟ್ಟಿಲು ಕೆಳಗಡೆ ಬಾಣಂತಿಯನ್ನು ಕೂಡಿಸುತ್ತಾರೆ. ಎದುರುಗಡೆ ಪೂಜಾರಿ ತಮ್ಮ ಕುಲದೇವರನ್ನು ಪೂಜೆಮಾಡಿ, ತೊಟ್ಟಿಲಿಗೆ ಪೂಜೆ ಮಾಡುತ್ತಾರೆ.[೮] ನಂತರ ಮೂರು ಅಥವಾ ಐದು ಜನ ಮುತ್ತೈದೆಯವರು ಬಾಣಂತಿಗೆ ಸೆರೆಗಿನಲ್ಲಿ ಮೂರು ಪಾವು ಅಕ್ಕಿ ಹಾಕಿ, ಮಗುವನ್ನು ತೊಟ್ಟಿಲಲ್ಲಿಟ್ಟು ತೂಗುತ್ತಾರೆ. ಬಂದವರೆಲ್ಲ ಮಗುವಿನ ಕೈಗೆ ೫೦ ಪೈಸೆ., ೧ ರೂಪಾಯಿ ಪುಡಿಕಾಸು ಕೊಡುತ್ತಾರೆ. ಹಸು ಕಂದಮ್ಮನನ್ನು ಹಾಗೆ ನೋಡಬಾರದೆಂಬ ಸಂಪ್ರದಾಯ ಇವರಲ್ಲಿರುವುದರಿಂದ ಇದನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಾರೆ.

ತೊಟ್ಟಿಲುಶಾಸ್ತ್ರ ಎಲ್ಲಾ ಕಡೆಯ ಸಿಂಧೋಳ್ಳುರಲ್ಲಿ ಮಾಡುವುದು ಕಾಣಬರದೆ, ಕೆಲವಡೆಗಳಲ್ಲಿ ಮಾತ್ರ ಕಂಡುಬರುತ್ತದೆ. ಅಂದರೆ ಸ್ಥಿತಿವಂತರು ಮಾತ್ರ ತೊಟ್ಟಿಲು ಪೂಜೆ ಮಾಡಿಸುತ್ತಾರೆ. ಭಿಕ್ಷೆ ಬೇಡುವ ಕೂಲಿನಾಲಿ ಮಾಡುವವರಿಗೆ ಈ ಯಾವುದೂ ಸಾಧ್ಯವಿರುವುದಿಲ್ಲ. ಹೇಗೋ ನಡೆದು ಮಗು ಬೆಳೆದು ದೊಡ್ಡದಾಗುತ್ತದೆನ್ನುತ್ತಾರೆ.[೯]

**೩. ಋತುಮತಿ**

ಪ್ರಕೃತಿ ಮಡಿಲಿನಲ್ಲಿ ವಯಸ್ಸಿಗೆ ಬಂದಿರುವ ಹೆಣ್ಣು ಮಗಳೊಬ್ಬಳು ಋತುಮತಿಯಾಗುವುದನ್ನು ಸಿಂಧೋಳ್ಳುರು ನಮ್ಮ ಹುಡುಗಿ ಋತುಮತಿಯಾದಳು, ದೊಡ್ಡವಳಾದಳು, ಮೈನೆರೆದಳು ಇತ್ಯಾದಿ

ಹಲವಾರು ರೀತಿಯಾಗಿ ಹೇಳುತ್ತಾರೆ. ಈ ಸಂದರ್ಭದಲ್ಲಿ ನಡೆಯುವ ಕಾರ್ಯ ವಿಧಾನವೇ 'ಋತುಮತಿ' ಕಾರ್ಯ. ಋತುಮತಿಯಾದವಳಿಗೆ ಯಾರ ಕಣ್ಣಿಗೂ ಕಾಣದಂತೆ ಗುಡಾರ ಮತ್ತು ಮನೆಯಿಂದ ೬ ಅಡಿಗಳ ಅಂತರದಲ್ಲಿ ಸಣ್ಣದೊಂದು ಗುಡಾರ ಮಾಡಿ ಅದರಲ್ಲಿ ಕೂಡಿಸುವರು. ಋತುಮತಿಯ ತಂದೆ ತಾಯಿಗಳು ತಮ್ಮ ಸಂಬಂಧಿಕರಿಗೆ ಮೈನೆರೆದ ವಿಷಯವನ್ನು ಪ್ರಸ್ತಾಪಿಸುವರು. ಗುಡಾರ ಒಳಗಡೆಯಲ್ಲಿ ಹಳೇಚಾಪೆ, ಸೀಮೆಎಣ್ಣೆದೀಪ, ಕನ್ನಡಿ, ಬಟ್ಟೆಗಳು ಇರುವವು. ಅಂದಿನ ದಿವಸದಲ್ಲಿ ತಾಯಿ ಸಂಬಂಧಿಕರಲ್ಲಿ ಅನುಭವಿ ಮಹಿಳೆಯನ್ನು ಕರೆದುಕೊಂಡು ಋತುಮತಿಯಾದ ಹುಡುಗಿಯನ್ನು ಬಿಸಿ ನೀರಿನಿಂದ ಸ್ನಾನ ಮಾಡಿಸಿ, ಬಟ್ಟೆಗಳನ್ನು ಬದಲಾಯಿಸಿ, ಕೂಡಿಸುತ್ತಾರೆ. ಮೈನೆರೆದ ಹುಡುಗಿ ಮನೆಯಲ್ಲಿ ಓಡಾಡುವಂತಿಲ್ಲ, ಭಿಕ್ಷೆಬೇಡುವಂತಿಲ್ಲ, ಕೂಲಿ ಕೆಲಸ ಮಾಡುವಂತಿಲ್ಲ, ಬೇರೆಯವರನ್ನು ಮುಟ್ಟುವಂತಿಲ್ಲ.

**ಕುಲ ಪಂಚಾಯಿತಿ :** ಈ ದಿನದಂದು ಕುಲದೈವದವರ ಸಮ್ಮುಖದಲ್ಲಿ ಋತುಮತಿ ಪಂಚಾಯಿತಿ ನಡೆಯುವುದು. ಹುಡುಗಿಯ ತಂದೆ-ತಾಯಿ, ಸಂಬಂಧಿಕರು ಪಂಚಾಯಿತಿಯಲ್ಲಿ ಭಾಗವಹಿಸಿರುತ್ತಾರೆ.[೧೦] ಸಿಂಧೋಳ್ಳು ಮುಖ್ಯಸ್ಥನು ಕೆಲವೊಂದು ಪ್ರಶ್ನೆಗಳನ್ನು ಕೇಳುತ್ತಾ ಅದಕ್ಕೆ ಉತ್ತರವಾಗಿ ಹುಡುಗಿಯ ತಂದೆ-ತಾಯಿಗಳು ಪ್ರತಿಕ್ರಿಯಿಸುತ್ತಾರೆ.

ಸಿಂಧೋಳ್ಳು ಮುಖ್ಯಸ್ಥ : ಏನಪ್ಪಾ ನಿಮ್ಮ ಮಗಳು ದೊಡ್ಡವಳಾಗಿದ್ದಾಳಂತೆ ನೀವು ಕುಲ ಪಂಚಾಯಿತಿಗೆ ಏನು ಕೊಡುವಿರಿ? ಎಂದು ಕೇಳುತ್ತಾನೆ.[೧೧]

ಋತುಮತಿ ತಂದೆ ತಾಯಿ: (ಇಬ್ಬರೂ ನಿಂತುಕೊಂಡು) ಕುಲದ ಒಡೆಯಾ ನೀವು ಏನು ಹೇಳುವಿರೋ, ನಾವ್ ಅದನ್ನು ಕೊಡಲು ಸಿದ್ಧ ಎಂದು ಹೇಳುತ್ತಾರೆ.[೧೨]

ಸಿಂಧೋಳ್ಳು ಮುಖ್ಯಸ್ಥ : ಕುಲದ ಮುಖ್ಯಸ್ಥ ತಮ್ಮ ಗುಡಾರ ದೇವರುಗಳಾದ ಈರನಾಗಮ್ಮ ಮತ್ತು ಮುನಿಸ್ವಾಮಿಗೆ ನಮಸ್ಕರಿಸಿ, ಆತ ಜೋರಾಗಿ ಕೇಳ್ರಪ್ಪ, ಕುಲದ ದೈವದ ಪ್ರಕಾರ ೨೦೦ ರೂಪಾಯಿಗಳು ಕೊಡಬೇಕೆಂದು ಆಜ್ಞೆ ಮಾಡುತ್ತಾನೆ.

ಋತುಮತಿ ತಂದೆ ತಾಯಿ: ಈ ಆಜ್ಞೆ ಮೇರೆಗೆ ಒಪ್ಪಿಕೊಂಡು ೨೦೦ ರೂ.ಗಳನ್ನು ನೀಡಿ, ಕುಲದ ಮುಖ್ಯಸ್ಥರಿಗೆ ನಮಸ್ಕರಿಸುತ್ತಾರೆ.

ಹುಡುಗಿ ಋತುಮತಿ ಸುದ್ದಿಯನ್ನು ಎಲ್ಲರಿಗೂ ತಿಳಿಸುತ್ತಾರೆ. ಮದುವೆಗೆ ಮೊದಲು ಮೈನೆರೆದರೆ ೧೧ ದಿನಗಳವರೆಗೂ ಕುರ್ಚಿಯ ಮೇಲೆ ಕೂಡಿಸುತ್ತಾರೆ. ಕೆಲವರು ಅಂದೇ ಪಂಚಾಂಗ ತೆಗೆಯಿಸಿ, ಅದಕ್ಕನುಗುಣವಾಗಿ ೯ ದಿನಗಳವರೆಗೆ ಕುರ್ಚಿಯ ಮೇಲೆ ಕೂಡಿಸುತ್ತಾರೆ. ಐದು ಮಂದಿ ಮುತ್ತೈದೆಯವರು ಬಂದು ಅವಳ ತಲೆಗೆ ಎಣ್ಣೆ ಹಚ್ಚಿ ಸ್ನಾನ ಮಾಡಿಸುತ್ತಾರೆ. ಹಿರಿಯ ಮುತ್ತೈದೆ ಮಹಿಳೆಯೂ ಅವಳಿಗೆ ನೀರೆಯುತ್ತಾಳೆ. ಇದನ್ನು "ಮುಟ್ಟರೆಯುವುದು"[೧೩] ಎಂದು ಕರೆಯುತ್ತಾರೆ. ಆಕೆಗೆ ಸಿಹಿ ಊಟ ಮಾಡಿಸಿದ ನಂತರ ಋತುಮತಿಗೆ ಗುಡಾರದ ಹೊರಗಡೆಯ ಕುರ್ಚಿ ಮೇಲೆ ಕೂಡಿಸುತ್ತಾರೆ. ಗುಡಾರದ ಗೆಳತಿಯರೆಲ್ಲರೂ ಪ್ರತಿದಿನ ಸಿಹಿ ಊಟ ತಂದು, ಶೃಂಗಾರ ಮಾಡಿ, ಆರತಿ ಬೆಳಗಿ ಹೋಗುತ್ತಾರೆ. ಅಣ್ಣ ತಮ್ಮನ ಪತ್ನಿಯರು ಆರತಿ ಬೆಳಗಿಸಿ, ಋತುಮತಿಗೆ ಸಂಬಂಧಿಸಿದಂತೆ ಹಾಡುಗಳನ್ನು ಸಾಮೂಹಿಕವಾಗಿ ಹಾಡುತ್ತಾರೆ.[೧೪] ಅಲ್ಲಿ ಬಂದಿರುವಂತಹ ಮಹಿಳೆಯರಿಗೆ ಅಡಿಕೆ ಎಲೆಗಳು ಕಾಣಿಕೆಯಾಗಿ ನೀಡುತ್ತಾರೆ.

ಕೊನೆಯ ದಿನದಲ್ಲಿ ಶಿಶು ಜನನ ಕಾಲದಲ್ಲಿ ಮಾಡಿದಂತೆಯೇ ಮನೆ ಮತ್ತು ಗುಡಾರವನ್ನು ಗುಡಿಸಿ, ಸಗಣಿಯಿಂದ ಸಾರಿಸಿ ಪಾತ್ರೆ ಸಾಮಾನುಗಳನ್ನು ಒರೆಸಿ, ಹಳೆಮಡಕೆಗಳನ್ನು ಹೊರಗೆಸೆದು ಹೊಸ ಮಡಕೆಗಳನ್ನು ಬಳಸುತ್ತಾರೆ. ಅಲ್ಯೂಮಿನಿಯಂ ಪಾತ್ರೆಗಳನ್ನು ಚೆನ್ನಾಗಿ ತೊಳೆದು ಮತ್ತೆ ಬಳಸಿ ಕೊಳ್ಳುತ್ತಾರೆ. ಒಂಬತ್ತನೆಯ ದಿನ ಒಸಗೆ ಹಾಕುವ ಶಾಸ್ತ್ರ ಮಾಡುತ್ತಾರೆ. ಇದನ್ನು "ಎಬ್ಬಿಸುವ ಶಾಸ್ತ್ರ" ಎಂದು ಕರೆಯುತ್ತಾರೆ.[೯೫] ಸ್ನಾನ ಮಾಡಿಸಿ, ಹೊಸ ಬಟ್ಟೆಯುಡಿಸಿದ ಬಳಿಕ ತಮ್ಮ ಕುಲದೇವತೆಗಳಿಗೆ ನಮಸ್ಕರಿಸುತ್ತಾಳೆ. ರಾತ್ರಿ ಸಮಯದಲ್ಲಿ ಋತುಮತಿ ಹುಡುಗಿಯನ್ನು ಗುಡಾರದ ಹೊರಗಡೆ ಕುರ್ಚಿ ಮೇಲೆ ಕೂಡಿಸುತ್ತಾರೆ. ಆಕೆಯ ಮುಂದೆ ಕೊಬ್ಬರಿ, ಬೆಲ್ಲ, ಹೂವು, ತೆಂಗಿನಕಾಯಿ, ಎಲೆ, ಅಡಿಕೆ, ಕಳಸ ಇತ್ಯಾದಿ ವಸ್ತುಗಳನ್ನು ತಟ್ಟೆಗಳಲ್ಲಿ ತುಂಬಿಡುತ್ತಾರೆ. ಸಿಂದ್ಯಾಲೋಳ್ ಮುತ್ತೈದೆರು ಸಾಸಿವೆ ಮತ್ತು ಆರತಿ ಬೆಳಗಿಸಿ ತಮ್ಮ ಪತಿರಾಯನ ಹೆಸರನ್ನು ಹೇಳಿ, ದ್ಯಾಮನೋರು ಬೆಡುಗಿಗೆ ಆರತಿ ಬೆಳಗಲು ತಿಳಿಸುತ್ತಾರೆ. ಹೀಗೆ ಎಲ್ಲಾ ಬೆಡಗಿನವರು ಆರತಿಯನ್ನು ಹುಡುಗಿ ಮುಖದಿಂದ ಇಳಿಸುತ್ತಾರೆ. ಋತುಮತಿ ಹುಡುಗಿ ಆರತಿಗೆ ನಮಸ್ಕರಿಸುತ್ತಾಳೆ. ಸಮುದಾಯದ ಸಂಬಂಧಿಕರು ಋತುಮತಿ ಹುಡುಗಿಗೆ (ಹಣದ ರೂಪದಲ್ಲಿ ಮುಯ್ಯಿ) ನೀಡುವ ಕಾರ್ಯಕ್ರಮ ನಡೆಯುವುದು. ಅಂದು ಹೆಣ್ಣು ನಿಶ್ಚಯ ಮಾಡಿಕೊಳ್ಳಲು ಅವರು ಸಂಬಂಧಿಕರು ಸೋದರ ಮಾವ ಬರುವನು. ಸೋದರ ಮಾವ ಬಂದು ಅಂದಿನ ನಿಶ್ಚಯ ಮಾಡಿಕೊಳ್ಳುವ ಖರ್ಚಿನ ಭಾರ ತಾನೇ ಭರಿಸಿಕೊಳ್ಳುತ್ತಾನೆ. ರಾತ್ರಿ ಸಮಯದಲ್ಲಿ ತಾತ್ಕಾಲಿಕವಾಗಿ ಎಲ್ಲರ ಸಮಕ್ಷಮದಲ್ಲಿ ಹುಡುಗಿಯ ನಿಶ್ಚಿತಾರ್ಥ ಮಾಡಿಕೊಳ್ಳುವನು. ನಂತರ ಸಾಮೂಹಿಕವಾಗಿ ಸಿಹಿ ಊಟ ಮಾಡಿ ಮುಂಜಾನೆ ತಮ್ಮ ತಮ್ಮ ಊರುಗಳಿಗೆ ಪ್ರಯಾಣ ಮಾಡುವರು.

೪. ವಿವಾಹ

ಜೀವನದಲ್ಲಿ ಅತ್ಯಂತ ಮಹತ್ವದ ಘಟ್ಟವೆಂದರೆ ವಿವಾಹ. ವಿವಾಹವು ಒಂದು ಸ್ಥಾಪಿತ ಸಂಸ್ಥೆ ಯಾಗಿದ್ದು, ವ್ಯಕ್ತಿಗತ ಪ್ರಾಮುಖ್ಯತೆಯೊಂದಿಗೆ ಸಾಮಾಜಿಕ ಮಹತ್ವಹೊಂದಿದೆ. ಭಾರತೀಯ ಕುಟುಂಬದ ಉಗಮದಿಂದಲೂ ಮಾನವ ತನ್ನ ವಂಶದ ಬೆಳವಣಿಗೆಗಳೊಂದಿಗೆ 'ವಿವಾಹ' ಎಂಬ ಸಂಪ್ರದಾಯ ವೊಂದನ್ನು ಸಮುದಾಯದಲ್ಲಿ ರೂಢಿಗೆ ತಂದನು. ಇದರ ಆಧಾರ ಶಿಲೆಯಾದ ವಿವಾಹವೂ ವಿಕಸಿತವಾಗಿ ಹಲವು ಹಂತಗಳನ್ನು ಹಾದು ಬಂದ ಇತಿಹಾಸ ರೋಚಕವಾಗಿದೆ. ವಿವಾಹ ದೇಶದ ಎಲ್ಲೆಡೆ ಪ್ರಚಲಿತವಿರುವ ಒಂದು ಸಂಸ್ಕಾರವಿಧಿ. ಪ್ರಪಂಚದ ಹೆಚ್ಚಿನ ಸಮಾಜ ಅಥವಾ ಸಮುದಾಯಗಳಲ್ಲಿ ಒಂದಲ್ಲ ಒಂದು ರೀತಿಯ ವಿವಾಹ ಪದ್ಧತಿ ಇದೆ. ವಿವಾಹ ಪದ್ಧತಿಯಲ್ಲಿ ಹಾಗೂ ವಿವಾಹದ ನಿಯಮಗಳಲ್ಲಿ ಅನೇಕ ಬಗೆಯ ವೈವಿಧ್ಯಗಳಿವೆ.[೯೬]

ಮಾನವನ ಇಂದ್ರಿಯ ಸಹಜ ಬಯಕೆಗಳನ್ನು ಸಕ್ರಮಗೊಳಿಸಿ, ಸಂತಾನಾಭಿವೃದ್ಧಿಗೆ ಎಡೆಮಾಡಿಕೊಂಡ ತೊಟ್ಟಿಲು ಎಂದು ಕರೆಯಬಹುದು. ಅದಕ್ಕೆ ನೈತಿಕ ಚೌಕಟ್ಟು ಒದಗಿಸುವಲ್ಲಿ ಮದುವೆ ಬಹುಮುಖ್ಯ ಪಾತ್ರವನ್ನು ವಹಿಸುತ್ತದೆ. ಸಾಮಾಜಿಕ ಜೀವನದಲ್ಲಿ ಮದುವೆ ಭದ್ರ ಬುನಾದಿಗೆ ನಾಂದಿ ಹಾಡಿತು. ಹಾಗೂ ಶತ ಶತಮಾನಗಳಿಂದ ರೂಢಿಸಿಕೊಂಡು ಬಂದು ಮದುವೆಗಳಲ್ಲಿನ ಆಚರಣೆಗಳು ಇಂದು ಬದಲಾಗಿದೆ. ಮದುವೆಯಲ್ಲಿ ಆಚರಿಸುವ ಅನೇಕ ಆಚರಣೆ, ಸಂಪ್ರದಾಯಗಳು ಮಾಯವಾಗಿವೆ.

ಕೆಲವೊಂದು ಹೊಸರೂಪ ಪಡೆದುಕೊಂಡಿವೆ. ಆ ಪ್ರದೇಶದ ಪ್ರಬಲವಾದ ಸಂಸ್ಕೃತಿಯ ಪ್ರಭಾವಗಳಿಂದಲೂ ಆಚರಣೆಗಳಲ್ಲಿ ಬದಲಾವಣೆ ಕಂಡುಬರುವುದು ಸಹಜವಾಗಿದೆ. ಬುಡಕಟ್ಟು ಸಮುದಾಯಗಳು ತಮ್ಮ ಮಂಗಲಕರವಾದ ಆಚರಣೆಗಳನ್ನು ತಮ್ಮ ಪರಿಸರ ಮತ್ತು ನಾಗರೀಕತೆಯ ಪ್ರಭಾವದಿಂದ ಪರಿಷ್ಕರಿಸಿ ಕೊಂಡಿವೆ ನಿಜ. ಆದರೆ ಅದಕ್ಕೆ ಸಂಬಂಧಿಸಿದ ಆಚರಣೆಗಳು ಇಂದು ಜೀವಂತವಾಗಿವೆ.

ಸಿಂಧೋಳ್ಳು ಸಮುದಾಯದಲ್ಲಿ ಮದುವೆಗೆ ಸಂಬಂಧಿಸಿದ ಆಚರಣೆಗಳು ವೈಶಿಷ್ಟ್ಯ ಪೂರ್ಣವಾಗಿವೆ. ಇವರು ಮದುವೆಯನ್ನು 'ಅಕ್ಕಿಕಾಳು ಶಾಸ್ತ್ರಂ', 'ಮಂಗಲಕಾರ್ಯ', 'ತಾಳಿಕಟ್ಟುವ ಕಾರ್ಯ' ಎಂಬ ಪದಗಳಿಂದ ಕರೆಯುತ್ತಾರೆ. ಮದುವೆ ಎಂಬುದು ಇವರ ಬದುಕಿನಲ್ಲಿ ಕಡ್ಡಾಯವಾಗಿದೆ. ಸಮುದಾಯದಲ್ಲಿ ಪ್ರತಿಯೊಬ್ಬ ಬಿಸಿರಕ್ತ ಯುವಕ ಯುವತಿಯರು ಮದುವೆ ಆಗಲೇಬೇಕು. ಇವರಲ್ಲಿ ಮದುವೆ ಇಲ್ಲದೆ ಏಕಾಂಗಿಯಾಗಿ ಸತ್ತರೆ, ಮುಂದಿನ ಜನ್ಮ ಪುನರ್ಜನ್ಮವು ಇಲ್ಲವೆಂದು ಭಾವಿಸಿಕೊಳ್ಳುತ್ತಾರೆ. ಅಂಥವರಿಗೆ ಸ್ವರ್ಗದ ಬಾಗಿಲು ಕೂಡ ತೆಗೆಯುವುದಿಲ್ಲ ಎಂಬುದು ಈ ಸಮುದಾಯದವರ ನಂಬಿಕೆಯಾಗಿದೆ. ಇಂತಹ ಅವೈಜ್ಞಾನಿಕ ನಂಬಿಕೆಯಲ್ಲಿ ಕುಲದ ಮುಖ್ಯಸ್ಥನು ನಮ್ಮ ಸಮುದಾಯ ಮಕ್ಕಳು ಮದುವೆಯಾಗಿ ಮಕ್ಕಳು ಮರಿಗಳಾಗಿ ನಮ್ಮ ವಂಶ ಉದ್ಧಾರ ಮಾಡಿದರೇ ಸಾಕು ಎಂಬುದು ಇವರ ಪ್ರಬಲ ಆಶಯವಾಗಿದೆ. (ಎಂದು ಬಳ್ಳಾರಿಯ ಸಿಂಗಾರೆಪ್ಪ ಅವರ ಅಭಿಪ್ರಾಯವಾಗಿದೆ) ಮದುವೆ ಮಾಡಿಕೊಂಡವರು ಸಮಾಜದಲ್ಲಿ ಜವಾಬ್ದಾರಿಯುತ ನಾಗರೀಕರಾಗುತ್ತಾರೆಂಬ ಆಶಯ ಅವರದು.

**ವಧು ನೋಡುವುದು :** ಮಗನಿಗೆ ಮದುವೆ ಮಾಡಬೇಕೆಂದು ಯೋಚನೆ ಮಾಡಲು ಪ್ರಾರಂಭಿಸಿದಾಗ ಸಮುದಾಯದ ಮುಖ್ಯಸ್ಥರು ಅನುರೂಪವಾದ ವಧುವಿನ ಅನ್ವೇಷಣೆ ಆರಂಭಿಸುತ್ತಾರೆ. ಸಂಸಾರ ಎಂಬ ರಥ ಸಾಗಿಸಲು ಹೆಣ್ಣು ಗಂಡು ಎರಡೂ ಮುಖ್ಯ ಎಂಬುದನ್ನು ತಿಳಿದುಕೊಂಡೇ ಸಂಬಂಧಗಳನ್ನು ಬೆಳೆಸಲು ಯತ್ನಿಸುವರು.[೧೭] ಗಂಡಿನ ಕಡೆಯವರು ವಧು ನೋಡಲು ಗುಡಾರ ಮನೆಗೆ ಬರಲೇಬೇಕು. ಒಮ್ಮೆ ವಧುವನ್ನು ನೋಡಲು ಬರುವುದನ್ನು ಮುಂಚಿತವಾಗಿಯೇ ತಿಳಿಸಿಬಿಡುವ ಪರಿಪಾಠ ಸಿಂಧೋಳ್ಳು ಸಮುದಾಯದಲ್ಲಿದೆ. ಅಲ್ಲದೇ ತೀರಾ ಹತ್ತಿರ ಬಂಧುಬಳಗದವರಿಂದ ವಧು ನೋಡಲು ಬರುವ ಸಮಾಚಾರವನ್ನು ಮೊದಲೇ ತಿಳಿಸಿ, ಅವರಲ್ಲಿಗೆ ಹೋಗುವುದು ಇದೆ. ಹಾಗೆಯೇ ಮೂಲ ರಕ್ತ ಸಂಬಂಧಿಕರನ್ನು ಹುಡುಕಿಕೊಂಡು ಮದುವೆ ಯಾಗುವುದುಂಟು. ವರನ ಕಡೆಯವರೇ ವಧು ನೋಡಲು ಮುಂಚಿತವಾಗಿ ಬರುವರು. ವಧುವಿನ ಗುಣಗಳು, ಒಳ್ಳೆತನ, ಮನೆತನ, ಬೀಗರಾಗುವ ವ್ಯಕ್ತಿಯ ಯೋಗ್ಯತೆ ಮತ್ತು ಸರಿಸಮಾನವಾದ ಅಂತಸ್ತು ಘನತೆ ಇವೆಲ್ಲ ಲೆಕ್ಕಕ್ಕೆ ಬರುತ್ತವೆ. ಸಂಬಂಧಿಕರು ಮದುವೆಗೆ ಸಿದ್ಧವಿರುವ ವಧುವಿನ ಮಾಹಿತಿಯನ್ನು ನೀಡುತ್ತಾರೆ. ಇವರಲ್ಲಿ ಅಕ್ಕನ ಮಗಳು ಮಾವನ ಮಗಳು ಹೆಚ್ಚಿನ ರೀತಿಯಲ್ಲಿ ಸಂಬಂಧಗಳನ್ನು ಬೆಳೆಸಿಕೊಳ್ಳುತ್ತಾರೆ. ಇವರಲ್ಲಿ ವೈವಾಹಿಕ ಸಂಬಂಧ ಬೆಳೆಸಲು ದೂರ-ದೂರದಿಂದ ವಧು ತರಬೇಕೆಂಬ ವಿಚಾರ ಮೂಡುತ್ತದೆ. ಆದ್ದರಿಂದ "ಹತ್ತಿರ ದಿಂದ ಭಿಕ್ಷೆಬೇಡಿ ತರಬೇಕು, ದೂರದಿಂದ ಹೆಣ್ಣು ತರಬೇಕು"[೧೮] ಎಂಬ ಮಾತನು ಹೇಳುತ್ತಾರೆ.

**ವೀಳ್ಯಶಾಸ್ತ್ರ ಅಥವಾ ನಿಶ್ಚಿತಾರ್ಥ :** ಸಾಮಾಜಿಕ ಜೀವನದಲ್ಲಿ ವೀಳ್ಯದೆಲೆಗಳಿಗೆ ಬಹಳ ಪ್ರಾಮುಖ್ಯತೆ ಇದೆ. ಅದು ಮದುವೆಯಂತಹ ಸಂದರ್ಭಗಳಲ್ಲೂ ವೀಳ್ಯದೆಲೆ ಇಲ್ಲದೆ ಹೋದಾಗ, ಮುಹೂರ್ತ

ಮೀರುತ್ತಿದ್ದರೂ ವೀಳ್ಯದೆಲೆ ತರಿಸಿ, ಮದುವೆ ಕಾರ್ಯಕ್ರಮದಲ್ಲಿ ಮುಂದಾಗುತ್ತಾರೆ. ಕೆಲವೊಂದು ಕಾರ್ಯಕ್ರಮಗಳಲ್ಲಿ ವೀಳ್ಯದೆಲೆ ಸಿಗದೇ ಹೋದರೆ, ಜಗಳಕ್ಕೆ ನಿಲ್ಲುತ್ತಾರೆ. ವೀಳ್ಯದೆಲೆ ಇರದಿದ್ದರೂ ತರಿಸಿ, ಕೊಡಬೇಕು ಎನ್ನುವ ಮಾತು ಆಡದೇ ಇರಲಾರರು. ಕೆಲವು ಅಹಿತಕರ ಘಟನೆಗಳಿಂದ ವೀಳ್ಯದೆಲೆ ದೊರೆಯದೆ ಹೋದಾಗ ಹಳೆಯ ಮುಖ್ಯಸ್ಥರು (ಯಜಮಾನರು) ಜೀವವನ್ನೇ ಬಿಟ್ಟ ಕೆಲವು ನಿದರ್ಶನಗಳುಂಟು.[೧೯] ಗಂಡಿನ ಕಡೆಯವರು ಪ್ರಥಮಬಾರಿಗೆ ವಧುವಿನ ತಂದೆ ತಾಯಿಗಳಿಗೆ, ಕುಲದ ಮುಖ್ಯಸ್ಥರುಗಳಿಗೆ ವೀಳ್ಯದೆಲೆ ಹಂಚುತ್ತಾರೆ. ಮಾರನೆಯ ದಿನದಲ್ಲಿ ಗಂಡಿನ ಕಡೆಯವರು ವಧುವಿನ ಗುಡಾರ ಮುಂದೆ ಚಿಕ್ಕ ಗುಡಾರ ಹಾಕಿಕೊಳ್ಳುತ್ತಾರೆ. ಇದನ್ನು ವಧುವಿನ ಖಾಯಂ ಮಾಡುವ ಗುಡಾರ ಎಂದು ಕರೆಯುತ್ತಾರೆ.

ಕುಲದ ಮುಖ್ಯಸ್ಥರು ನಿಶ್ಚಿತಾರ್ಥ ಪಂಚಾಯಿತಿ ನಡೆಸುವರು. ಇದರಲ್ಲಿ ಎಲ್ಲಾ ಸಂಬಂಧಿಕರು ಭಾಗವಹಿಸಿ, ಮದುವೆ ವಿಷಯದ ಬಗ್ಗೆ ಪ್ರಸ್ತಾವನೆ ನಡೆಯುವುದು.

ಕುಲದ ಮುಖ್ಯಸ್ಥ : ಏಕಪ್ಪಾ ಇಲ್ಲಿ ಗುಡಾರ ಹಾಕಿರುವೆ? ಎಂದು ಕೇಳುತ್ತಾರೆ.

ವರನ ತಂದೆ : ಇಲ್ಲ ನನ್ನಪ್ಪ, ನನ್ನ ಮಗನಿಗೆ ಸೊಸೆಯನ್ನು ಮಾಡಿಕೊಳ್ಳುವುದರ ಸಲುವಾಗಿ ಗುಡಾರ ಹಾಕಿರುವೆ.

ಕುಲದ ಮುಖ್ಯಸ್ಥ : ನಿನ್ನ ಮಗ ಭಿಕ್ಷೆ ಬೇಡುತ್ತಾನೆ. ಮೈಯಿಗೆ ಚಾಟಿ ಹೊಡೆದು ಕೊಳ್ಳುತ್ತಾನೆ, ಕೈಯಲ್ಲಿ ರಕ್ತ ಚಿಮ್ಮಿಸಿಕೊಳ್ಳುತ್ತಾನೆಯೇ ಎಂದು ಪ್ರಶ್ನೆಗಳನ್ನು ಕೇಳುತ್ತಾನೆ.

ವರನ ತಂದೆ : ಗಜಗಾತ್ರ ಹೊಂದಿರುವ ನನ್ನ ಮಗ ಎಲ್ಲಾ ಕೆಲಸ ಮಾಡುತ್ತಾನೆ. ನನ್ನ ಒಡೆಯ ಎಂದು ಹೇಳುತ್ತಾನೆ.

ಕುಲದ ಮುಖ್ಯಸ್ಥ : ಏನಾಪ್ಪ ನಿಮ್ಮ ಮಗಳನ್ನು ಸೊಸೆಯಾಗಿ ಮಾಡಿಕೊಳ್ಳುವುದರ ಸಲುವಾಗಿ ನಿಮ್ಮ ಮಾವಂದಿರು ಬಂದಿರುತ್ತಾರೆ. ಒಪ್ಪಿಗೆಯನ್ನು ನೀಡುತ್ತೀಯ ಎಂದು ಕೇಳುತ್ತಾರೆ. ಹೆಣ್ಣಿನ ತಂದೆ ತಾಯಿಗಳು ಮೊದಲನೇ ಬಾರಿಗೆ ಒಪ್ಪಿಗೆಯನ್ನು ಕೊಡುವುದಿಲ್ಲ.

ಕುಲದ ಮುಖ್ಯಸ್ಥ : ಏನಮ್ಮ ಮಗಳೇ ಒಪ್ಪಿಗೆಯೇನಮ್ಮ?

ವಧುವಿನ ತಾಯಿ : ನಮ್ಮ ಯಾಜಮಾನ್ರ ಒಪ್ಪಿಗೆಯಾದರೆ ನನ್ನೆ ಒಪ್ಪಿಗೇನೇ

ಕುಲದ ಮುಖ್ಯಸ್ಥ : ಏನೋ ಮಗ ನಿನಗೆ ಒಪ್ಪಿಗೇನೇ?

ವಧುವಿನ ತಂದೆ : ನನ್ ಹೆಂಡ್ತಿಗೆ ಒಪ್ಪಿಗೆಯಾದರೆ ನನ್ಗೆ ಒಪ್ಪಿಗೇನೇ ಎಂದು ನುಡಿಯುತ್ತಾರೆ.

ಆದರಂತೆ ಬಂಧು ಬಳಗದವರು ಒಪ್ಪಿಗೆಯನ್ನು ಪಡೆದ ನಂತರ ಕುಲಪಂಚಾಯಿತಿ ಮುಖ್ಯಸ್ಥ ರಾವುಲೋಳ್ ಹೆಣ್ಣು ದ್ಯಾಮನೋರು ಹುಡುಗನಿಗೆ ಕೈಸೇರುವುದು ಎಂದು ಜೋರಾಗಿ ಹೇಳುತ್ತಾರೆ. ಸಮುದಾಯದ ಮುಖ್ಯಸ್ಥರು ನಿಶ್ಚಿತಾರ್ಥ ಬಲು ಜಾಣ್ಮೆಯಿಂದ ನಿರ್ವಹಿಸುತ್ತಾನೆ.[೨೦] ವಧು ನೋಡುವ

ಸಂದರ್ಭದಲ್ಲಿ ನಡೆಯುವ ಈ ಮಾತುಕತೆಗಳು ಗಂಡು ಹೆಣ್ಣಿನವರು ಪರಸ್ಪರ ಕೊಟುತೆಗೆದುಕೊಳ್ಳುವ ಬಗ್ಗೆಯೆ ಇರುತ್ತವೆ. ಇವರಲ್ಲಿ ಗಂಡಿನ ಕಡೆಯವರು ವಧುವಿನ ತಂದೆ ತಾಯಿಗಳಿಗೆ ೧೦ ರೂಪಾಯಿಗಳು ದಕ್ಷಿಣೆ ನೀಡಬೇಕಾಗುತ್ತದೆ. ಗಂಡಿನವರು ವಧುವಿಗಾಗಿ ಸೀರೆ, ಬಿಳಿಸೀರೆ, ಬೆಂಡೋಲಿ, ಬಂಗಾರದ ಮಾಂಗಲ್ಯಸರ, ಚೈನಾ, ಕಡಗ, ಕಾಲುಂಗುರ, ಸೊಂಟದಪಟ್ಟಿ, ಕೈಕಡಗ ಇತ್ಯಾದಿಗಳನ್ನು ಹಿರಿಯರ ಸಮ್ಮುಖದಲ್ಲಿ ಕೊಡಬೇಕು. ಇತ್ತೀಚಿನ ದಿನಗಳಲ್ಲಿ ಹೆಣ್ಣಿನ ಕಡೆಯವರು ವರನಿಗೆ ವ್ಯಾಪಾರಕ್ಕಾಗಿ ಸೈಕಲ್ಲು, ವಾಚ್, ಒಂದು ಜೊತೆ ಬಟ್ಟೆ, ಪಾತ್ರೆಸಾಮಾನುಗಳನ್ನು, ಕೊಡುವುದುಂಟು. ಇದನ್ನು ಗಮನಿಸಿದರೆ ವರದಕ್ಷಿಣೆ ಪದ್ಧತಿ ಸಿಂಧೋಳ್ಳು ಸಮುದಾಯದಲ್ಲಿ ಆಕ್ರಮಿಸಿಕೊಂಡಿದೆ ಎಂಬುದು ವೇದ್ಯವಾಗುತ್ತದೆ. ಹಾಗೂ ವಧುವಿನ ಕಡೆಯವರು ಹೊಸ ಜೀವನ ಪದ್ಧತಿಯಲ್ಲಿ ಕೊಡಲೇ ಬೇಕಾಗಿರುವುದು ಅನಿವಾರ್ಯ ವಾಗಿದೆ. ಈ ಎಲ್ಲವುಗಳ ಒಪ್ಪಿಗೆಯಾದ ಬಳಿಕ ಪರಸ್ಪರರು ವೀಳ್ಯವನ್ನು ಬದಲಿಸಿಕೊಳ್ಳುವರು. ವೀಳ್ಯದ ಬದಲಿಕೆಯ ನಂತರ ಯಾವುದೇ ಕಾರಣಕ್ಕೆ ಮದುವೆ ನಿಲ್ಲುವಂತಿಲ್ಲ. ನಿಶ್ಚಿತಾರ್ಥದ ದಿನದಂದೆ ಮದುವೆಯ ದಿನವನ್ನು ನಿರ್ಧರಿಸುತ್ತಾರೆ. ನಿಶ್ಚಿತಾರ್ಥದ ಬಳಿಕ ಬಂಧುವರ್ಗದವರಿಗೆ ಊಟೋಪಚಾರ ವಿರುತ್ತದೆ. ಈ ನಿಶ್ಚಿತಾರ್ಥ ಕಾರ್ಯವು ಮದುವೆಯ ಪೂರ್ವದ ಮಹತ್ವದ ಘಟ್ಟವಾಗಿರುತ್ತದೆ.

**ಮದುವೆಯ ಚಪ್ಪರ :** ಮದುವೆಯ ಚಪ್ಪರ ಗುಡಾರದ ಮುಂದುಗಡೆ (ಮುಂಭಾಗದಲ್ಲಿ) ಹಾಕುತ್ತಾರೆ. ಕೆಲವರಿಗೆ ಮನೆಗಳು ಇದ್ದರೆ ತಮ್ಮ ಮನೆಯ ಮುಂಭಾಗದಲ್ಲಿ ಚಪ್ಪರ ಹಾಕಿಕೊಳ್ಳುತ್ತಾರೆ. ಈ ಜನರು ಅತಿ ಸಂಭ್ರಮದಿಂದ, ಉತ್ಸಾಹದಿಂದ ಎಲ್ಲಾ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುತ್ತಾರೆ. ಮದುವೆ ಚಪ್ಪರದಲ್ಲಿ ತೆಂಗಿನಮರದ ಗರಿಗಳು ಬಿದಿರು ಕಟ್ಟಿಗೆಗಳನ್ನು ಬಳಸುತ್ತಾರೆ. ಬಿದಿರು ಕಂಬಗಳಿಗೆ ಪೂಜೆ ಮಾಡಿ, ಕಂಕಣದ ದಾರವನ್ನು ಕಟ್ಟುತ್ತಾರೆ. ಹೆಚ್ಚಿನದಾಗಿ ಚಪ್ಪರಗಳು ದೇವಿ ಗುಡಾರದಲ್ಲಿ ಹಾಕಿ ಕೊಳ್ಳುತ್ತಾರೆ.

**ನೀರೆರೆಯುವ ಶಾಸ್ತ್ರ :** ಗುಡಾರ ಅಥವಾ ಮದುವೆಯ ಮನೆಯಲ್ಲಿ ಗಂಡು ಹೆಣ್ಣಿಗೆ ನೀರು ಹಾಕುವ ಶಾಸ್ತ್ರ ಇದೆ. ಇವರು ನೀರೆರೆಯುವ ಶಾಸ್ತ್ರ ಎಂತಲೇ ಕರೆಯುತ್ತಾರೆ.[೨೧] ಇಲ್ಲಿ ಗಂಡು ಹೆಣ್ಣು ಮಕ್ಕಳಿಗೆ ಸಂಬಂಧಿಸಿದ ಒಂದೇ ಒನಕೆಯ ಮೇಲೆ ಕುಳಿತು ಸ್ನಾನ ಮಾಡುವುದು ಕಂಡುಬರುತ್ತದೆ. ಗಂಡು ಹೆಣ್ಣು ಕುಳಿತಿರುವ ನಾಲ್ಕು ದಿಕ್ಕುಗಳಿಗೆ ಚಿಕ್ಕ ಗಡಿಗೆಗಳು ಇಟ್ಟಿರುತ್ತಾರೆ. ಗಡಿಗೆಯ ಸುತ್ತಲೂ ದಾರ ಸುತ್ತುತ್ತಾರೆ. ಅವರು ಸುತ್ತಿದನಂತರ ಮುತ್ತೈದೆ ಮಹಿಳೆ ಒಂದು ಚೊಂಬಿನಲ್ಲಿ ನೀರನ್ನು ತೆಗೆದು ಕೊಂಡು, ವೀಳ್ಯದಲೆಯಿಂದ ಮೂರು ಬಾರಿ ಚಿಮುಕಿಸುತ್ತಾಳೆ. ಹೀಗೆ ಮಾಡಿದ ನಂತರ ಪಾತ್ರೆಯಲ್ಲಿರುವ ಬಿಸಿನೀರು ಹಾಕಿ, ಸ್ನಾನ ಮಾಡಿಸುತ್ತಾರೆ. ನಂತರ ಸುರಿಗೆ ಸುತ್ತಿದ ಗಡಿಗೆಯಲ್ಲಿರುವ ನೀರು ತೆಗೆದುಕೊಂಡು, ಗಂಡು ಹೆಣ್ಣಿನ ತಲೆ ಮೇಲೆ ಹಾಕುತ್ತಾರ. ನಂತರ ಗಂಡು ಹೆಣ್ಣನ್ನು ತಮ್ಮ ತಮ್ಮ ಗುಡಾರದಲ್ಲಿ ಕರೆದುಕೊಂಡು ಅಕ್ಕಭಾವ ಸಿಂಗರಿಸುತ್ತಾರೆ ಬಿಳಿಧೋತರ, ತುಂಬು ತೋಳಿನಾಂಗಿ, ಬಿಳಿ ಮುಂಡಾಸು ಧರಿಸಲು ಕೊಡುತ್ತಾರೆ. ನಂತರ ಸುಮಂಗಲೆಯರು ಆರತಿಯೊಂದಿಗೆ ಕಂಬಳಿ ಹತ್ತಿರ ಕರೆತರುತ್ತಾರೆ.

**ಕಂಬಳಿಶಾಸ್ತ್ರ :** ಚಪ್ಪರದ ಮುಂಭಾಗದಲ್ಲಿ ಕರಿಯ ಕಂಬಳಿ ಹಾಸಿರುತ್ತಾರೆ. ಅದರ ಮೇಲೆ ಅಕ್ಕಿಯಿಂದ ಚಿಕ್ಕ ಚಿಕ್ಕ ರಾಶಿಗಳನ್ನು ಮಾಡಿರುತ್ತಾರೆ. ಹಾಗೆಯೇ ಒನಕೆಯನ್ನು ಇಟ್ಟಿರುತ್ತಾರೆ. ಒನಕೆಗೆ ಕಂಕಣ ದಾರ ಕಟ್ಟಿರುತ್ತಾರೆ. ಕಂಬಳಿ ಮೇಲೆ ವೀಳ್ಯದ ಎಲೆಗಳು, ಅಡಿಕೆಗಳು, ಬೆಲ್ಲದ ಚೂರುಗಳು

ಇತ್ಯಾದಿ ಸಾಮಾನುಗಳು ಇರುವುದರಿಂದ ಕಂಬಳಿಶಾಸ್ತ್ರವೆಂದು ಕರೆಯುತ್ತಾರೆ. ಸೋದರ ಮಾವನು ವಧುವನ್ನು ಎತ್ತಿಕೊಂಡು ಬರುತ್ತಾನೆ. ಬಂದ ನಂತರ ಕಂಬಳಿ ಮೇಲೆ, ಒನಕೆ ಮೇಲೆ ಕುಳಿತುಕೊಳ್ಳುವರು. ಕುಲದ ಮುಖ್ಯಸ್ಥನು ಪುರೋಹಿತನಾಗಿರುತ್ತಾನೆ ಮತ್ತು ಪುರೋಹಿತನ ಮಡದಿ ಬುರ್ರ ಬುರ್ರ ವಾದ್ಯದೊಂದಿಗೆ ನಿಂತಿರುತ್ತಾಳೆ. ಮಾಂಗಲ್ಯ ಕಟ್ಟುವ ಮೊದಲು ಪುರೋಹಿತ, ಹೆಣ್ಣಿನ ತಂದೆ ತಾಯಿಗಳು, ವಧುವರರಿಗೆ ಸಲಹೆಗಳನ್ನು ಹೇಳುತ್ತಾರೆ.

**ಮಾತುಗಾರಿಕೆ ಪ್ರಾರಂಭ**

ಪುರೋಹಿತ : ಏನಪ್ಪಾ, ನಿಮ್ಮ ಮಗಳನ್ನು ದ್ಯಾಮನೂರು ಹುಡುಗನಿಗೆ ಒಪ್ಪಿಸುವುದೇ.[೨೨]

ಹೆಣ್ಣಿನ ತಂದೆ ತಾಯಿ : ನಾವು ಒಪ್ಪಿಕೊಂಡಿದ್ದೇವೆ ಸ್ವಾಮಿ.[೨೩]

ಪುರೋಹಿತ : ರಾವುಲೋಳ್ ಹುಡುಗಿ ದ್ಯಾಮನೂರು ಕುಲಕ್ಕೆ ಹೋಗುವುದು ಎಂದು ಜೋರಾಗಿ ಹೇಳುವನು.

ಪುರೋಹಿತನ ಮಡದಿ : ಬುರ್ರ ಬುರ್ರ ವಾದ್ಯವನ್ನು ಬಾರಿಸುತ್ತಾಳೆ.[೨೪]

ಪುರೋಹಿತ : ಎದ್ದು ನಿಂತು ಮಾಂಗಲ್ಯವನ್ನು ಸಮುದಾಯದ ಜನರಿಗೆ, ಕುಲದ ಗುರು ಹಿರಿಯರ ಕೈಗೆ ಮೂತ್ತೈದೆ ಮಹಿಳೆಯರ ಕೈಗೆ ಮುಟ್ಟಿಸಿ

ತಾಳಿ ಕಟ್ಟೋಕೆ ಕುಲದ ಅಪ್ಪಣೆನಾ?
ತಾಳಿ ಕಟ್ಟೋಕೆ ಕುಲದ ಅಪ್ಪಣೆನಾ?
ತಾಳಿ ಕಟ್ಟೋಕೆ ಕುಲದ ಅಪ್ಪಣೆನಾ?

ಸಮುದಾಯ ಜನರು : "ಅಪ್ಪಣೆ ಸ್ವಾಮಿ" ಎಂದು ಸಮ್ಮತಿ ಸೂಚಿಸುತ್ತಾರೆ.

ಪುರೋಹಿತ ಹೆಂಡತಿ : ಬುರ್ರ ಬುರ್ರ ವಾದ್ಯವನ್ನು ಅತ್ಯಂತ ತೀವ್ರಗತಿಯಲ್ಲಿ ಬಾರಿಸುತ್ತಾಳೆ.

ಅಪ್ಪಣೆ ಕೇಳಿದ ನಂತರ ಮಾಂಗಲ್ಯವನ್ನು ಮದುಮಗನ ಕೈಗೆ ಕೊಡುವನು. ಮದುಮಗನು ಮಾಂಗಲ್ಯವನ್ನು ವಧುವಿಗೆ ಕೊರಳಿಗೆ ಕಟ್ಟಿದ ನಂತರ ಒನಕೆ ಮೇಲೆ ಕೂಡಿಸುವರು. ಬಳಿಕ ಎಲ್ಲರೂ ವಧೂ-ವರರಿಗೆ ಅಕ್ಷತೆಯನ್ನು ಹಾಕುವರು. ನಂತರ ಪುರೋಹಿತ ವಧುವರರಿಗೆ ಸಲಹೆಗಳನ್ನು ಹೇಳುತ್ತಾನೆ. ವಾದ್ಯ ಭಾರಿಸಿಕೊಂಡು ತಿಳಿಸುತ್ತಾನೆ.

**ವರನಿಗೆ ಹೇಳುವ ಮಾತುಗಳು**

ಪುರೋಹಿತ : ಮದ್ಲಿಂಗಪ್ಪ ನಿನ್ನ ಹೆಂಡತಿಯನ್ನು ಚೆನ್ನಾಗಿ ನೋಡಿಕೊಳ್ಳಬೇಕು.

ಮಡದಿ : ಬುರ್ರ ಬುರ್ರ ವಾದ್ಯದೊಂದಿಗೆ, ಬಾಲು ಬೇಲು........

ಪುರೋಹಿತ : ಸಿನಿಮಾ ನೋಡಬಾರದು

ಮಡದಿ : ಬಾಲು ಬೇಲು.....

ಪುರೋಹಿತ : ಪರಸ್ತ್ರೀಯರ ಸಂಗವನ್ನು ಮಾಡಬಾರದು

ಮಡದಿ : ಬಾಲು ಬೇಲು.......

ಪುರೋಹಿತ : ಬೀಡಿ ಸೇದುವುದು, ನಾಟಕ ನೋಡುವುದು ಬಿಡಬೇಕು

ಮಡದಿ : ಬಾಲು ಬೇಲು.....

ಪುರೋಹಿತ : ಕೆಟ್ಟವರ ಸಂಗವನ್ನು ಮಾಡಬಾರದು

ಮಡದಿ : ಬಾಲು ಬೇಲು.......

ಪುರೋಹಿತ : ಹೆಂಡತಿ ಜತೆಯಲ್ಲಿ ಚೆನ್ನಾಗಿ ದುಡಿಯಬೇಕು

ಮಡದಿ : ಬಾಲು ಬೇಲು......

ಪುರೋಹಿತ : ತಂದೆ ತಾಯಿಗಳನ್ನು ಚೆನ್ನಾಗಿ ಆರೈಕೆ ಮಾಡಿಕೊಳ್ಳಬೇಕು, ತಿರಸ್ಕಾರ ಮಾಡಬಾರದು

ಮಡದಿ : ಬಾಲು ಬೇಲು......

**ವಧುವಿಗೆ ಹೇಳುವ ಮಾತುಗಳು**

ಪುರೋಹಿತ : ನೋಡವ್ವಾ ಗಂಡನ ಬಗ್ಗೆ ಮಕಾಕಟ್ಕಬೇಡಾ

ಮಡದಿ : ಬಾಲು ಬೇಲು........

ಪುರೋಹಿತ : ಪಕ್ಕದ ಮನೆಗೆ ಹೋಗಬೇಡಾ

ಮಡದಿ : ಬಾಲು ಬೇಲು........

ಪುರೋಹಿತ : ಅತ್ತೆ ಮಾವಂದಿರಿಗೆ ಒಳ್ಳೆಯ ಹೆಸರು ತರಬೇಕು

ಮಡದಿ : ಬಾಲು ಬೇಲು........

ಪುರೋಹಿತ : ಗಂಡನನ್ನು ಬಲುಪ್ರೀತಿಯಿಂದ ಕಾಣಬೇಕು

ಮಡದಿ : ಬಾಲು ಬೇಲು..........

ಪುರೋಹಿತ : ಮಕ್ಕಳನ್ನು ಚೆನ್ನಾಗಿ ನೋಡಿಕೊಳ್ಳಬೇಕು

ಮಡದಿ : ಬಾಲು ಬೇಲು.........

ಪುರೋಹಿತ : ಯಾರ ಮಾತೂ ಕೇಳಬಾರದು

ಮಡದಿ : ಬಾಲು ಬೇಲು.........

ಹೀಗೆ ಉಪದೇಶದ ಮಾತುಗಳು ಮುಗಿದ ನಂತರ ವಧು ವರರು ಪುರೋಹಿತ ಮತ್ತು ಆತನ ಮಡದಿಗೆ ನಮಸ್ಕರಿಸಿ, ಗಂಡಿನ ಗುಡಾರದ ಒಳಗಡೆ ಹೋಗುತ್ತಾರೆ.

ಊಟದ ವ್ಯವಸ್ಥೆ : ಮಾಂಗಲ್ಯ ಕಾರ್ಯಕ್ರಮ ಮುಗಿಯುತ್ತಿದ್ದಂತೆಯೇ ಬಂದವರೆಲ್ಲ ಊಟದ ಕಡೆಗೆ ನಡೆಯುತ್ತಾರೆ. ಇವರು ತಮ್ಮ ತಮ್ಮ ಕುಟುಂಬಕ್ಕೆ ಅನುಸಾರವಾಗಿ ಊಟದ ವ್ಯವಸ್ಥೆಯನ್ನು

ಮಾಡಿಕೊಂಡಿರುತ್ತಾರೆ. ಸಿಂಧೋಳ್ಳು ಜನರು ಭಿಕ್ಷೆಯನ್ನು ನಂಬಿ ಬದುಕುವಂತಹ ಜನರು ಇವರಿಗೆ ಫಲಾವ್, ಗೀರೈಸ್, ಕುರ್ಮ, ಸಮೋಸ್ ಇತ್ಯಾದಿ ಊಟದ ಪರಿಕಲ್ಪನೆಯ ಬಗೆಗೆ ಮಾಹಿತಿ ಇದ್ದರೂ, ಇವರಿಗೆ ತಿನ್ನುವ ಹಂಬಲವಿಲ್ಲ. ಇವರಲ್ಲಿ ಸರಳ ಊಟದ ವ್ಯವಸ್ಥೆ ಇರುತ್ತದೆ. ಅವರು ಹೆಚ್ಚಿನದಾಗಿ ಗೋಧಿ ಪಾಯಸ, ಅನ್ನ, ತಿಳಿಸಾಂಬರು ಮತ್ತು ಬದನೆಕಾಯಿ ಪಲ್ಲೆ ಉಪಯೋಗಿಸುತ್ತಾರೆ. ಕುಲದ ಮುಖ್ಯಸ್ಥರು ಮಧ್ಯಪಾನ ಮಾಡಿಕೊಂಡು ಬಂದಿರುವುದರಿಂದ 'ಬದನೆಕಾಯಿ ಪಲ್ಲೆ' ಉಪ್ಪಿನ ಕಾಯಿಗಿಂತ ಬಲುರುಚಿ ಅಂತ ಹೇಳುತ್ತಾರೆ.[೨೫] ನಂತರ ಗುಡಾರ ಮುಂದೆ ಬುರ್‍ರ ಬುರ್‍ರ ವಾದ್ಯದೊಂದಿಗೆ ನವ ಯುವಕರು ಕುಣಿಯುತ್ತಿರುತ್ತಾರೆ.

**ಬಾಗಿಲು ತಡೆಯುವ ಶಾಸ್ತ್ರ :** ಗಂಡಿನ ಅಕ್ಕ ಅಥವಾ ತಂಗಿ ಗುಡಾರ ಒಳಹೋಗುವ ಸಹೋದರನನ್ನು ತಡೆಯುತ್ತಾಳೆ. ತಡೆದು ನನ್ನ ಮಗನಿಗೆ ನಿನ್ನ ಮಗಳನ್ನು ಕೊಡಬೇಕು ಎಂದು ಕೇಳುತ್ತಾಳೆ. ಆದ ಒಂದೇ ಸಲಕ್ಕೆ ಒಪ್ಪದೆ ಏನೇನೋ ಕೊಡುತ್ತೇನೆ ಎಂದು ಹೇಳಿದರೂ ಆಕೆ ಅದಕ್ಕೆ ಒಪ್ಪುವುದಿಲ್ಲ. ನಿನಗೆ ಹುಟ್ಟುವ ಮಗ ಅಥವಾ ಮಗಳು ನನ್ನ ಮನೆಯ ಅಳಿಯ/ಸೊಸೆಯಾಗಲು ಒಪ್ಪಿದರೆ ಮಾತ್ರ ಬಿಡುತ್ತೇನೆಂದು ಪಟ್ಟು ಹಿಡಿಯುತ್ತಾಳೆ. ಆತ ಹಾಗೇ ಆಗಲಿ ಎಂದು ಒಪ್ಪಿಗೆ ಕೊಟ್ಟಮೇಲೆ ಒಳಗೆ ಬಿಡುತ್ತಾರೆ. ಅಂದು ರಾತ್ರಿ ಸೋಬನ ಕಾರ್ಯಕ್ರಮ ಇರುವುದು.

**ಪ್ರಸ್ಥ ಅಥವಾ ಸೋಬನ :** ಮದುವೆಗೆ ಮುಂಚೆ ಹೆಣ್ಣು ಋತುಮತಿಯಾಗಿದ್ದರೆ ಮದುವೆಯ ದಿನ ಅಥವಾ ಮಾರನೇ ದಿನವೇ ಸೋಬನ ಕಾರ್ಯವನ್ನು ಮಾಡುತ್ತಾರೆ. ಮೈನೆರೆದಾಕೆಯನ್ನು ಹೊರಗೆ ಹಾಕುವ ಶಾಸ್ತ್ರ ಮಾಡಿರದಿದ್ದರೆ ಅರ್ಥಾತ್ ಮೈನೆರೆದ ಕನ್ಯೆಗೆ ಒಸಗೆಶಾಸ್ತ್ರ ಮಾಡಿರದಿದ್ದರೆ ಸೋಬನ ನಡೆಯುವುದಿಲ್ಲ. ಒಂದು ದಿನವನ್ನು ಗೊತ್ತುಪಡಿಸಿ ಪ್ರಸ್ಥ ಮಾಡಿಕೊಡುತ್ತಾರೆ. ಆ ಗೊತ್ತುಪಡಿಸಿದ ದಿನ ಗಂಡನು ಸಹಿತ ಫಲತಂಬೂಲಗಳನ್ನು ತೆಗೆದುಕೊಂಡು ಹೆಣ್ಣಿನ ಗುಡಾರಕ್ಕೆ ಬರುತ್ತಾರೆ. ಹಾಗೆ ತಂದ ವಸ್ತುಗಳನ್ನು ತಟ್ಟೆಗಳಲ್ಲಿ ತುಂಬಿ ಹೆಣ್ಣು-ಗಂಡುಗಳ ಮುಂದೆ ಇಟ್ಟು ಆರತಿ ಬೆಳಗಿದ ಮೇಲೆ ಎಲ್ಲರಿಗೂ ಸಿಹಿ ಊಟದ ವ್ಯವಸ್ಥೆಯಾಗಿರುತ್ತದೆ. ನಂತರ ಗಂಡು ಹೆಣ್ಣುಗಳನ್ನು ಒಂದು ಗುಡಾರದಲ್ಲಿ ಮೊದಲ ರಾತ್ರಿ ಎಂದು ಬಿಡುವುದುಂಟು.

**ಹೆಣ್ಣು ಕಳುಹಿಸುವುದು :** ಮಾರನೇ ಬೆಳಿಗ್ಗೆ ಹೆಣ್ಣನ್ನು ಗಂಡನ ಮನೆಗೆ ಕಳುಹಿಸಿಕೊಡುತ್ತಾರೆ.

**೫. ಶವ ಸಂಸ್ಕಾರ**

ಮಾನವನ ಹುಟ್ಟು ಹಲವಾರು ಹಂತಗಳಲ್ಲಿ ಪಸರಿಸಿ, ಏನೆಲ್ಲಾ ಕರ್ಮಾದಿಗಳು ಮುಗಿದ ನಂತರ ಮರಣ ಬರುವುದು ನಿಶ್ಚಯ. ಇದು ಪ್ರತೀಒಬ್ಬರಿಗೂ ತಿಳಿದ ಸಂಗತಿಯಾದರೂ, 'ಮರಣ' ಎಂದಾಕ್ಷಣ ವಾಸಿಸುವ ಎಲ್ಲರಿಗೂ ಭಯವಾಗುತ್ತದೆ. ದಿನದ ಸಮಯದಲ್ಲಿ ಈ ಪ್ರಸಂಗ ಕ್ಷಣ ಎದುರಾದಾಗ ಮಾನವನ ವರ್ತನೆಗಳು ಹೇಗಿರುತ್ತವೆ ಎಂಬುದು ನಿಜಕ್ಕೂ ಕುತೂಹಲಕಾರಿ. ಮನುಷ್ಯನ ಪಂಚೇಂದ್ರೀಯಗಳು ಸ್ಥಬ್ದವಾಗಿ ನಿಂತು ಹೋದಾಗ, ಆತ್ಮ ಏನಾಗುತ್ತದೆ ಎಂಬ ವಿಚಾರ ಅಪ್ರಸ್ತುತ. ಸೃಷ್ಟಿ ಪರಿಕಲ್ಪನೆಯಲ್ಲಿ ಸ್ವರ್ಗ ನರಕಗಳು ಎಂಬ ಹೇಳಿಕೆಗಳು ಅವೈಜ್ಞಾನಿಕವಾಗಿದೆ. ಆದರೂ ಆ ಮರಣ ಸಂದರ್ಭದಲ್ಲಿ ಪ್ರತಿಯೊಂದು ಧರ್ಮ, ಜಾತಿಯ ಜನರೂ ತಮ್ಮ ಸಮುದಾಯದ ಮನುಷ್ಯನ

ಸಂಸ್ಕಾರ ಪದ್ಧತಿಗಳಲ್ಲಿ ತಮ್ಮದೇ ಆದ ಸಂಪ್ರದಾಯ ಆಚರಣೆಗಳನ್ನು ಅಳವಡಿಸಿಕೊಂಡು ತಮ್ಮ ಸಂಸ್ಕೃತಿ ನೆಲೆಯಲ್ಲಿ ಅನೂಚಾನವಾಗಿ ನಡೆಸಿಕೊಂಡು ಬರುತ್ತಿದ್ದಾರೆ. ಬುಡಕಟ್ಟು ಸಮುದಾಯದಲ್ಲಂತೂ ವಾರ, ತಿಂಗಳುಗಟ್ಟಲೆ, ಭಯ ಭಕ್ತಿ, ಅಗಲಿಕೆಯ ನೋವು ಹಾಗೂ ಸತ್ತವರು ದೇವರಾಗುತ್ತಾರೆಂಬ ನಂಬಿಕೆಗಳಿಂದ ಈ ಸಾವಿನ ಸಂಪ್ರದಾಯಗಳನ್ನು ನಡೆಸುತ್ತಾರೆ. ಸಾಮಾನ್ಯವಾಗಿ ಮರಣ ಸಂಸ್ಕಾರ ಆಚರಣೆಗಳು "ನಾಗರಿಕ ಸಮಾಜದ ಕೆಲವು ಆಚರಣೆಗಳನ್ನು ಅನುಸರಿಸುತ್ತಿದ್ದರೂ ಮೂಲ ಸಂಸ್ಕೃತಿಯನ್ನು ಬಿಟ್ಟು ಕೊಡುತ್ತಾರೆಂದು ಅಷ್ಟು ಸುಲಭವಾಗಿ ಒಪ್ಪಲಾಗದು".[೨೬]

ಭಾರತೀಯ ಸಂದರ್ಭದಲ್ಲಂತೂ ಈ ಆಚರಣೆಗಳ ಕುರಿತಂತೆ ವಿಶೇಷ ಪ್ರಾಮುಖ್ಯತೆ ಇದೆ. "This rite is an smportant as all other Rites Depassage, Because They believe that through the "Samakaras" after the birth one conquers this earth and through the Samskaras after the Death, the heaven"[27]

ಮರಣ ಒಂದು ಪ್ರಕೃತಿ ದತ್ತವಾದ ಕ್ರಿಯೆ. ಆದರೆ ಮಾನವ ಬದುಕಿರುವಾಗ ಸಮಾಜದ ಒಂದು ಅಂಗವಾಗಿರುತ್ತಾನೆ. ಅಲ್ಲಿನ ಸಂಸ್ಕೃತಿಗಳನ್ನು ಸಾಮಾಜಿಕ ಸಂಬಂಧಗಳನ್ನೂ, ಸಮಾಜದ ಏರಿಳಿತಗಳನ್ನೂ ಅನುಭವಿಸುತ್ತಾನೆ. ಆ ಅನುಭವಗಳನ್ನು ಅವನಿಗೆ ನೀಡಿದ ಸಮಾಜವೊಂದಿರುತ್ತದೆ ಎಂಬುದನ್ನು ಮರೆಯು ವಂತಿಲ್ಲ. ವ್ಯಕ್ತಿ ಸತ್ತರೂ, ಸತ್ತಿದ್ದಕ್ಕೂ, ಪ್ರತಿಕ್ರಿಯಿಸುತ್ತಾ ಅವು ಹಾಗೆಯೇ ಉಳಿದು ಕೊಂಡಿರುತ್ತದೆ. ಈ ಹಿನ್ನೆಲೆಯಲ್ಲಿ ಮರಣಕ್ಕೆ ಸಂಬಂಧಿ ಮಾಡಲಾಗುವ ವಿಧಿವಿಧಾನಗಳನ್ನೇ ಮರಣಸಂಸ್ಕಾರ ಎಂದು ಕರೆಯಲಾಗುವುದು. ನಂತರ ಮರಣ ಹೊಂದಿದ ವ್ಯಕ್ತಿಯ ಆತ್ಮಕ್ಕೆ ಶಾಂತಿ ಸಿಗಲೆಂದು ಉತ್ತರ ಕ್ರಿಯೆಗಳನ್ನು ಆಚರಿಸುತ್ತಾರೆ. ಅಂತ್ಯ ಸಂಸ್ಕಾರದ ವಿಧಿಗಳಲ್ಲಿ ವ್ಯಕ್ತಿಯೊಬ್ಬ ಮರಣ ಹೊಂದಿದ ಕ್ಷಣದಿಂದ ಹಿಡಿದು ಸತ್ತವನ ಆತ್ಮವನ್ನು ಪೂರ್ವಜರ ಆತ್ಮಗಳೊಂದಿಗೆ ಸೇರಿಸುವವರೆಗೆ ಹಲವಾರು ಆಚರಣೆಗಳನ್ನು ಮಾಡುವುದು ಈ ಸಮುದಾಯದಲ್ಲಿ ರೂಢಿಯಲ್ಲಿವೆ.

ಸಿಂಧೋಳ್ಳುರು ಮರಣೋನ್ಮುಖವಾದ ವ್ಯಕ್ತಿ ತುಂಬಿದ ಗುಡಾರದಲ್ಲಿ ಇರಬೇಕೆಂದು ಬಯಸುತ್ತಾರೆ. ಆದುದರಿಂದಲೇ ಸಾಯುವ ಮುನ್ನ ಸದರಿ ವ್ಯಕ್ತಿಯನ್ನು ಮನೆಯಲ್ಲಿ ಇಲ್ಲವೆ ಗುಡಾರದ ಒಳಗಡೆ ಮಲಗಿಸಿ, ಕುಲದ ಬಂಧು ಬಳಗದವರು, ಅಕ್ಕ ಪಕ್ಕದವರು, ಹಾರೈಕೆ ಮಾಡುತ್ತಾರೆ. ಅವನ ಜೀವನವಿರುವ ವರೆಗೂ ಅವನ ಬಯಕೆಗಳು, ಆಸೆಗಳು, ಸಾಧ್ಯವಿದ್ದಷ್ಟು ಪೂರೈಸಿಕೊಡಲು ಪ್ರಯತ್ನಿಸುತ್ತಾರೆ. ವ್ಯಕ್ತಿಯು ಇಷ್ಟಪಡಬಹುದಾದ ಆಹಾರ ಪದಾರ್ಥಗಳು-ಪಾನೀಯಗಳನ್ನು ತಯಾರಿಸಿಕೊಡಲು ಪ್ರಯತ್ನಿಸುತ್ತಾರೆ. ಇನ್ನೇನು ಸಾಯುವ ಗಳಿಗೆ ಸಮೀಪಿಸಿತೆಂದಾಗ ಕುಲದ ಬಂಧು-ಬಳಗದವರು ಕಣ್ಣು ತುಂಬ ನೋಡಲು ಬಯಸುತ್ತಾನೆ. ತನಗೆ ಪ್ರಿಯರಾದವರನ್ನು ನೋಡಿದ ಕ್ಷಣದಲ್ಲಿ ಕೈ ಹಿಡಿದು ಮಾತನಾಡಿಸುತ್ತಾನೆ. ಮರಣ ಸಮೀಪಸಿತೆಂದು ಖಚಿತವಾದಾಗ ಬಾಯಿಗೆ ಬಲತ್ಕಾರವಾಗಿಯಾದರೂ ನೀರು ಹೊಯ್ಯುತ್ತಾರೆ. ನಂತರ ಗುಡಾರದ ಹೊರ ಭಾಗದಲ್ಲಿ ತಂದು, ಹರಕು ಚಾಪೆಯ ಮೇಲೆ ಅಥವಾ ಹರಕು ಗೋಣಿ ಚೀಲದ ಮೇಲೆಯೋ, ಕೌದಿ ಮೇಲೆಯೋ ಮಲಗಿಸುತ್ತಾರೆ.

ವ್ಯಕ್ತಿಯ ಎರಡು ಕೈಗಳನ್ನು ತನ್ನ ದೇಹದ ಮೇಲೆ ತಂದು, ಜೋಡಿಸುತ್ತಾರೆ. ರಾತ್ರಿಯಲ್ಲಿ

ಹೆಣವನ್ನು ಮನೆಯಲ್ಲಿಯೇ ಇಟ್ಟುಕೊಳ್ಳುವಂತಹ ಸಂದರ್ಭದಲ್ಲಿ ವ್ಯಕ್ತಿಯ ದೇಹದ ಮೇಲೆ ಕುಡಗೋಲು, ಇಲ್ಲವೆ ಕಬ್ಬಿಣದ ಒಂದು ವಸ್ತುವನ್ನು ಇಡುತ್ತಾರೆ. ಹೀಗೆ ಕಬ್ಬಿಣದ ಹರಿತವಾದ ಆಯುಧವನ್ನು ಹೊಟ್ಟೆಯ ಮೇಲಿಟ್ಟರೆ ವ್ಯಕ್ತಿ ದೆವ್ವ ಆಗುವುದಿಲ್ಲವೆಂಬ ನಂಬಿಕೆ ಇವರಲ್ಲದೆ. ಹೆಣದ ಮೇಲೆ ಹಳೇ ಬಟ್ಟೆಯನ್ನು ಹೊದಿಸುತ್ತಾರೆ. ತಲೆ ಹತ್ತಿರ ದೀಪ ಹತ್ತಿಸಿ ಇಡುತ್ತಾರೆ. ನಂತರ ಗುಡಾರದ ಅಂಗಳದಲ್ಲಿ ಮೂರು ಕಲ್ಲಿನ ಒಲೆ ಹಾಕಿ, ಹೊಸ ಮಣ್ಣಿನ ಮಡಿಕೆಯಲ್ಲಿ ಮೂರು ಪಾವು ಅಕ್ಕಿ ಹಾಕಿ, ಅನ್ನ ಮಾಡುತ್ತಾರೆ. ಹಳ್ಳದ ಸಾಲಿನಿಂದ ಎರಡು ಕಳ್ಳಿಬಡಿಗೆಗಳನ್ನು ಕಡಿದು ತಂದು ಅದರಿಂದ ಆರು ಅಡಿ ಉದ್ದದ, ಮೂರು ಅಡಿ ಅಗಲದ ಸೆದಿಗೆಯನ್ನು ಏಣಿಯಕಾರದಲ್ಲಿ ಕಟ್ಟುತ್ತಾರೆ. ಕುಲದ ಮುಖ್ಯಸ್ಥರು ಪಕ್ಕದ ಪಟ್ಟಣಕ್ಕೆ ಹೋಗಿ ಹೆಣದ ಮೇಲೆ ಹೊದಿಸಲು ಹೊಸದಾದ ಬಿಳಿ ಬಟ್ಟೆ, ಎಲೆ, ಅಡಿಕೆ, ಊದುಬತ್ತಿ, ತೆಂಗಿನಕಾಯಿ, ಹೂವು, ಮೂರು ಸೇರು ಮಂಡಕ್ಕಿ, ಕುಂಕುಮ ಇತ್ಯಾದಿ ವಸ್ತುಗಳನ್ನು ತಂದಿಟ್ಟುಕೊಳ್ಳುತ್ತಾರೆ. ನಂತರ ಪಾತ್ರೆಯಲ್ಲಿ ನೀರು ಕಾಯಿಸಿ, ಶವವನ್ನು ಸಾಬೂನು ಮೂಲಕ ತೊಳೆದು, ಇರುವ ಬಟ್ಟೆಯನ್ನು ಉಡಿಸುತ್ತಾರೆ. ಹಣೆಗೆ ಕುಲದೇವರ ಭಂಡಾರ ಹಚ್ಚಿ, ತಲೆಗೆ ಎಣ್ಣೆ ಹಚ್ಚುವರು. ಶವದ ತಲೆಯ ಹತ್ತಿರ ತೆಂಗಿನಕಾಯಿ ಒಡೆದು ಇರಿಸಲಾಗುವುದು. ಸತ್ತವರ ಶವದ ಮೇಲೆ ಹೂವು, ಪರಿಮಳ ಗಂಧದ ಕಡ್ಡಿ ಹಚ್ಚಲಾಗುವುದು. ಸತ್ತ ವ್ಯಕ್ತಿಯ ಕುಲದ ಬಂಧು-ಬಳಗದವರು ಶವಕ್ಕೆ ಪೂಜೆ ಸಲ್ಲಿಸಿ, ಅಡ್ಡ ಬೀಳುವರು. ಶವದ ಪಕ್ಕದಲ್ಲಿ ತನ್ನ ಹೆಂಡತಿಯನ್ನು ಕೂಡಿಸಲಾಗುವುದು. ಬಂದವರು ವೀಳ್ಯದೆಲೆ ಕೊಡುವಾಗ ಅವರು ವಿಧವೆಗೆ 'ಉಡಿ' ತುಂಬುವರು. ಗುಡಾರದಲ್ಲಿ ಮಹಿಳೆ ಮರಣ ಹೊಂದಿದ್ದರೆ. ಒಂದು ಕೆಂಪು ಸೀರೆ ಉಡಿಸಿ, ಎದೆಗೆ ಸೆರಗು ಹೊದಿಸುತ್ತಾರೆ. ಇಂತಹ ಕಾರ್ಯದಲ್ಲಿ ಕುಲದ ಮುಖ್ಯಸ್ಥನು ಕುಲದ ಜನಗಳಿಗೆ ತಮ್ಮ ದುಃಖದ ಸ್ವಾಂತನ ಹೇಳುತ್ತಾನೆ.

ಮರಣ ಹೊಂದಿರುವ ವ್ಯಕ್ತಿಯ ಸುದ್ದಿಯನ್ನು ತಮ್ಮ ಕುಲದವರೇ ಸಾವಿನ ಸುದ್ದಿಯನ್ನು ಮುಟ್ಟಿಸುತ್ತಾರೆ. ಇವರು ಅಲೆಮಾರಿಗಳಾದ ಕಾರಣ ಸಕಾಲಕ್ಕೆ ಸುದ್ದಿ ತಲುಪುವುದು ಕಷ್ಟಕರವಾಗಿರುತ್ತದೆ. ಆದರೂ ನವಯುವಕರು ಸಾಧ್ಯವಿದಷ್ಟು ಸೈಕಲು ಮೇಲೆ ಪ್ರಯಾಣ ಮಾಡಿ, ಬೇಗನೆ ಸಾವಿನ ಸುದ್ದಿಯನ್ನು ವ್ಯಕ್ತಿಯ ಆಪ್ತೇಷ್ಟರಿಗೆ ತಿಳಿಸುತ್ತಾರೆ. ಸಾವು ಸುದ್ದಿ ತಲುಪ್ಪುತ್ತಿದ್ದಂತೆ, ಕುಲದ ಬಂಧು-ಬಳಗದವರು ತಪ್ಪದೆ ಧಾವಿಸಿ ಬರುತ್ತಾರೆ. ಸತ್ತ ವ್ಯಕ್ತಿಯು ತೀರಾ ದೂರದ ಸಂಬಂಧಿ, ಬಂಧು-ಬಳಗದವರು, ನೆಂಟರಿಷ್ಟರು ಬರುವುದು ತಡವಾಗುವಂತಿದ್ದರೆ ಸಾಯಂಕಾಲ ಸಮಯದವರೆಗೆ ನೋಡಿ ಅನಿವಾರ್ಯ ಪರಿಸ್ಥಿತಿಯಲ್ಲಿ ಅಂತಿಮ ಸಂಸ್ಕಾರ ಮಾಡಬೇಕಾಗುತ್ತದೆ. ಸತ್ತವರ ಮನೆಯಲ್ಲಿ ಮೂರು ದಿನಗಳವರೆಗೂ ಅಡಿಗೆ ಮಾಡುವುದಿಲ್ಲ. ಸಂಬಂಧಿಕರು ಮಾತ್ರ ಭಿಕ್ಷೆ ಬೇಡಿಕೊಂಡು, ಮಕ್ಕಳಿಗೆಲ್ಲ ಊಟ ಮಾಡಿಸುತ್ತಾರೆ.

ಸಾವಿನ ಸುದ್ದಿ ತಿಳಿದ ಕೂಡಲೇ ಕುಲದ ಬಂಧು ಬಳಗದವರು, ಹಿರಿಯರು ಹೆಣದ ಸುತ್ತ ಸೇರುವರು. ಆಗ ಹೆಣದ ಬಾಯಿಯಲ್ಲಿ ಅಡಿಕೆ, ಎಲೆ ಇಡುವ ಸಂಪ್ರದಾಯವಿದೆ. ಕಳ್ಳಿಗಿಡದ ಕಟ್ಟಿಗೆ ಮೇಲೆ ಸೆಪ್ಪೆದಂಟುಗಳನ್ನು ಹಾಕಿ, ಸೆಪ್ಪೆದಂಟುಗಳ ಮೇಲೆ ಶವವನ್ನು ಮಲಗಿಸಿ, ಶವದ ಮೇಲೆ ಬಿಳಿ ಬಟ್ಟೆಯನ್ನು ಹಾಕಿ, ಅದರ ಮೇಲೆ ಕುಂಕುಮ ಭಂಡಾರ ಹೂವುಗಳಿಂದ ಅಲಂಕರಿಸುತ್ತಾರೆ.[೨೫] ನಂತರ ಕಳ್ಳಿಗಿಡದ ಕಟ್ಟಿಗೆಯ ತೆಂಗಿನ ನಾರಿನ ಮೂಲಕ ಹೆಣ ಬಿಗಿದು ಕಟ್ಟುತ್ತಾರೆ. ನಂತರ ಕುಲದ ಮುಖ್ಯಸ್ಥರಿಂದ

ಸಣ್ಣ ಮಕ್ಕಳವರೆಗೂ ಮೃತ ಹೊಂದಿರುವ ವ್ಯಕ್ತಿಗೆ ಕೈ ಮುಗಿದು ನಮಸ್ಕಾರಿಸುತ್ತಾರೆ. ಅಲ್ಲದೇ ಎಲ್ಲರೂ ಜೋರಾಗಿ ಅಳುವರಲ್ಲದೆ, ಕೆಲವರಂತೂ ದುಃಖವನ್ನು ತಾಳಲಾರದೆ ಅಡ್ಡಬಿದ್ದು, ದುಃಖಿಸುತ್ತಾರೆ. ಈ ಗೋಳಾಡುವ ದೃಶ್ಯ ನೋಡುವರ ಕಣ್ಣಿನಲ್ಲಿಯೂ ಹನಿ, ಹನಿ, ನೀರುಗಳು ಬರುವುದುಂಟು.

ಅಂತಿಮ ಸಂಸ್ಕಾರಕ್ಕೆ ಸಿದ್ಧವಾದ ಶವದ ಚಟ್ಟವನ್ನು ಮೇಲೆತ್ತುತ್ತಾರೆ. ನಾಲ್ಕು ಜನ ಧೃಢಕಾಯುವ ಯುವಕರು ಶವವನ್ನು ಹೊರುತ್ತಾರೆ. ಶವಕ್ಕೆ ಸಂಬಂಧಿಸಿದ ಅಣ್ಣ ತಮ್ಮಂದಿರು, ಇತರ ಸಂಬಂಧಿಕರು ಕೂಡ, ಶವ ಹೊರುವಲ್ಲಿ ಭುಜಕ್ಕೆ ಭುಜ ನೀಡುತ್ತಾರೆ. ಆಗ ಶವದ ಮೇಲೆ ಮಂಡಾಳು ಚೆಲ್ಲುತ್ತಾ, ನಡೆಯುತ್ತಾರೆ. ಸತ್ತವನು ಹಿರಿಯ ವ್ಯಕ್ತಿಯಾಗಿದ್ದರೆ ಹೆಣದ ಮೇಲೆ ಐದು ಪೈಸೆ, ಹತ್ತು ಪೈಸೆ ನಾಣ್ಯಗಳನ್ನು ಚೆಲ್ಲುತ್ತಾರೆ. ಹಾಗೂ ನಿಂಬೆ ಹಣ್ಣು ಕೊಯ್ಯುತ್ತಾರೆ. ಶವದ ಹಿಂದೆ ಸಣ್ಣಪುಟ್ಟ ಮಕ್ಕಳನ್ನು ಹೊರತುಪಡಿಸಿ, ಸಂಬಂಧಿಕರು ಮಾತ್ರ ಹೋಗುತ್ತಾರೆ. ಶವದ ಹಿಂದೆ ಸತ್ತವನ ಹೆಂಡತಿ ಇರುತ್ತಾಳೆ. ಮುಂದುಗಡೆಯಲ್ಲಿ ಹಿರಿಯ ಮಗನಾಗಲಿ ಅಥವಾ ಕಿರಿಯ ಮಗನಾಗಲಿ ಅನ್ನದ ಮಡಿಕೆಯನ್ನು ಮುಂದೆ, ಮುಂದೆ ಹಿಡಿದುಕೊಂಡು ಹೋಗುವನು.

ಸತ್ತ ವ್ಯಕ್ತಿಯನ್ನು ಯಾವುದೋ ಊರಿನ ದಿಕ್ಕಿನಲ್ಲಿ ಗುಂಡಿಯನ್ನು ತೊಡುತ್ತಾರೆ. ಶವದ ಗುಡಿಯ ಬಳಿಗೆ ಹೊತ್ತು ತರುತ್ತಾರೆ. ಗುಂಡಿಯ ಒಳಗಡೆಯಲ್ಲಿ ಹೆಣವನ್ನು ಗುಂಡಿಯೊಳಕ್ಕೆ ಇಳಿಸಿ ಬಟ್ಟೆಗಳನ್ನೇಲ್ಲ ತೆಗೆದು ಹುಟ್ಟಿದ ರೀತಿಯಲ್ಲಿ ನಿರ್ವಾಣದಲ್ಲಿ ಮಲಗಿಸುತ್ತಾರೆ. ಗಂಡಾದರೆ ಉಡುದಾರವನ್ನು ಕಿತ್ತು ಹಾಕುತ್ತಾರೆ. ನಂತರ ಕಾರ್ಯಕ್ರಮದಲ್ಲಿ ಗುಂಡಿಯ ಮುಂದೆ ಬಂದಿರುವ ಹಿರಿಯ ಮಗ ಮಡಿಕೆಯಲ್ಲಿ ಅನ್ನ ತುಂಬಿದ ನೀರು ಮಡಕೆಯೊಂದಿಗೆ ಗುಂಡಿಯನ್ನು ಸುತ್ತುತ್ತಾನೆ. ಮೂರನೇ ಸುತ್ತಿನ ನಂತರ ಕುಲದ ಮುಖ್ಯಸ್ಥನು ಕಬ್ಬಿಣದ ಪಿಕಾಸಿಯಿಂದ ಮಡಕೆಯ ತಳಭಾಗದಲ್ಲಿ ರಂಧ್ರ ಮಾಡುತ್ತಾರೆ. ಆಗ ಹನಿ ಹನಿ ಭೂಮಿಗೆ ಚೆಲ್ಲುವುದು. ಈ ಅನ್ನದ ನೀರು ಯಾರಿಗಾಗಲಿ ಮೈಮೇಲೆ ಚಲ್ಲಿದರೆ, ಅಪಶಕುನ ಉಂಟಾಗುವುದು ಎಂಬ ನಂಬಿಕೆ ಇದೆ. ಇದಾದ ನಂತರ ಸಮುದಾಯದ ಜನರೆಲ್ಲರೂ ಶವದ ಮೇಲೆ ಒಂದೊಂದು ಹಿಡಿ ಮಣ್ಣನ್ನು ಹಾಕುತ್ತಾರೆ. ಆನಂತರ ಸಲಿಕೆಯಿಂದ ಗುಂಡಿಯನ್ನು ಸಂಪೂರ್ಣವಾಗಿ ಮುಚ್ಚುತ್ತಾರೆ. ನಂತರ ಸಂಬಂಧಿಕರೆಲ್ಲಾ ಅದಕ್ಕೆ ನಮಸ್ಕರಿಸುತ್ತಾರೆ. ಹೆಣದ ಮಣ್ಣಿನ ಮೇಲೆ ಲಕ್ಕಿ ತೊಪ್ಪಲು (ಸೊಪ್ಪಿನ) ಅದರ ಮೇಲೆ ಹಾಕಿ, ಕಲ್ಲಿಟ್ಟು ಮುಚ್ಚುತ್ತಾರೆ. ಅದರ ಮೇಲೆ ಮಣ್ಣು ಹಾಕಲಾಗುವುದು. ಸಮುದಾಯದ ಜನರು ಸ್ಮಶಾನವನ್ನು ತಿರುಗಿ ನೋಡದೆ, ಗುಡಾರದ ಕೇರಿಯ ಕಡೆಗೆ ನಡೆಯುವರು. ಸ್ಮಶಾನದಿಂದ ನೇರವಾಗಿ ಗುಡಾರದ ಒಳಗಡೆ ಪ್ರವೇಶಿಸುವಂತಿಲ್ಲ. ಹಾಗೆ ಪ್ರವೇಶಿಸುವುದು ಕೇರಿಗೆ ಅಶುಭ. ಜನರು ಗುಡಾರದ ಒಳಗಡೆ ಹೋಗುವುದಿಲ್ಲ. ಆದಕಾರಣ ಅಮಂಗಳವೆಂದು ತಿಳಿಯುತ್ತಾರೆ. ಹೀಗಾಗಿ ಗುಡಾರ ಹತ್ತಲಲ್ಲಿದ್ದು, ಸ್ನಾನ ಮಾಡುವ ತನಕ ಯಾರ ಕಣ್ಣಿಗೂ ಬೀಳದಂತೆ ಎಚ್ಚರಿಕೆ ವಹಿಸುವರು. ಮನೆಯಲ್ಲಿದ್ದ ತನ್ನ ಮಡದಿ ಗಡಿಗೆಯಲ್ಲಿ ಬಿಸಿ ನೀರು ಕಾಯಿಸಿ, ತಂದು ಗುಡಾರದಲ್ಲಿ ಹಿತ್ತಲಲ್ಲಿಟ್ಟು, ಅಲ್ಲಿ ನಿಲ್ಲದೆ ಹೋಗುವಳು. ಶವ ಸಂಸ್ಕಾರಕ್ಕೆ ಹೋದವರು ಸ್ನಾನ ಮಾಡಿ, ಬಟ್ಟೆ ಬದಲಿಸಿಕೊಂಡು ತಮ್ಮ ಕುಲದ ದೇವತೆಗಳಿಗೆ ನಮಸ್ಕರಿಸಿ ಬರುತ್ತಾರೆ. ಮೃತ ಹೊಂದಿರುವ ವ್ಯಕ್ತಿಯ ಮೇಲೆ ಒಂದು ತೆಂಗಿನಕಾಯಿ ದೇವರ ಗುಡಾರದಲ್ಲಿ ಇಡಲಾಗುವುದು.

**ಮೂರು ದಿನದ ಕಾರ್ಯಕ್ರಮಗಳು :** ಅಂದಿನ ದಿನ ಮೃತ ಹೊಂದಿರುವ ವ್ಯಕ್ತಿಯ ಹಿರಿಯ ಮಗನ ಅಥವಾ ಕಿರಿಯ ಮಗನಾಗಲಿ ತಲೆಯನ್ನು ಬೋಳಿಸಲಾಗುವುದು. ಮೃತ ಹೊಂದಿರುವ ವ್ಯಕ್ತಿಯು ಬಳಸುವ ಪರಿಕರಗಳಾದ ಸರಾಯಿ, ಅಡಿಕೆ, ಎಲೆ, ಬೀಡಿ, ಇತ್ಯಾದಿಗಳನ್ನು ಸ್ಮಶಾನದಲ್ಲಿ ತೆಗೆದುಕೊಂಡು ಹೋಗುತ್ತಾರೆ. ಕಾರಣ ಮೃತ ವ್ಯಕ್ತಿ ಬಳಸುತ್ತಿದ್ದ ವಸ್ತುಗಳು ಪದೇ ಪದೇ ಕಣ್ಣಿಗೆ ಬಿದ್ದರೆ, ಅದರಿಂದ ಮತ್ತೆ ದುಃಖ ಮರುಕಳಿಸಿ, ಮಾನಸಿಕ ತೊಳಲಾಟ ಪ್ರಾರಂಭವಾಗಬಹುದೆಂಬ ಕಾರಣದಿಂದ ಮೊರದಲ್ಲಿ ತೆಗೆದುಕೊಂಡು ಹೋಗುವರು. ಇದರ ಜೊತೆಯಲ್ಲಿ ಕೋಳಿ ಮಾಂಸದ ಸಾಂಬರು ಮಾಡಿಕೊಂಡು, ಸಂಜೆಯ ಸಮಯದಲ್ಲಿ ಸ್ಮಶಾನದಲ್ಲಿ ಹೋಗುತ್ತಾರೆ. ಮುಂದೆ, ಮುಂದೆ ತಲೆಯ ಬೋಳಿಸಿರುವ ತನ್ನ ಮಗ/ಮಗಳು ಹೋದರೆ, ಹಿಂದೆ ಹಿಂದೆ ಸಮುದಾಯದ ಜನರು ಹೋಗುತ್ತಾರೆ. ಸಮಾಧಿ ಮೇಲೆ ತಿಂಡಿ ಪದಾರ್ಥಗಳನ್ನು ಇಡುತ್ತಾರೆ. ಪೂಜಾಸಾಮಾಗ್ರಿಗಳಾದ ಹಣ್ಣು, ಕಾಯಿಗಳನ್ನು ಒಡೆದು ಪೂಜೆ ಮಾಡುತ್ತಾರೆ. ಪೂಜಾ ನಂತರ ಬಂದಿರುವ ಸಂಬಂಧಿಕರು ಒಂದೊಂದು ಗೇಣಿನಷ್ಟು ದೂರನಿಂತು, ಪೂಜೆ ಮಾಡಿ ಕೈ ಮುಗಿದು ಸಮಾಧಿಗೆ ಅಡ್ಡಬೀಳುವರು.

**ತಿಥಿ ಕಾರ್ಯಕ್ರಮ :** ಮರಣ ಹೊಂದಿದ ಒಂಬತ್ತನೆ ದಿನಕ್ಕೆ ಸರಿಯಾಗಿ ಸಿಂಧೋಳ್ಳುರು ತಿಥಿ ಅಥವಾ ದೊಡ್ಡಕಾರ್ಯ ಮಾಡುತ್ತಾರೆ. ಗುಡಾರ/ಮನೆಯನ್ನು ಗುಡಿಸಿ, ಸಗಣಿಯಿಂದ ನೆಲಸಾರಿಸಿ, ಮಣ್ಣಿನ ಮಡಕೆ ಮತ್ತು ಪಾತ್ರೆಗಳನ್ನು ತೇವದ ಬಟ್ಟೆಯಿಂದ ಒರೆಸಿ ಸ್ವಚ್ಛಗೊಳಿಸುತ್ತಾರೆ. "ಸತ್ತ ಸೂತಕ; ಹೆತ್ತ ಸೂತಕ ಎರಡೂ ಒಂದೇ" ಎನ್ನುತ್ತಾರೆ.[೫] ಹುಟ್ಟು ಸಾವುಗಳಿಗೆ ಸಿಂಧೋಳ್ಳುರು ಕೊಡುವ ಸ್ಥಾನವನ್ನು ಇದು ನಿರ್ದೇಶಿಸುತ್ತದೆ. ಅಂದರೆ ಜನನ ಮರಣಗಳೆರಡಕ್ಕೂ ಒಂದೇ ಸ್ಥಾನ ಕೊಡುವುದನ್ನು ಕಾಣಬಹುದು. ಹಾಗಾಗಿ ಇವರಲ್ಲಿ ಸತ್ತರೆ ನೋವು ಹೆಚ್ಚುಕಾಲ ಇರುವುದಿಲ್ಲ ಎನ್ನುತ್ತಾರೆ. ಹಾಗೆಯೆ ಮರಣ ಹೊಂದಿದ ವ್ಯಕ್ತಿಯ ನೆನಪು ಬಂದಾಗ ಸಂಕಟವಿದ್ದರು ತಿಥಿಕಾರ್ಯದಲ್ಲಿ ನಿರತವಾಗಬೇಕಾಗುತ್ತದೆ. ತಿಥಿ ಕಾರ್ಯವಿರುವುದರಿಂದ ಅನೇಕ ವಸ್ತುಗಳನ್ನು ಸಂಗ್ರಹಿಸಿಕೊಳ್ಳಬೇಕಾಗುತ್ತದೆ. ಸೌದೆ ಒಡೆಯುವ ಕೆಲಸ ಪ್ರಾರಂಭವಾಗುತ್ತದೆ. ಕಿರಾಣಿ ವಸ್ತುಗಳು, ಹೊಸಗಡಿಗೆ ತರುವುದು ಇತ್ಯಾದಿ ವಸ್ತುಗಳನ್ನು ಸರ್ವರೀತಿಯಲ್ಲಿ ಸಿದ್ಧಪಡಿಸಿಕೊಳ್ಳಬೇಕಾಗುತ್ತದೆ. ತಲೆ ಬೋಳಿಸಿರುವ ಮಗನಿಗೆ ಹೊಸ ಅಂಗಿಯನ್ನು ತಂದು ಕೊಡುತ್ತಾರೆ. ತಿಥಿಕಾರ್ಯದಲ್ಲಿ ನೆಂಟರಿಷ್ಟರು ಬರುವಂತೆ ಮಾಹಿತಿ ತಿಳಿಸಿ ಬರುವಂತೆ ಒಬ್ಬರನ್ನು ಅದಕ್ಕಾಗಿ ಕಳುಹಿಸುತ್ತಾರೆ. ಕೆಲವರು ತಿಥಿ ಮಾಡುವವರ ಮನೆಯ ಹತ್ತಿರದಿಂದ ಸುಡುಗಾಡಿಗೆ ಬಂದು ಬಿಡುತ್ತಾರೆ. ಇದರ ಮುಂಚಿತವಾಗಿ ಸಮುದಾಯದಲ್ಲಿ ಹೆಣವನ್ನು ಹೊತ್ತುಕೊಂಡಿರುವ ನಾಲ್ಕು ವ್ಯಕ್ತಿಗಳಿಗೆ ಎಣ್ಣೆಸ್ನಾನವನ್ನು ಸಂಬಂಧಿಕರು ಸ್ನಾನ ಮಾಡಿಸಬೇಕು. ನಂತರ ತಮ್ಮ ಕುಲದೇವರಿಗೆ ಕೈ ಮುಗಿದು ಬರುತ್ತಾರೆ. ಅಂದು ಸಾಯಂಕಾಲ ಮೃತ ಹೊಂದಿರುವ ತನ್ನ ಮಗನಿಂದ ಮೊರದಲ್ಲಿ ಪೂಜೆ ಸಾಮಾನುಗಳಾದ ಹಣ್ಣು, ತೆಂಗಿನಕಾಯಿ, ಊದುಬತ್ತಿ, ಪೂಜಾಸಾಮಾಗ್ರಿಗಳನ್ನು ತೆಗೆದುಕೊಂಡು ಹೋಗುತ್ತಾರೆ. ಜತೆಯಲ್ಲಿ ಹೊಸ ಗಡಿಗೆಯನ್ನು ತೆಗೆದುಕೊಂಡು ಹೋಗುತ್ತಾರೆ. ಅದರೊಡನೆಯೇ ಸಮುದಾಯದ ಜನರೆಲ್ಲಾ ಹಿಂದೆ ಹೋಗುತ್ತಾರೆ. ಗಡಿಗೆಯಲ್ಲಿ ನೀರು ತುಂಬಿಕೊಂಡು, ಸಮಾಧಿಯ ಬಳಿ ಬಂದಾಗ ಇದ್ದಕ್ಕಿದಂತೆ ಜನರು ಹುಚ್ಚರಂತೆ ಬೊಗಳುವರು. ನಂತರ ಹೊಸ ಗಡಿಗೆಯ ಮೇಲೆ ಅನ್ನದ ಆರತಿ(ದೀಪ)ಯನ್ನು ಇಡಲಾಗುವುದು.

ಕುಲದ ಮುಖ್ಯಸ್ಥನು ಸಮಾಧಿಯ ಬಳಿಗೆ ಬಂದು, ಊದುಬತ್ತಿ ಹಚ್ಚಿ ತಮ್ಮ ದೇವರನ್ನು ನೆನೆಪಿಸಿಕೊಳ್ಳುತ್ತಾ, ನಂತರ ಸತ್ತ ವ್ಯಕ್ತಿಯ ಮೇಲೆ ನೀನು ನಮ್ಮ ಗುಡಾರದಲ್ಲಿ ದ್ಯಾವರ ಆಗಬೇಕು ಮತ್ತು ದೆವ್ವವಾಗಿ ನಮ್ಮನ್ನು ಕಾಡಬಾರದು ಎಂದು ಹೇಳಿ ಸಮಾಧಿಗೆ ಅಡ್ಡ ಬೀಳುತ್ತಾನೆ.[೬೦] ಸಮಾಧಿ ಬಳಿಯಲ್ಲಿದ್ದ ಗಡಿಗೆಯನ್ನು ತಲೆಯ ಮೇಲೆ ಹೊತ್ತುಕೊಂಡು ಬರುವಾಗ ಬುರ್‍ರ ಬುರ್‍ರವಾದ್ಯದೊಂದಿಗೆ ನೃತ್ಯಮಾಡಿಕೊಂಡು ಬರುವರು. ಅನ್ನದ ದೀಪವನ್ನು ಹಳ್ಳದಲ್ಲಿ ಬಿಡಲಾಗುವುದು. ಅದು ಆರಬಾರದು. ಅದು ಮುಂದೆ, ಮುಂದೆ ಸಾಗುತ್ತ ಹೋದಂತೆ ಸತ್ತ ವ್ಯಕ್ತಿಯು ದೇವರು ಆಗಿರುವನು ಎಂದು ಭಾವಿಸಿಕೊಳ್ಳುವರು. ದೀಪ ಆರಿದರೆ ದೆವ್ವ ಆಗುತ್ತಾನೆ ಎಂಬ ಭ್ರಮೆಯನ್ನು ಇಟ್ಟುಕೊಂಡಿರುವರು. ಬರುವಾಗ ಮತ್ತೊಮ್ಮೆ ಗಡಿಗೆಯಲ್ಲಿ ನೀರು ತುಂಬಿಕೊಂಡು ಗುಡಾರದ ಹತ್ತಿರ ಬರುತ್ತಾರೆ. ಬಾದ ಕ್ಷಣದಲ್ಲಿ ತಂಬಿಗೆಯಲಿ ನೀರು ತಂದು ಕೊಡುತ್ತಾರೆ. ನೀರು ಸ್ವೀಕರಿಸಿಕೊಂಡು ತಮ್ಮ ಕಾಲಿಗೆ ಹಾಕಿಕೊಂಡು, ಗುಡಾರದಲ್ಲಿ ಹೋಗುತ್ತಾರೆ. ಪಕ್ಕದ ಗುಡಾರದಲ್ಲಿ ತಿಥಿಕಾರ್ಯಕ್ರಮದ ಊಟದ ಸಿದ್ಧತೆಗಳು ನಡೆದಿರುತ್ತದೆ. ಎಲ್ಲರೂ ಊಟ ಮಾಡಿಕೊಂಡು ಹೋಗಬೇಕೆಂದು ಕುಲದ ಮುಖ್ಯಸ್ಥರು ವಿನಂತಿಸಿಕೊಳ್ಳುತ್ತಾರೆ. ಬಂಧುಗಳು, ಹಿತೈಷಿಗಳು ಮೃತ ಹೊಂದಿರುವ ಬಳಗಕ್ಕೆ ಸಮಧಾನ ಹೇಳಿ, ಧೈರ್ಯ ತುಂಬುತ್ತಾರೆ.

**ವೀಳ್ಯೆದಲೆ ನೀಡುವುದು :** ಸಿಂಧೋಳ್ಳುರಲ್ಲಿ ಒಂದು ತಿಂಗಳಿನ ಕಾರ್ಯಕ್ರಮದಲ್ಲಿ ವಿಧವೆಯಾದವಳು ತವರು ಮನೆಗೆ ಬರುವಳು. ತಮ್ಮ ಗುಡಾರದ ಮಗಳು ಬಂದಳು ಎಂದು, ತಮ್ಮ ಸಂಬಂಧಿಕರು ಸಂಭ್ರಮ ಪಡುವರು ವಿಧವೆಗೆ ವೀಳ್ಯದ ಎಲೆ ಸೀರೆ ಸೆರೆಗಿನಲ್ಲಿ ಹಾಕುವರು. ಹಾಗೆಯೇ ಸಿಹಿ ಊಟದ ವ್ಯವಸ್ಥೆ ಮಾಡಿಸಿ, ಸ್ವಾಂತನದನದ ಮೂಲಕ ಧೈರ್ಯದ ಮಾತುಗಳನ್ನು ಹೇಳುತ್ತಾರೆ. ಇದಾದ ನಂತರ ವಿಧವೆಗೆ ಹೊಸ ಸೀರೆ, ಕುಬಸ ತಂದು ತೊಡಿಸುವರು. ಅದೇ ರೀತಿ ಸಮಾಧಿ ತಿರುಗಿದ ಮಗನಿಗೆ ಹೊಸ ಅಂಗಿ ನೀಡುವರು. ತವರಿನವರು ತೀರಾ ಬಡವರಿದ್ದರೆ, ವಿಧವೆಗೆ ಕುಬಸದ ಬಟ್ಟೆ ಹಾಗೂ ಮಗನಿಗೆ ಟವಲ್ಲನ್ನಾದರೂ ಕೊಟ್ಟು ಕಳಿಸುವ ಸಂಪ್ರದಾಯವಿದೆ. ಅಂದಿನಿಂದ ತವರು ಮನೆಯ ಮಂಗಳ ಕಾರ್ಯಗಳಿಗೆ ಇವಳು ಸಂಪೂರ್ಣವಾಗಿ ವಂಚಿತಳಾಗುತ್ತಾಳೆ. ಇವರಲ್ಲಿ ವಿಧವೆಗೆ ಅನ್ವಯಿಸುವ ಇಂತಹ ನಂಬಿಕೆಗಳು, ನಡವಳಿಕೆಗಳು ಹೆಂಡತಿ ಸತ್ತ ವಿಧುರನಿಗೂ ಅನ್ವಯಿಸುತ್ತದೆ.

### ೬. ನ್ಯಾಯ ಪಂಚಾಯಿತಿ

ಸಾಮಾಜಿಕ ನಿಯಂತ್ರಣದ ಅನೌಪಚಾರಿಕ ಸಾಧನಗಳಲ್ಲಿ ನ್ಯಾಯ ಪಂಚಾಯಿತಿ ಮುಖ್ಯವಾದದ್ದು. ನ್ಯಾಯ ಪಂಚಾಯಿತಿ ಬುಡಕಟ್ಟು ಸಮುದಾಯಗಳಲ್ಲಿ ಹಿಂದಿನಿಂದಿಲೂ ಬೆಳೆದು ಬಂದಿದೆ. ಬುಡಕಟ್ಟಿನ ನ್ಯಾಯ ಪದ್ಧತಿಗಳು ಅತ್ಯಂತ ಮಾನವೀಯವಾಗಿದೆ. ಅವು ತಾವು ವಾಸಿಸುವ ಪ್ರದೇಶಗಳಲ್ಲಿ ಯಾವುದೇ ವ್ಯಾಜ್ಯಗಳು, ಸಮುದಾಯವನ್ನು ಬಿಟ್ಟು ಹೊರಗೆ ಹೋಗುವುದೇ ಅವಮಾನ ಎಂದು ತಿಳಿದಿರುತ್ತವೆ. ಒಂದು ವೇಳೆ ಸಮುದಾಯಗಳಲ್ಲಿ ಬಿಟ್ಟು ಆಚೆ ಹೋಗುವುದಾದರೆ ಅದು ತಮ್ಮ ಬುಡಕಟ್ಟು ಸಮುದಾಯದ ಕಟ್ಟೆ ಮನೆಗೆ ಹೋಗಬೇಕಷ್ಟೇ. ಅಲ್ಲಿ ಕೊಡುವ ತೀರ್ಮಾನ ಅಂತಿಮವಾದದ್ದು. ಅದು ದೇವತೆಗಳ ಮುಂದೆ ನೀಡುವ ತೀರ್ಪು. ಇದರಿಂದ ತಮ್ಮ ಸಮುದಾಯಗಳ ನ್ಯಾಯಗಳು ಹೊರ ಜಗತ್ತಿಗೆ ಹೋದರೆ ಅಲ್ಲಿಯ ತೀರ್ಪು ನ್ಯಾಯ ಸಮ್ಮತವಾಗಿರುವುದಿಲ್ಲ ಎಂಬುದು ಬುಡಕಟ್ಟುಗಳ

ನಂಬಿಕೆ. ಒಂದೆರಡು ದಶಕಗಳು ಹಿಂದಿನವರೆಗೂ ಬುಡಕಟ್ಟು ತೀರ್ಮಾನಗಳು ಅವರ ಸಮೂಹದ ನಡುವೆಯೇ ನಡೆಯುತ್ತಿದ್ದವು. ಇದೀಗ ಆಧುನಿಕ ವ್ಯವಹಾರಗಳು ಗ್ರಾಮ ಪಟ್ಟಣಗಳನ್ನು ಆವರಿಸಿ ಕೊಂಡಂತೆ ಅರಣ್ಯದಂಚಿನ ಬುಡಕಟ್ಟು ಸಮೂಹವನ್ನು ತಟ್ಟಿದೆ. ಇದರಿಂದ ಬುಡಕಟ್ಟು ಸಂಸ್ಕೃತಿಯಲ್ಲಿ ಹಲವು ಬದಲಾವಣೆಗಳು ತಲೆದೋರಿವೆ. ಆದರೆ ಸತ್ಯದ ವಿಧಾನಗಳು ಇಂದಿಗೂ ಆಚರಣೆಯಲ್ಲಿವೆ.

ಪ್ರಾಚೀನ ಸಾಮಾಜಿಕ ಜೀವನದಲ್ಲಿ ನ್ಯಾಯ ಪಂಚಾಯಿತಿ ತೀರ್ಮಾನ ಸಮುದಾಯಗಳನ್ನೇ ಅವಲಂಬಿಸಿದ್ದವು. ಏಕೆಂದರೆ ಅವುಗಳ ಗಾತ್ರ ಚಿಕ್ಕದು. ಜನಸಂಖ್ಯೆ ಕಡಿಮೆ, ಜೀವನದ ವಿವಿಧ ಕ್ಷೇತ್ರಗಳು ಸರಳ ಸ್ವರೂಪದವುಗಳಾಗಿದ್ದವು. ಜನರು ಸಾಮಾಜಿಕ ಜೀವನದ ಸಂಬಂಧಗಳನ್ನು ಹೊಂದಿದ್ದರು. ಧಾರ್ಮಿಕ ಶ್ರದ್ಧೆಯುಳ್ಳವರಾಗಿದ್ದರು. ಅವರಲ್ಲಿ ಸಂಸ್ಕೃತಿ ಸಾಮ್ಯತೆ ಇತ್ತು. ಆದರೆ ಆಧುನಿಕ ಸಮಾಜದಲ್ಲಿ ಬುಡಕಟ್ಟು ಸಮುದಾಯಗಳಲ್ಲಿ ನ್ಯಾಯ ಪಂಚಾಯತಿ ದಿನೇ ದಿನೇ ಕಡಿಮೆಯಾಗುತ್ತಿದೆ. ಆದರೂ ಅಲ್ಪಸಂಖ್ಯಾತ, ಅಲೆಮಾರಿ, ಅರೆ ಅಲೆಮಾರಿ, ನಗರ ಮತ್ತು ಗ್ರಾಮೀಣ ಸಂಪರ್ಕ ಹೊಂದಿರದ ಗುಡ್ಡಗಾಡು ಬುಡಕಟ್ಟುಗಳಲ್ಲಿ ನ್ಯಾಯ ಪಂಚಾಯತಿಗಳು ಚುರುಕಾಗಿ ಕಾರ್ಯನಿರ್ವಹಿಸುತ್ತಿವೆ.[೧೧] ಈ ಹಿನ್ನೆಲೆಯಲ್ಲಿ ಬುಡಕಟ್ಟು ಸಮುದಾಯಗಳಲ್ಲಿ ಏನಾದರೂ ಸಮಸ್ಯೆಗಳು ಉದ್ಭವವಾದರೆ ಕುಲಪಂಚಾಯಿತಿ ಮುಖಂಡರಿಂದ ಬಲಯುತವಾದ ಮತ್ತು ಪರಿಣಾಮಕಾರಿಯಾದ ನ್ಯಾಯ ಪಂಚಾಯಿತಿಯಿಂದ ಬಗೆಹರಿಸಿಕೊಳ್ಳುತ್ತಾರೆ. ನ್ಯಾಯದ ಧ್ಯೇಯೋದ್ದೇಶಗಳನ್ನು ಸಾಧಿಸಲು ಮತ್ತು ಜನಜೀವನದಲ್ಲಿ ಸುವ್ಯವಸ್ಥೆಯನ್ನುಂಟು ಮಾಡಲು ನ್ಯಾಯ ಪಂಚಾಯತಿ ರಚಿಸಿಕೊಳ್ಳಲಾಗುವುದು. ಅಂತೆಯೇ ನ್ಯಾಯ ಪಂಚಾಯತಿ ಯೋಜಿತ ರೀತಿಯಲ್ಲಿ ರೂಪುಗೊಂಡು ಚಾಲನೆಯಲ್ಲಿರುವ ಸಾಮಾಜಿಕ ನಿಯಂತ್ರಣದ ಅನೌಪಚಾರಿಕ ಸಾಧನವಾಗಿದೆ.

ಸಿಂಧೋಳ್ಳು ಸಮುದಾಯದಲ್ಲಿ ಅವರದೇ ಆದ ನ್ಯಾಯ ಪಂಚಾಯಿತಿ ವ್ಯವಸ್ಥೆಯಿದೆ. ಸ್ವತಂತ್ರ್ಯ ಭಾರತದ ಸಾಮಾಜಿಕ ಪರಿವರ್ತನೆಯ ಗಾಳಿ ಬಲವಾಗಿ ಬೀಸಿದ್ದರೂ ಇವರ ನ್ಯಾಯ ಪಂಚಾಯಿತಿ ಸಂಪೂರ್ಣ ಕುಸಿದಿಲ್ಲ. ಇವರು ಸ್ಮಶಾನದಲ್ಲಿ ನ್ಯಾಯ ಪಂಚಾಯಿತಿ ಮಾಡುತ್ತಿದ್ದು ಇಂದಿಗೂ ತಮ್ಮ ಸಮಸ್ಯೆಗಳನ್ನು ಪಂಚಾಯಿತಿ ಮೂಲಕವೇ ಬಗೆಹರಿಸಿಕೊಳ್ಳುತ್ತಾರೆ. ಕುಟುಂಬದ ಸದಸ್ಯರ ನಡುವಣ ಭಿನ್ನಾಭಿಪ್ರಾಯ, ಕಲಹಗಳು ಇತ್ಯಾದಿ ಸಮಸ್ಯೆಗಳಿಗೆ, ಕುಲದ ಮುಖ್ಯಸ್ಥನಾದ ಪೂಜಾರಿ ಪರಿಹಾರ ಕಂಡುಕೊಳ್ಳುತ್ತಾನೆ. ನ್ಯಾಯಧೀಶನು ನೀಡುವ ನ್ಯಾಯ ತೀರ್ಮಾನವನ್ನು ಜನರು ದೈವ ಸಮಾನವೆಂದು ತಿಳಿಯುತ್ತಾರೆ. ಅವನ ಮಾತೇ ಕೊನೆಯ ಮಾತಾಗಿರುತ್ತದೆ.

**ಪೂಜಾರಿಯ ಆಯ್ಕೆ :** 'ಪೂಜಾರಿ'ಯೆಂದರೆ ಬುಡಕಟ್ಟಿನ ಹಿರಿಯ. ಈತನನ್ನು ಮುಖ್ಯಸ್ಥ ಅಥವಾ ಪೂಜಾರಿ ಎಂದು ಕರೆಯುತ್ತಾರೆ. ನ್ಯಾಯ ಪಂಚಾಯಿತಿಯಲ್ಲಿ ಪೂಜಾರಿಯೆಂದು ಕರೆಯುತ್ತಾರೆ".[೨೨] ಆಯಾ ಭೌಗೋಳಿಕ ಪ್ರದೇಶದ ವ್ಯಾಪ್ತಿಯಲ್ಲಿ ವಾಸಿಸುವ ನಾಲ್ಕಾರು ಊರುಗಳು ಒಂದೇ ಪ್ರದೇಶದಲ್ಲಿರುತ್ತವೆ ಆದ್ದರಿಂದ ಆ ಎಲ್ಲಾ ಊರಿನವರು ಸೇರಿ ಒಬ್ಬ ಪೂಜಾರಿಯನ್ನು ಆಯ್ಕೆ ಮಾಡಿ ಇವನೇ ತಮ್ಮ ಪೋತಪ್ಪ, ಅಥವಾ ಪೂಜಾರಿ ಎಂದು ತೀರ್ಮಾನಿಸುತ್ತಾರೆ. ಉದಾಹರಣೆ




ಜಗಳ, ಜಾತಿಭ್ರಷ್ಟತೆ, ಅನ್ಯಜಾತಿಯವರನ್ನು ಮದುವೆಯಾಗುವುದು, ಮದ್ಯಪಾನ ಮಾಡುವುದು ಇವೆಲ್ಲ ಸಿಂಧೋಳ್ಳುರಲ್ಲಿ ನಿಷಿದ್ಧ. ಕುಲದ ಕಟ್ಟಳೆಗಳನ್ನು ಮೀರಿ ಇಂಥ ತಪ್ಪುಗಳನ್ನು ಮಾಡಿದವರಿಗೆ ವಿಚಾರಣೆ ನಡೆಸಿ ಶಿಕ್ಷೆ ವಿಧಿಸುವ ಪರಮಾಧಿಕಾರವನ್ನು ಪೂಜಾರಿ ಹೊಂದಿರುತ್ತಾನೆ. ಋತುಮತಿ, ಮದುವೆ, ತಿಥಿ ಸಂಸ್ಕಾರಾಧಿಗಳೂ ಇವನ ಆದೇಶದಂತೆಯೇ ನಡೆಯುವುದು. ಪೂಜಾ ವಿಧಿಗಳನ್ನು ನಡೆಸಿಕೊಡುವವನು ಪೂಜಾರಿಯೇ ಆಗಿರುವನು. ಕೆಲವೊಮ್ಮೆ ಭಿಕ್ಷೆಬೇಡಲು ಕೂಡ ಈತನೇ ಆಗಿರುತ್ತಾನೆ. ಹಿಂದಿನ ಪೂಜಾರಿ ಕಾಲವಶವಾದರೆ ಊರಿಗಿಷ್ಟು ಎಂದು ಹಣ ಕೂಡಿಸಿ, ಬುರ್ರ ಬುರ್ರ ವಾದ್ಯದೊಂದಿಗೆ ದೇವರ ಗುಡಾರ ಹತ್ತಿರ ತಂದು ಮತ್ತೆ ಒಬ್ಬನನ್ನು ಆರಿಸಿ ಆತನಿಗೆ 'ಮರಿ ಪೂಜಾರಿ' ಎಂದು ಪಟ್ಟ ಕಟ್ಟುತ್ತಾರೆ. ಇಡೀ ಸಿಂಧೋಳ್ಳು ಸಮಾಜದಲ್ಲಿ ತಲೆದೋರುವ ಸಾಮಾಜಿಕ ಸಮಸ್ಯೆಗಳನ್ನು ಬಗೆ ಹರಿಸುವ ಹೊಣೆ ಈತನದು.

**ಕಟ್ಟೆಮನೆ :** 'ಕಟ್ಟೆಮನೆ' ಎಂದರೆ ನ್ಯಾಯದ ಮನೆ. ಸತ್ಯ ಶೋಧಿಸುವ ಮನೆ. ಕುಲದ ಕಟ್ಟಳೆಗಳನ್ನು ಮೀರಿ ನಡೆಯುವರಿಗೆ ಗೋಡೆ ಹಾಕಿ, ನ್ಯಾಯ ಮಾರ್ಗದಲ್ಲಿ ಕೆಟ್ಟತನವನ್ನು ಬಿಟ್ಟು ಪರಿಶುದ್ಧರಾಗಿ ನಡೆಯುವಂತೆ ತಿಳುವಳಿಕೆ ನೀಡುವ ತಾಣ. "ಸಿಂಧೋಳ್ಳುರಿಗೂ ಈ ಕಟ್ಟೆ ಮನೆಗಳ ಸಂಬಂಧ ಸ್ಮಶಾನದಲ್ಲಿ ಇರುವುದಾಗಿ ತಿಳಿದು ಬರುತ್ತದೆ".[೩೩] ಕುಲದ ಅಥವಾ ಕುಟುಂಬಗಳಲ್ಲಿ ಜಗಳಗಳನ್ನು ತಮ್ಮ ಬೀಗರು ಬಗೆಹರಿಸಲು ಪ್ರಯತ್ನಿಸುತ್ತಾರೆ. ಒಂದು ವೇಳೆ ನ್ಯಾಯ ಬಗೆಹರಿಯದಿದ್ದಾಗ ಆ ದೂರನ್ನು ತೆಗೆದುಕೊಂಡು ಕಟ್ಟೆಮನೆಗೆ ಹೋಗುತ್ತಾರೆ. ಸಿಂಧೋಳ್ಳುರ ಕಟ್ಟೆಮನೆ ಬಳ್ಳಾರಿಯ ಗುಡಾರದ ನಗರಕ್ಕೂ ಹೋಗುವುದುಂಟು. ಅಲ್ಲದೇ ಕರ್ನಾಟಕದಲ್ಲಿ ಸಿಂಧೋಳ್ಳುರು ವಾಸಿಸುವ ನೆಲೆಗಳಲ್ಲೂ ಕಟ್ಟೆಮನೆಗಳಿವೆ. ಆದರೆ ಅವು ತಮ್ಮ ಹಿಂದಿನ ಸ್ವರೂಪದಲ್ಲಿ ಕಾರ್ಯ ನಿರ್ವಹಿಸಲು ಸಾಧ್ಯವಾಗುತ್ತಿಲ್ಲ. ಹಿಂದೆ ಅಪರಾಧಿಗಳಿಗೆ ಉಗ್ರ ದೈಹಿಕ ಮತ್ತು ಮಾನಸಿಕ ಶಿಕ್ಷೆವಿಧಿಸುವುದು ಸಾಮಾನ್ಯವಾಗಿತ್ತು. ಇಂದು ಇದರ ಸ್ವರೂಪ ಬದಲಾಗಿದೆ. ಆದರೂ ಇಂದಿಗೂ ತಮ್ಮ ಸಂಪ್ರಾದಾಯಿಕ ನ್ಯಾಯ ಪಂಚಾಯಿತಿ ಆಚರಣೆಯಲ್ಲಿ ಸತ್ಯವನ್ನು ಶೋಧಿಸಿ ತೆಗೆಯುವುದು, ಸಮಾನತೆ, ಸರ್ವರಹಿತ ಬಯಸುವುದು ಮುಖ್ಯವಾಹಿನಿಯಾಗಿದೆ. ಹಾಗೂ ಕಟ್ಟೆಮನೆ ಅಲ್ಲದೆ ನ್ಯಾಯ ತೀರ್ಮಾನ ಮಾಡುವ ಸ್ಥಳಗಳು ಕಂಡುಬರುವವು ಅವು ಈ ಕೆಳಗಿನಂತಿವೆ.

* **ಸ್ಮಶಾನದಲ್ಲಿ ನ್ಯಾಯ ಪಂಚಾಯಿತಿ ಮಾಡಿಕೊಳ್ಳುವುದು :** ಹುಬ್ಬಳ್ಳಿಯ ಸಿಂಧೋಳ್ಳು ಸಮುದಾಯದ ಜನರು ತಮ್ಮ ಸ್ಮಶಾನದಲ್ಲಿ ನ್ಯಾಯ ಪಂಚಾಯಿತಿ ಮಾಡಿಕೊಳ್ಳುತ್ತಾರೆ. ಸಮಾಧಿ ಬಳಿಯಲ್ಲಿ ಸಗಣಿಯಿಂದ ನೆಲೆ ಸಾರಿಸಿ, ಅದರ ಮೇಲೆ ಮನುಷ್ಯನ ತಲೆ ಬುರುಡೆ ಮತ್ತು ಅಸ್ಥಿಪಂಜರವನ್ನು ಇಡುತ್ತಾರೆ. ಅದರ ಪಕ್ಕದಲ್ಲಿ ರಂಗೋಲಿ ಹಾಕಿ, ಹೂವಿಟ್ಟು ಅದಕ್ಕೆ ಅರಿಶಿನ ಕುಂಕುಮಗಳನ್ನು ಹಚ್ಚುತ್ತಾರೆ. ನಿಂಬೆ ಹಣ್ಣುಗಳನ್ನು ನಾಲ್ಕು ದಿಕ್ಕುಗಳಲ್ಲಿ ಇಡಲಾಗುವುದು. ಅಪರಾಧಿಗಳು ತಲೆ ಬುರುಡೆ ಪಕ್ಕದಲ್ಲಿ ಕುಳಿತುಕೊಂಡಿರುತ್ತಾರೆ. ಪೂಜಾರಿ ಸಮಾಧಿಗೆ ಪೂಜೆ ಮಾಡಿದ ಮೇಲೆ ನ್ಯಾಯ ಪಂಚಾಯಿತಿ ಪ್ರಾರಂಭವಾಗುತ್ತದೆ.

*** ದೇವರ ಗುಡಾರದ ಮುಂದೆ ನ್ಯಾಯ ಪಂಚಾಯಿತಿ :** ಸಾಮಾನ್ಯವಾಗಿ ನ್ಯಾಯ ಅಥವಾ ಕುಲಪಂಚಾಯಿತಿ ಸೇರುವುದು ಕಟ್ಟೆಮನೆ ಇಲ್ಲವೆ ದೇವರ ಮನೆಗೆ ಅಥವಾ ದೇವರ ಗುಡಾರದ ಮುಂಭಾಗದಲ್ಲಿ ಸಗಣಿ ನೀರಿನಿಂದ ಒಂದಿಷ್ಟಗಲಸಾರಿಸಿ, ರಂಗೋಲಿ ಇಟ್ಟು ನಂತರ ದೇವರ ಮೂರ್ತಿಗೆ ಪೂಜಾರಿ ಪೂಜೆ ಮಾಡುತ್ತಾನೆ. ನಂತರ ನ್ಯಾಯ ಪಂಚಾಯತಿ ಪ್ರಾರಂಭವಾಗುತ್ತದೆ.

**ನ್ಯಾಯ ಪದ್ಧತಿ ಮತ್ತು ಶಿಕ್ಷೆ :** ಕುಲದೇವತೆಗಳ ಪೂಜೆ ನಂತರ ಸಮುದಾಯದ ವ್ಯಕ್ತಿ ಇಂಥವನು/ಇಂಥವಳು ಈ ರೀತಿಯ ತಪ್ಪು ಮಾಡಿದ್ದರೆಂದು ತುಂಬಿದ ಸಭೆಯ ಮುಂದೆ ಹೇಳುತ್ತಾನೆ. ನಂತರ ಪೂಜಾರಿ ತನ್ನ ತೀರ್ಮಾನವನ್ನು ಸರ್ವಾನುಮತದಿಂದ ಸಭೆ ಅಂಗೀಕರಿಸುತ್ತದೆ. ತಪ್ಪು ಸಾಬೀತಾದರೆ ಅವನನ್ನು ಕುಲಕ್ಕೆ ಸೇರಿಸಿಕೊಳ್ಳಬೇಕೆ, ಬೇಡವೇ ಎಂಬ ಜಿಜ್ಞಾಸೆ ಪ್ರಾರಂಭವಾಗುತ್ತದೆ. ಹೆಣ್ಣು ತರುತ್ತಾರೆ ಮದುವೆ ಮಾಡಿಕೊಳ್ಳುತ್ತಾರೆ, ಆ ಹೆಣ್ಣಿಗೆ ದ್ರೋಹ ಮಾಡಿದರೆ, ಅಂದರೆ ಮದುವೆಯಾದ ಹೆಣ್ಣು ಮಗಳನ್ನು ಬಿಟ್ಟು ಬಿಡುವುದು, ಹೊಡೆಯುವುದು, ಚಿತ್ರಹಿಂಸೆ ಕೊಡುವುದು ವ್ಯಕ್ತಿ ಮಧ್ಯಪಾನ ಮಾಡಿಕೊಂಡು ಅವಾಚ್ಯ ಶಬ್ದಗಳಿಂದ ಮಾತನಾಡಿದರೆ, ತಪ್ಪಿತಸ್ಥರಿಗೆ ದಂಡ ವಿಧಿಸುತ್ತಾರೆ. ಹೆಣ್ಣು ಮಗಳು ಹಾದರ ಮಾಡಿದರೆ ಕುಲಸ್ಥರೆಲ್ಲಾ ಸೇರಿ ಆಕೆಯನ್ನು ತಮ್ಮ ಸಮಾಜದಿಂದಲೇ ಬಹಿಷ್ಕರಿಸಬಹುದು. ಇಲ್ಲವೇ ಬಗೆ-ಬಗೆಯ ಶಿಕ್ಷೆಗಳಿಗೆ ಗುರಿಪಡಿಸಬಹುದು. ಸಿಂಧೋಳ್ಳರ ನ್ಯಾಯ ಪಂಚಾಯತಿಯಲ್ಲಿ ಕೊಡುವ ಶಿಕ್ಷೆ ಎಷ್ಟು ಉಗ್ರವಾಗಿರುತ್ತದೆ ಎಂದರೆ: ಬೇವಿನ ಮರಕ್ಕೆ ಕಟ್ಟುವುದು. ಭಿಕ್ಷೆ ಬೇಡುವ ತನಕ ದಂಡ ಹಾಕಲಾಗುವುದು. ಪೂಜಾರಿ ಕೈಯಲ್ಲಿರುವ ದೊಣ್ಣೆಯಿಂದ ಥಳಿಸುವಂತೆ ಆಜ್ಞೆ ಮಾಡುತ್ತಾನೆ. ಒಮ್ಮೆ ಕುಲದಿಂದ ಹೊರ ಹಾಕಿರುವವರನ್ನು ಮತ್ತೆ ಕುಲಕ್ಕೆ ಸೇರಿಸಿಕೊಳ್ಳುವುದು ಮತ್ತು ತಮ್ಮ ಕುಲದೇವತೆಗಳು ಮೇಲೆ ಪ್ರಮಾಣ ಮಾಡಿಸುತ್ತಿರುವುದು ಇವರು ದೇವರಿಗೆ ಹೆದರಿ, ಸತ್ಯವನ್ನು ಹೇಳುವುದುಂಟು. ಒಂದು ವೇಳೆ ಸುಳ್ಳ ಹೇಳಿದರೆ, ನಮ್ಮನ್ನು ದೇವತೆ ಸುಟ್ಟು ಬಿಡುತ್ತಾಳೆ ಎಂಬ ಭಯದ ನಂಬಿಕೆ ಈಗಲೂ ಆಳವಾಗಿದೆ. ಇಂತಹ ಅಂಶಗಳ ಮೂಲಕ ನ್ಯಾಯ ಪಂಚಾಯಿತಿಯಲ್ಲಿ ಉಗ್ರ ಅಂಶಗಳು ನಡೆಯುತ್ತಿರುತ್ತವೆ. ಅಂತಹ ಅಂಶಗಳಲ್ಲಿ ಕೆಲವೊಂದು ವ್ಯಾಜ್ಯಗಳನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

**ಅ. ಮಹಿಳೆಯರನ್ನು ಅಪಹರಿಸಿಕೊಂಡು ಹೋದರೆ :** ಲೈಂಗಿಕ ಬಯಕೆ ಪ್ರಕೃತದತ್ತವಾದುದು. ಇತರ ಪ್ರಾಣಿಗಳಂತೆ ನಿರ್ದಿಷ್ಟ ಋತುಮಾನ ಮತ್ತು ವೇಳೆಯಲ್ಲಿ ಮಾತ್ರವಲ್ಲದೆ, ಮಾನವನಲ್ಲಿ ಲೈಂಗಿಕ ಬಯಕೆಯು ಸದಾ ಜಾಗೃತವಾಗಿರುತ್ತದೆ. ಅತ್ಯಂತ ಪ್ರಬಲವಾದ ಈ ಬಯಕೆಯನ್ನು ಹತ್ತಿಕ್ಕುವುದು ತುಂಬಾ ಕಷ್ಟದಾಯಕವಾದದ್ದು. ಅಂತಹ ಸಂದರ್ಭದಲ್ಲಿ ಪುರುಷನು ಮಹಿಳೆಯನ್ನು ಅಪಹರಿಸಿಕೊಂಡು ಹೋದರೆ ನ್ಯಾಯ ಪಂಚಾಯಿತಿ ನಡೆಯುವುದು. ಒಬ್ಬರಿಂದ ನಡೆದಿರುವ ತಪ್ಪಿನ ಕುರಿತು ಸಮುದಾಯ ವ್ಯಕ್ತಿ ಮೂಲಕ ಎಲ್ಲರಿಗೂ ವಿಷಯ ತಿಳಿಸುತ್ತದೆ. ನ್ಯಾಯಕ್ಕೆ ಸೇರುವ ಮೊದಲೇ ತಪ್ಪೆಸಗಿರುವವರನ್ನು ಕರೆಸಿ, "ನಿನ್ನಿಂದ ಇಂಥ ತಪ್ಪು ನಡೆದಿದೆಯೆಂದು ದೂರು ಬಂದಿದೆ, ನೀನು ಕುಲದ ಕಟ್ಟಳೆಗೆ ಒಪ್ಪುವೆಯೋ ಇಲ್ಲವೊ?" ಎಂದು ಕೇಳುತ್ತಾರೆ, ತಪ್ಪು ಮಾಡಿದವರು "ನಿಮ್ಮಿಷ್ಟದಂತೆ ಮಾಡಿ, ನನ್ನ ತಪ್ಪನ್ನು ಮನ್ನಿಸಿರಿ" ಎಂದು ಕಾಲು ಹಿಡಿದುಕೊಂಡು ಒಪ್ಪಿಕೊಂಡು ಬಿಟ್ಟರೆ ಅವನಿಗೆ ಶಿಕ್ಷೆ ಕಡಿಮೆ ಮಾಡುತ್ತಾರೆ.

ತಪ್ಪಿತಸ್ಥನು ಕುಲ ಪಂಚಾಯಿತಿ ಮೂಲಕ ತನ್ನ ತಪ್ಪನ್ನು ಒಪ್ಪಿಕೊಳ್ಳದಿದ್ದಾಗ ಆತನ ಕುಲಶುದ್ಧಿ ಆಗುವವರೆಗೆ ಗುಡಾರದ ಅಂಗಳದಲ್ಲಿ, ಮದುವೆ ಮುಂಜಿಗಳಲ್ಲಿ ಅಂತಹವರನ್ನೂ ಕುಲದಿಂದ ಹೊರ ಹಾಕಲಾಗುತ್ತದೆಂದು ಎಚ್ಚರಿಕೆ ಕೊಡುತ್ತಾರೆ ಆಗಲೂ ತಪ್ಪಿತಸ್ಥನು ಸುಳ್ಳು ಹೇಳಿದರೆ. ಪೂಜಾರಿಯ ಮೂಲಕ ನ್ಯಾಯ ಪಂಚಾಯಿತಿ ನಡೆಯುವುದು. "ಪೂಜಾರಿ ತಪ್ಪು ಮಾಡಿರುವ ವ್ಯಕ್ತಿಯ ಮುಖಕ್ಕೆ ಹೊಡೆಯುತ್ತಾನೆ. ತನ್ನ ವೀಳ್ಯದೆಲೆಗಳಲ್ಲಿ ಒಂದನ್ನು ಎತ್ತಿಕೊಂಡು ಕುಲಪಂಚಾಯಿತಿ ಪ್ರಕಾರ ತಪ್ಪಿತಸ್ಥನು ೪೨,೦೦೦ ರೂಪಾಯಿಗಳ ದಂಡ ಕೊಡಬೇಕು ಮತ್ತು ನಮ್ಮ ಕುಲದ ಅಪಹರಿಸಿದ ಹುಡುಗಿಯನ್ನು ಮದುವೆ ಮಾಡಿಕೊಳ್ಳಬೇಕು ಎಂದು ಪ್ರಚುರಪಡಿಸುತ್ತಾನೆ".[೩೪] ದಂಡ ಹಾಕಿರುವ ಹಣ ಒಂದೇ ಬಾರಿಗೆ ಕಟ್ಟುವಂತಿಲ್ಲ. ದಿನಾಲೂ ಭಿಕ್ಷೆ ಬೇಡಿಕೊಂಡು ಪಂಚಾಯಿತಿಗೆ ಕಟ್ಟಬೇಕು. ಇದಕ್ಕೆ ತಂದೆ ತಾಯಿಗಳು ಸಾಕ್ಷಿಗಳು ಇರುತ್ತಾರೆ. ನಂತರ ಅಪಹರಿಸಿದ ಹುಡುಗಿಗೂ ಪುರುಷನಿಗೂ ತಮ್ಮ ದೇವರ ಗುಡಾರದ ಮುಂದೆ ಸರಳ ವಿವಾಹ ನಡೆಯುವುದು.

**ಆ. ಹೆಂಡತಿಯನ್ನು ಬಿಡುವುದು :** ಕುಟುಂಬದಲ್ಲಿ ನಡೆಯುವ ಆಂತರಿಕ ಕಲಹಗಳಲ್ಲಿ ಗಂಡ-ಹೆಂಡತಿಯರ ನಡುವೆ ಬಂದಂತಹ ವೈಮನಸ್ಸನ್ನು ನ್ಯಾಯ ಪಂಚಾಯತಿಗಳಲ್ಲಿ ಪೂಜಾರಿಯು ಬಗೆಹರಿಸಿ, ಅವರಿಗೆ ತಿಳುವಳಿಕೆ ನೀಡಿ ಕೂಡಿಬಾಳುವಂತೆ ಸಲಹೆ ಹೇಳುತ್ತಾನೆ. ಇದಕ್ಕೆ ಒಪ್ಪದಿದ್ದಲ್ಲಿ ಅವನಿಗೆ ಕುಲದಿಂದ ಬಹಿಷ್ಕಾರ ಹಾಕಲಾಗುವುದು. ಹೆಂಡತಿ ತವರು ಮನೆಯಲ್ಲಿ ಇದ್ದರೆ, ತಂದೆ-ತಾಯಿಗಳನ್ನು ಕರೆಯಿಸಿಕೊಂಡು ಕುಲದ ಮುಖ್ಯಸ್ಥನು ಬುದ್ಧಿ ಹೇಳುತ್ತಾನೆ. ನಂತರ ಗಂಡ ಹೆಂಡತಿಯರನ್ನು ಜೋಡಿಸಿ ನ್ಯಾಯ ಪಂಚಾಯತಿಯಲ್ಲಿ ಪುರುಷನಿಗೆ ೫೦೦.೦೦ ರೂ.ಗಳವರೆಗೆ ದಂಡ ಹಾಕಲಾಗುವುದು. ನಂತರ ತಮ್ಮ ಕುಲಕ್ಕೆ ಸೇರಿಸಿಕೊಳ್ಳಬೇಕೆಂದು ನಿರ್ಣಯವಾದ ಮೇಲೆ ಕುಲಶುದ್ಧಿಯ ವಿಚಾರ ಬರುತ್ತದೆ. ಈ ಕುಲ ಶುದ್ಧಿಯನ್ನು ಮಾಡುವವರು, ದೇವರ ಗುಡಾರದಲ್ಲಿ ನೀರು ಮಂತ್ರಿಸಿಕೊಂಡು ತಪ್ಪಿತಸ್ಥನ/ಳ ತಲೆಯ ಮೇಲೆ ಚಿಮ್ಮುಕಿಸುತ್ತಾರೆ. ನಂತರ ಬೇವಿನ ಕಡ್ಡಿಯನ್ನು ದೀಪದಿಂದ ಕಾಯಿಸಿ ಹಣೆಯ ಮೇಲೆ ಬರೆ ಎಳೆಯುತ್ತಾರೆ. ಪೂಜಾರಿ ಈತನ/ಈಕೆಯ ಕುಲಾಚಾರವಾಯಿತು, ನಮ್ಮ ಕುಲಕ್ಕೆ ಸೇರಿಸಿಕೊಳ್ಳಬಹುದು ಎಂದು ತೀರ್ಮಾನಿಸುತ್ತಾನೆ.

**ಇ. ಮಧ್ಯಪಾನ ಮಾಡಿಕೊಂಡು, ಅವಾಚ್ಯ ಶಬ್ದಗಳನ್ನು ಮಾತನಾಡಿದರೆ :** ಗುಡಾರದ ಕಾಲೋನಿಯಲ್ಲಿ ಮಧ್ಯಪಾನ ಮಾಡಿರುವ ವ್ಯಕ್ತಿ ಅವಾಚ್ಯ ಶಬ್ದಗಳನ್ನು ಮಾತನಾಡಿದರೆ, ಮುಂಜಾನೆ ಸಮಯದಲ್ಲಿ ಕುಲಪಂಚಾಯಿತಿ ನಡೆಯುವುದು. ಪೂಜಾರಿ ಕುಡಿದಿರುವ ವ್ಯಕ್ತಿಗೆ ಬುದ್ಧಿ ಮಾತುಗಳನ್ನು ಹೇಳುತ್ತಾನೆ. ತಪ್ಪಿತಸ್ಥ ನಾನು ಯಾರಿಗೂ ಅವಾಚ್ಯ ಪದಗಳಿಂದ ಮಾತನಾಡಿಲ್ಲ ಎಂದು ಹೇಳಿದರೆ ದೇವಿಯ ಮೇಲೆ ಆಣೆ ಮಾಡಿಸುವುದುಂಟು. ಆಗ ತನ್ನ ತಪ್ಪನ್ನು ಒಪ್ಪಿಕೊಳ್ಳುತ್ತಾನೆ. ನಾನು ಇನ್ನು ಮುಂದೆ ಕುಡಿಯುವುದಿಲ್ಲ ಮತ್ತು ಹೊಲಸು ಮಾತುಗಳಾನಾಡುವುದಿಲ್ಲ ಎಂದು ದೇವಿ ಎದುರಿಗೆ ಪ್ರಮಾಣ ಮಾಡುತ್ತಾನೆ. ಮಧ್ಯಪಾನ ಮಾಡಿರುವ ವ್ಯಕ್ತಿ ಕುಲಪಂಚಾಯಿತಿಗೆ ೨೦೦.೦೦ ರೂಪಾಯಿ ದಂಡ ನೀಡಬೇಕೆಂದು ಹೇಳುತ್ತಾನೆ.

**ಈ. ಅನೈತಿಕ ಸಂಬಂಧ :** ಅನೈತಿಕ ಸಂಬಂಧ ಹೊಂದಿ ಮದುವೆ ಮಾಡಿಕೊಂಡಿರುವ ವೈವಾಹಿಕ

ಸಂಬಂಧಗಳು ಶಾಶ್ವತವಾಗಿ ಉಳಿಯುತ್ತವೆ ಎನ್ನಲಾಗದು. ವಿವಾಹವಾದರೂ ಕೆಲ ದಿನಗಳ ನಂತರ ದಂಪತಿಗಳಿಗೆ ತಾವು ವಾಸಿಸುವ ಸಂದರ್ಭದಲ್ಲಿ ಅಸಂತೃಪ್ತಿ ಉಂಟಾಗಬುದು. ಅಂತಹ ದಾಂಪತ್ಯ ಜೀವನದಲ್ಲಿ ಹೆಣ್ಣು ಅನಿವಾರ್ಯವಾಗಿ ಮುಂದುವರಿಸಿಕೊಂಡು ಹೋಗುತ್ತಾಳೆ. ಇಂತಹ ಸಂದರ್ಭದಲ್ಲಿ ಪುರುಷನು ಅನೈತಿಕ ಲೈಂಗಿಕ ಸಂಬಂಧವೆಂದು ಭಾವಿಸಿಕೊಂಡಿದ್ದರೆ ಸಿಂಧೋಳ್ಳರು ವಿರೋಧಿಸುತ್ತಾರೆ. ಅದು ಅಪರಾಧವೆಂದು ಭಾವಿಸಿಕೊಳ್ಳುತ್ತಾರೆ. ಅನ್ಯ ಸಮುದಾಯದೊಂದಿಗೆ ಅನೈತಿಕ ಸಂಬಂಧ ಹೊಂದುವ ಯಾವುದೇ ಗಂಡು ಹೆಣ್ಣು ಶಿಕ್ಷಾರ್ಹರು. ಆದರೂ ಸಿಂಧೋಳ್ಳರ ಪುರುಷ ತಾನು ತಪ್ಪಿನಿಂದ ಅನೈತಿಕ ಒತ್ತಡದಲ್ಲಿ ಸಿಲುಕಿಕೊಂಡಿರುತ್ತಾನೆ.

ಹುಬ್ಬಳ್ಳಿಯಲ್ಲಿ ಕ್ಷೇತ್ರಕಾರ್ಯಕ್ಕೆ ಹೋದಾಗ ಉಣಕಲ್ಲು ಕೆರೆಯ ಹಿಂಭಾಗದ ಸ್ಮಶಾನದಲ್ಲಿ ಸಿಂಧೋಳ್ಳರ ನ್ಯಾಯ ಪಂಚಾಯಿತಿ ಮಾಡುವುದು ಕಂಡುಬಂದಿತು. ಸಮಾಧಿ ಬಳಿಯಲ್ಲಿ ನೆಲಸಾರಿಸಿ, ಅದರ ಪಕ್ಕದಲ್ಲಿ ರಂಗೋಲಿ ಹಾಕಿ, ಹೂವಿಟ್ಟು ಮನುಷ್ಯನ ತಲೆ ಬುರುಡೆಯನ್ನು ಇಡಲಾಗುವುದು. ಅದಕ್ಕೆ ಅರಿಶಿನ, ಕುಂಕುಮಗಳನ್ನು ಅಲಂಕರಿಸುತ್ತಾರೆ. ನಿಂಬೆಹಣ್ಣನ್ನು ನಾಲ್ಕು ದಿಕ್ಕುಗಳಿಗೂ ಇಡಲಾಗುವುದು. ಅನೈತಿಕ ಸಂದರ್ಭದಲ್ಲಿ ಭಾಗಿಯಾದ ಪುರುಷ ಮತ್ತು ಮುಗ್ಧ ಹುಡುಗಿ ಪಕ್ಕದಲ್ಲಿ ಕುಳಿತುಕೊಂಡಿರುತ್ತಾರೆ. ಕುಲದ ಪೂಜಾರಿ ಇಬ್ಬರು ಕೈಯಲ್ಲಿ ಬೂದಿಯನ್ನು ಕೊಡುತ್ತಾನೆ. "ಬೂದಿಯಿಂದ ಚಿಕ್ಕ ಗುಂಡಾಕಾರದ ಮಾತ್ರೆಗಳು ಮಾಡಬೇಕೆಂದು ಆಜ್ಞೆಮಾಡುತ್ತಾನೆ. ತಪ್ಪು ಮಾಡಿದವರಿಗೆ ಖಂಡಿತ ಕೇಡಾಗುತ್ತದೆ. ಬೇಗ ಬೇಗ ದುಂಡಾಕಾರದ ಗೋಲಿ ಮಾಡಿರಿ ಎಂದು ಹೇಳುತ್ತಾನೆ".[೩೬] "ಗೋಲಿಯಾಕಾರದ ಮಾತ್ರೆಗಳು ಹೆಣ್ಣು ಹುಡುಗಿ ಮಾಡಿರುತ್ತಾಳೆ. ಆದರೆ ತಪ್ಪು ಮಾಡಿರುವ ವ್ಯಕ್ತಿ ಗೋಲಿ ಆಕಾರದ ಮಾತ್ರೆಗಳನ್ನು ಮಾಡುವುದಕ್ಕೆ ಆಗುವುದಿಲ್ಲ".[೩೭] ದೇವಿ ಪ್ರೇರಣೆಯಿಂದ ಈ ರೀತಿ ಆಗುವುದು ಎಂದು ಪೂಜಾರಿಯ ಅಭಿಪ್ರಾಯ.

ಸ್ಮಶಾನದಲ್ಲಿ ಸಾಂಪ್ರದಾಯಿಕ ಆಚರಣೆ ಮುಗಿದ ನಂತರ ಪುರುಷ ತಪ್ಪು ಮಾಡಿರುವುದು ಸಾಬೀತಾಗುವುದು. ನಂತರ ತಾವು ವಾಸಿಸುವ ನೆಲೆಗಳಲ್ಲಿ ಮತ್ತೇ ನ್ಯಾಯ ಪಂಚಾಯತಿ ನಡೆಯುವುದು. ಪೂಜಾರಿ ಕುಲ ಪಂಚಾಯತಿಯಲ್ಲಿ ಎದ್ದು ನಿಂತು ವೀಳ್ಯದಲೆ ಹಿಡಿದುಕೊಂಡು ತಪ್ಪು ಮಾಡಿರುವ ವ್ಯಕ್ತಿಗೆ ಕುಲದಿಂದ ಬಹಿಷ್ಕಾರ ಹಾಕಿ ಹಾಗೂ ೩೦,೦೦೦ ರೂ.ಗಳವರೆಗೆ ದಂಡ ಹಾಕಲಾಗುವುದು ಎಂದು ಹೇಳುತ್ತಾನೆ. ಇದಕ್ಕೆ ತಪ್ಪಿಸ್ಥನು ಒಪ್ಪಿಕೊಂಡು, ಕುಲಪಂಚಾಯತಿ ಜನಗಳಿಗೆ 'ಟೀ' ಕುಡಿಸುತ್ತಾನೆ. ನಂತರ ಕುಲ ಪಂಚಾಯಿತಿ ದಂಡ ನೀಡಿದ ನಂತರ ಕುಲಕ್ಕೆ ಸೇರಿಸಿಕೊಳ್ಳಬೇಕೆಂದು ನಿರ್ಣಯವಾದ ಮೇಲೆ ಕುಲಶುದ್ಧಿಯ ವಿಚಾರ ಬರುತ್ತದೆ. ಕುಲಸ್ಥರೇ ಕುಲಶುದ್ಧಿಯನ್ನೂ ಮಾಡುವರು. ತೆಂಗಿನ ನೀರು ತೆಗೆದುಕೊಂಡು ಹಸುವಿನ ಗಂಜಳವನ್ನು ಸೇರಿಸಿ, ತಪ್ಪಿತಸ್ಥನ ತಲೆಯ ಮೇಲೆ ಚಿಮ್ಮುಕಿಸುತ್ತಾರೆ. ನಂತರ ಬೇವಿನ ಕಡ್ಡಿಗಳಿಂದ ಎಣ್ಣೆಯ ದೀಪದಿಂದ ಕಾಯಿಸಿ ತಲೆಗೆ, ಕೈ ಕಾಲು, ಪಾದಕ್ಕೆ ಬರೆ ಎಳೆಯುತ್ತಾರೆ. ನಂತರ ಈತನ ಕುಲಾಚಾರವಾಯಿತು. ನಮ್ಮ ಕುಲಕ್ಕೆ ಸೇರಿಸಿಕೊಳ್ಳಬಹುದು ಎಂದು ಹೇಳುತ್ತಾನೆ. ತನ್ನ ಖರ್ಚಿನಲ್ಲಿ ಅಲ್ಲಿ ಸೇರಿರುವ ಕುಲಸ್ಥರಿಗೆಲ್ಲಾ ಮಾಂಸದೂಟದ ವ್ಯವಸ್ಥೆ ಮಾಡಬೇಕು. ಇದನ್ನು 'ಕೂಲದೂಟ' ಎನ್ನುತ್ತಾರೆ. ಹೀಗೆ ಒಂದು ಕಾಲದಲ್ಲಿ ಸಿಂಧೋಳ್ಳರಲ್ಲಿ ನಡೆಸುತ್ತಿದ್ದ ನ್ಯಾಯ ಸಂಬಂಧಿ ವಿಚಾರಣೆಯು ವಸ್ತು ನಿಷ್ಠವಾಗಿರುತ್ತಿದ್ದು; ಕುಲಪಂಚಾಯಿತಿಯಲ್ಲಿ ನ್ಯಾಯಕ್ಕೆ ಜಯ

ಲಭಿಸುತ್ತಿತ್ತು. ಅನ್ಯಾಯಕ್ಕೊಳಗಾದರೂ ನಿಜವಾದ ನ್ಯಾಯ ದೊರೆಯುತ್ತಿತ್ತು. ಆದರೆ ಇಂದು ಈ ಕುಲ ಪಂಚಾಯಿತಿಯ ವ್ಯವಸ್ಥೆ ಕ್ಷೀಣಿಸುತ್ತಿದೆ. ಆದರೂ ನ್ಯಾಯ ನಿರ್ಣಯ ಅಷ್ಟೇ ಸಮರ್ಪಕವಾಗಿ ಆಗುತ್ತಿದೆ ಎಂದು ಸಮುದಾಯದ ಅಭಿಪ್ರಾಯವಾಗಿದೆ.[೩೭]

**೭. ನಂಬಿಕೆ - ನಿಷೇಧಗಳು**

ಸಂಸ್ಕೃತಿ ನಿಂತ ನೀರಲ್ಲ. ಅದು ನಿತ್ಯ ಪರಿವರ್ತನಶೀಲ ವಾದುದು. ಕಾಡು ಮಾನವ ನಾಡು, ಮಾನವನಾಗಬೇಕಾದರೆ ಅನೇಕ ಘಟ್ಟಗಳನ್ನು ದಾಟುತ್ತಾ, ಬದಲಾವಣೆ ಹೊಂದುತ್ತಾ ಬಂದಿದ್ದಾನೆ. ಕಾಡಲ್ಲಿ ಗೆಡ್ಡೆ ಗೆಣಸು ತಿಂದು, ಗುಹೆಯಲ್ಲಿ ವಾಸಿಸುತ್ತಿದ್ದ ಮಾನವ ಇಂದು ಬೃಹತ್ ನಗರಗಳಲ್ಲಿ ನೆಲೆ ನಿಲ್ಲಲ್ಲು ಪ್ರಯತ್ನಿಸುತ್ತಿರುವುದು ಆಶ್ಚರ್ಯಕರ. ಎಲ್ಲರ ಬದುಕು ಹೀಗಲ್ಲ, ಪುರಾತನ ಬದುಕಿನ ಪಳೆಯುಳಿಕೆಗಳಂತೆ ಅಲ್ಲಲ್ಲಿ ಈಗಲೂ ಕಾಣಸಿಗುವ ಬುಡಕಟ್ಟು ಸಮುದಾಯಗಳ ಜೀವನ ಮತ್ತು ಸಂಪ್ರದಾಯಗಳು ಕಂಡು ಬರುವಂತಹದು ನಿಜಕ್ಕೂ ಸೋಜಿಗವೇ. ಇವರು ಬದುಕುವುದೆ ಒಂದು ಸಾಹಸ ಎಂದು ಭಾವಿಸುವ ಜನ. ಅಂದು ಸದಾ ಸಂಚಾರಿಗಳಾದ ಇವರು ಅಲ್ಲಲ್ಲಿ ನೆಲೆನಿಂತು ಒಂದೊಂದು ವೃತ್ತಿ, ಕಲೆ ನಿರತರರಾಗಿ, ಆಧುನೀಕರಣ ಸಂಸ್ಕೃತಿಯ ಗಾಳಿಗೆ ಮೈಯೊಡ್ಡಿ ಜೀವನ ಸಾಗಿಸುತ್ತಿರುವ ಅನೇಕ ಬುಡಕಟ್ಟು ಸಮುದಾಯಗಳಿವೆ. ಅವುಗಳಲ್ಲಿ ಸಿಂಧೋಳ್ಳು ಸಮುದಾಯವೂ ಒಂದಾಗಿದೆ. ಈ ಸಮುದಾಯದಲ್ಲಿ ನಂಬಿಕೆ-ನಿಷೇಧಗಳು ಸಂವಿಧಾನವೆಂಬಂತೆ ನಿಯುಮಗಳಾಗಿರುತ್ತವೆ. ಈ ನಿಯಮಗಳಿಗೆ ಬದ್ಧರಾಗಿಯೇ ಸಾಮಾಜಿಕ ವ್ಯವಸ್ಥೆಯಲ್ಲಿ ಜೀವಿಸುತ್ತಾರೆ. ಆ ನಿಮಯಗಳಿಗೆ ವಿರುದ್ಧವಾಗಿ ಯಾವ ಕೆಲಸ ಮಾಡಬಾರದೆಂಬ ನಿಷೇಧಗಳು ಇರುತ್ತವೆ. 'ಮಾಡಬಾರದು ಎಂಬ ಮಿತಿಗಳೇ ನಿಷೇಧಗಳು'. ಇವು ಒಂದು ಪರಂಪರೆಯಂತೆ ಅನೂಚಾನವಾಗಿ ಬೆಳೆದು ಬಂದಿರುತ್ತವೆ.

ನಂಬಿಕೆ ಎಂಬುದು ನಿಜವೆಂದು, ಭಾವಿಸಿ ಪರಂಪರಾನುಗತವಾಗಿ ನಂಬಿಕೊಂಡು, ಅದರಂತೆ ನಡೆದು ಕೊಳ್ಳುವ ಭಾವರೂಪ. ಇದು ಜನರಿಂದ ಜನರಿಗೆ ತಲೆ ಮಾರಿನಿಂದ ತಲೆಮಾರಿಗೆ ನಡೆದು ಬಂದುದಾಗಿದೆ. ಇದು ಸೂಚನೆ, ನಿರ್ದೇಶನ, ಕ್ರಿಯೆಗಳಿದ್ದು "ಜನರು ಒಬ್ಬರಿಂದ ಇನ್ನೊಬ್ಬರಲ್ಲಿ, ಬಾಯಿಂದ ಬಾಯಿಗೆ, ಕಿವಿಯಿಂದ ಕೇಳಿ ನಡೆಯಲ್ಲಿ ತಂದರು. ಮುಂದಿನವರೂ ಮತ್ತೊಬ್ಬರೂ ಅವುಗಳನ್ನು ಕಣ್ಣಾರೆ ಕಂಡು ತನ್ನ ಮನಸ್ಸಿನ ಸಮಾಧಾನಕ್ಕೂ ಅನುಸರಿಸಿಕೊಂಡು ಬಂದಿರಬಹುದೆಂದು".[೩೮] ಭಾವಿಸಲಾಗಿದೆ. ಪರಿಸರಕ್ಕೆ ಅನುಗುಣವಾಗಿ, ಕಾಲಕ್ಕೆ ತಕ್ಕಂತೆ ನಂಬಿಕೆ ನಿಷೇಧಗಳು ಅನ್ವಯಿಸ ಲಾರವಾದರೂ, ಕೆಲವೊಂದನ್ನು ಕಡ್ಡಾಯ ನಿಯಮಗಳಾಗಿ ಪಾಲಿಸುತ್ತಾರೆ. ಕೆಲವು ಅನಗತ್ಯವೆಂದು ತೋರಿದರೂ, ನಂಬಿಕೆಯೆಂಬಂತೆ ಸಾಂಪ್ರದಾಯಿಕವಾಗಿ ಉಳಿಸಿಕೊಂಡಿರುವುದನ್ನು ಗುರುತಿಸಬಹುದು.

ನಂಬಿಕೆ-ನಿಷೇಧಗಳು ಒಂದೊಮ್ಮೆ ಕೆಡುಕನ್ನುಂಟು ಮಾಡುವ ತಮ್ಮ ಸಂಗಾತಿಗಳಿಂದ ದೂರಮಾಡುವ ವೈಚಾರಿಕ ಅಂಶಗಳಾಗಿಯೂ ಇರುತ್ತವೆ. ಮೂಢನಂಬಿಕೆಗಳಾಗಿ ನಿಷೇಧಗಳಿರುವುದು ಇದೆ. ಇಂತಹ ಮೂಢನಂಬಿಕೆಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಅಲೆನ್ ಡಂಡಸ್ ಹೀಗೆ ಹೇಳುತ್ತಾನೆ. "Supes tintits are traditional gapxssions of one or more condition and or more Results with some of the conditions sights and other causes.[39] ನಂಬಿಕೆ ನಿಷೇಧಗಳು ಒಂದೇ ನಾಣ್ಯದ ಎರಡು ಮುಖಗಳು, ಒಂದಕ್ಕೊಂದು ಪೂರಕವಾಗಿರುತ್ತದೆ. ನಂಬಿಕೆ ಭಕ್ತಿ-ಶ್ರದ್ಧೆಯ

ಕಾರಣವಾದರೆ, ನಿಷೇಧಗಳು ಭಯ-ಭೀತಿ ಕಾರಣವಾಗಿರುತ್ತದೆ. ನಂಬಿಕೆ ವಿಶೇಷವಾಗಿ ಶುಭದ ಹಾರೈಕೆಯಾಗಿ ಕಂಡುಬಂದರೆ, ನಿಷೇಧ ಶುಭ ಅಶುಭಗಳ ಲೆಕ್ಕಚಾರವಿರದ್ದಂತೆ. ಮನುಷ್ಯನಿಗೆ ಸಹಜವೂ, ಸ್ವಾಭಾವಿಕವೂ, ಹಿಂದಿನಿಂದಲೂ ಬಳುವಳಿಯಾಗಿ ಬಂದುದು ನಂಬಿಕೆ-ನಿಷೇಧಗಳು. ಆಚರಣೆಗಳು ವಿಧಿ-ವಿಧಾನಗಳಿಗೆ ಪ್ರಾರ್ಥನೆ ಅಥವಾ ಜಾನಪದ ಮನಸ್ಸು ಬದ್ಧವಾಗಿರುತ್ತದೆ. ಈ ಬದ್ಧತೆಯಲ್ಲಿ ಸಿಂಧೋಳ್ಳು ಬುಡಕಟ್ಟು ಸಮುದಾಯವೂ ಬದುಕುತ್ತಾ ಬಂದಿರುವುದನ್ನು ಕಾಣಬಹುದು. ಮೂಲತಃ ಪ್ರಧಾನ ಕಸುಬು ಭಿಕ್ಷಾಟನೆ. ಭಿಕ್ಷಾಟನೆ ಪೂರಕ ಸಾಮಾಗ್ರಿಗಳಾದ ದೇವರ ಮೂರ್ತಿ, ಬುಟ್ಟಿ, ಚಾಟಿ, ಗಂಟೆ, ಬುರ್ರ ಬುರ್ರವಾದ್ಯ ಮುಂತಾದ ಪರಿಕರಗಳ ಮೇಲೆ ನಂಬಿಕೆ ಇದೆ. ಇವರಲ್ಲಿ "ಭಿಕ್ಷೆ ಬೇಡಿದ ಮನೆ ಮಂದಿಯೆಲ್ಲಾ ಬದುಕುತ್ತೇವೆ". ನಮ್ಮ ದೇಹಕ್ಕೆ ಚಾಟಿ ತೆಗೆದುಕೊಂಡು ಮೈಯಿಗೆ ಬಾರಿಸಿಕೊಂಡರೆ ದೇವಿ ತೃಪ್ತಿಯಾಗುತ್ತಾಳೆ. ಬುರ್ರ ಬುರ್ರ ವಾದ್ಯವನ್ನು ಬಾರಿಸಿದರೆ ಅಮ್ಮ ಉಗ್ರರೂಪವಾಗುತ್ತಾಳೆ.[೧೦] ಇತ್ಯಾದಿ ವೈಚಾರಿಕ ಆಲೋಚನೆ ಮೇಲೆ ಅನೇಕ ಆಚರಣೆಗಳು ಹುಟ್ಟಿಕೊಂಡಿವೆ. ಸಾಮಾಜಿಕ ಜೀವನದ ಆಚರಣೆ ಮೇಲೆ ಯಾವುದು ಕೆಲಸ ಮಾಡಬೇಕು, ಮಾಡಬಾರದೂ ಎಂಬ ಅಂಶಗಳನ್ನು ಇಲ್ಲಿ ವಿವರಿಸಲಾಗಿದೆ.

ನಂಬಿಕೆಗಳು

* ಗರ್ಭಿಣಿ ಮಹಿಳೆ 'ಕರಿ ಇದ್ದಿಲು' ಮತ್ತು 'ಕೆಮ್ಮಣ್ಣು' ತಿನ್ನಲು ಬಯಸುವುದುಂಟು.
* ಬಿಸಿ ನೀರಿನಿಂದ ಸ್ನಾನ ಮಾಡುವುದು ಗರ್ಭಿಣಿ ಮಹಿಳೆ ನಂಬಿಕೆಯಾಗಿದೆ.
* ಹುಟ್ಟಿದ ಮಗುವಿಗೆ ಎಣ್ಣೆ ಸ್ನಾನ ಮಾಡಿಸಬೇಕು ಎಂಬ ನಂಬಿಕೆ.
* ಗರ್ಭಿಣಿ ಮಹಿಳೆ ಹೊರಗಡೆ ಹೋಗುವ ಸಂದರ್ಭದಲ್ಲಿ ಕೌದಿ ಹಾಕಿಕೊಳ್ಳಬೇಕು.
* ಹೆಣ್ಣು ಮಕ್ಕಳು ಋತುಮತಿಯಾದರೆ ಗುಡಾರದಿಂದ ೬ ಅಡಿಗಳ ದೂರವಿರಬೇಕು.
* ಋತುಮತಿ ಹುಡುಗಿ ಉಗುರು ಕತ್ತರಿಸುವಂತಿಲ್ಲ.
* ಮದುಮಗ ಕೈಯಲ್ಲಿ ಬಿಳಿವಸ್ತ್ರ ಹಿಡಿದುಕೊಂಡಿರಬೇಕು.
* ಐದು ಜನ ಮುತ್ತೈದೆಯರು ಮದುವೆ ಕಾರ್ಯಕ್ರಮಗಳಲ್ಲಿ ಸುರುಗಿ ನೀರು ಹಾಕಬೇಕು.
* ಮದುವೆ ಇಲ್ಲದೆ ಇದ್ದವರು ಮೋಕ್ಷ ಹೊಂದುವುದಿಲ್ಲವಂತೆ, ಆದಕಾರಣ ಮದುವೆ ಆಗುವುದು ಇವರಲ್ಲಿ ಕಡ್ಡಾಯವಾಗಿದೆ.
* ಮದುಮಗ ಗುಡಾರದ ದೇವರುಗಳಿಗೆ ನಮಸ್ಕಾರ ಮಾಡಬೇಕೆಂಬ ನಂಬಿಕೆ.
* ಶವದ ಮೇಲೆ ಕಬ್ಬಿಣದ ಕುಡುಗೋಲು ಇಟ್ಟರೆ ದೆವ್ವವಾಗುವುದಿಲ್ಲ.
* ಮೃತ ಹೊಂದಿರುವ ವ್ಯಕ್ತಿಯಲ್ಲಿ ಉಡುದಾರ ತೆಗೆಯಬೇಕು.
* ಸತ್ತಿರುವ ವ್ಯಕ್ತಿಯನ್ನು ಗುಂಡಿಯಲ್ಲಿ ಮುಚ್ಚುತ್ತಾರೆ.

* ಹೆಣ್ಣು ಮಗಳು ನೀರಿನ ಕೊಡುಪಾನ ಹೊತ್ತುಕೊಂಡು ಎದುರಿಗೆ ಬಂದರೆ, ಭಿಕ್ಷೆ ಜಾಸ್ತಿ ಬರುವುದೆಂಬ ನಂಬಿಕೆ.

* ಹೂವಿನ ಬುಟ್ಟಿ ಎದುರಾದರೆ ಭಿಕ್ಷೆ ಜಾಸ್ತಿ ಬರುವುದೆಂಬ ನಂಬಿಕೆ.

* ಹಡಪದ ಕ್ಷೌರಿಕದ ವ್ಯಕ್ತಿ ಎದುರಿಗೆ ಬಂದರೆ ಅಂದಿನ ಭಿಕ್ಷೆ ಉತ್ತಮವಾಗಿರುತ್ತದೆ.

* ಕಣಿ ಹೇಳುವ ಕೊರವಂಜಿ ಎದುರಾದರೆ ಭಿಕ್ಷೆ ಹೆಚ್ಚಾಗಿ ಸಿಗುವುದೆಂಬ ನಂಬಿಕೆ.

* ಬುತ್ತಿಗಾಯಿ ಗಂಡು ಹೊತ್ತವರು ಎದುರಾದರೆ ಅಂದಿನ ದಿನ ಭಿಕ್ಷೆಯಲ್ಲಿ ಅನ್ನ ಜಾಸ್ತಿ ಸಿಗುತ್ತದೆಂಬ ನಂಬಿಕೆ.

* ಗರ್ಭವತಿಯು ಎದುರಾದರೆ ಭಿಕ್ಷೆ ಜಾಸ್ತಿ ಬರುವುದು.

* ನಾಯಿ ಮುಖ ನೋಡಿದರೆ ಅಂದಿನ ಭಿಕ್ಷೆ ಜಾಸ್ತಿ ಬರುವುದು.

* ದೇವರ ಬುಟ್ಟಿ ಎದುರಿಗೆ ಬಂದರೆ ಭಿಕ್ಷೆ ಜಾಸ್ತಿ ಬರುವುದು.

* ಪ್ರತಿ ದಿನ ಕುಲದೇವತೆಗಳಿಗೆ ನೆನಪಿಸಿಕೊಂಡರೆ ಭಿಕ್ಷೆ ಜಾಸ್ತಿ ಬರುವುದು ಎಂಬ ನಂಬಿಕೆಯಿದೆ.

* ಬೇಟೆಗೆ ಹೋಗುವ ಸಂದರ್ಭದಲ್ಲಿ ತುಂಬಿದ ನೀರಿನ ಕೊಡಪಾನ ಎದುರಿಗೆ ಬಂದರೆ ಪ್ರಾಣಿ ಪಕ್ಷಿಗಳು ಜಾಸ್ತಿ ಸಿಗುತ್ತವೆ ಎಂದು ಭಾವಿಸುತ್ತಾರೆ.

* ಅಮವಾಸ್ಯೆ ದಿನದಂದು ಬೇಟೆಗೆ ಹೋಗುವುದು ನಂಬಿಕೆ.

* ಬೇಟೆ ಹೋಗುವ ಸಂದರ್ಭದಲ್ಲಿ ನಾಯಿಗಳು ಎದುರಾದರೆ ಒಳ್ಳೆಯದು.

* ಬುಟ್ಟಿಯಿಂದ ನಾವು ಭೂಮಿಯ ಮೇಲೆ ಹುಟ್ಟಿದ್ದೇವೆ. ಅದಕ್ಕಾಗಿ ದೇವಿ ಪೂಜೆ ಮಾಡಬೇಕು.

* ದೇವಿ ಆಜ್ಞೆಯಂತೆ ಧಾರ್ಮಿಕ ಭಿಕ್ಷಾಟನೆ ಮಾಡಲು ನಾವು ಭೂಮಿಯ ಮೇಲೆ ಹುಟ್ಟಿದ್ದೇವೆ ಎಂಬುದು ಈ ಸಮುದಾಯದ ಬಹುದೊಡ್ಡ ನಂಬಿಕೆ.

* ಹಬ್ಬ ಜಾತ್ರೆಗಳಲ್ಲಿ ದೇವಿಗೆ ಪ್ರಾಣಿ ಬಲಿಯನ್ನು ಕೊಡುವುದು.

* ದೇವಿಯನ್ನು ನೆನಪಿಸಿಕೊಂಡರೆ ಮಾಟ ಮಂತ್ರಗಳು ನಮ್ಮ ಹತ್ತಿರ ಸುಳಿಯುವುದಿಲ್ಲ.

* ಬಲಿಕೊಟ್ಟು ಪ್ರಾಣಿಯ ರಕ್ತವನ್ನು ದೇವಿ ಪ್ರಸಾದವಾಗಿ ಕೊಡುವುದು.

* ದೇವರ ಗುಡಾರಗಳಲ್ಲಿ ಪಾದರಕ್ಷೆಗಳು ಹಾಕಿಕೊಂಡು ಹೋಗಬಾರದು.

* ರಾವುಲೋರ್ ದಿನಾಲೂ ದೇವಿಗೆ ಪೂಜೆ ಮಾಡಿದರೆ ಸ್ವರ್ಗ ಪ್ರಾಪ್ತಿಯಾಗುತ್ತೆಂಬುವುದು.

* ಕಂಪ್ಲಿ ದಿಕ್ಕಿಗೆ ಮಿಂಚಿದರೆ ಮಳೆ ಬರುತ್ತದೆಯಂತೆ.

* ಕುಂಬಾರ ಮನೆ ದಿಕ್ಕಿಗೆ ಮಿಂಚಿದರೆ ಮಳೆ ಬಾರದಂತೆ.

* ತೊಗಲಗೊಂಬೆ ಆಟ ಆಡಿಸಿದರೆ ಮಳೆಬರುತ್ತದೆ.

* ಬೇವಿನ ಕಟ್ಟಿಗೆ ಉರಿಸಿದರೆ ತಿಂಗಳಿಗೊಂದು ಹೆಣ ಬೀಳುತ್ತವೆ ಎಂಬ ನಂಬಿಕೆ.

ನಿಷೇಧಗಳು

* ಬಾಣಂತಿಯೂ ಜನನ ಸಂದರ್ಭದಲ್ಲಿ ತವರು ಮನೆಗೆ ಹೋಗುವಂತಿಲ್ಲ.

* ಬಾಣಂತಿಯೂ ಹಳ್ಳ ಹರಿಯುವ ಸ್ಥಳ ಮತ್ತು ನೀರು ಹರಿಯುವ ಸ್ಥಳಕ್ಕೆ ಹೋಗುವಂತಿಲ್ಲ

* ಗರ್ಭಿಣಿಯವರು ದೇವರ ಗುಡಾರದಲ್ಲಿ ಹೋಗುವಂತಿಲ್ಲ.

* ಬಾಣಂತಿ ಗುಡಾರದಲ್ಲಿ ಆಕಳಿಸಬಾರದು ಮತ್ತು ತೇಗಬಾರದು.

* ಮಗುವನ್ನು ಇನ್ನೊಬ್ಬರ ಕೈಯಲ್ಲಿ ಕೊಡಬಾರದು.

* ತಾಯಿಂದರು ಬಂಜೆ ಹೆಣ್ಣಿನ ಎದುರಿಗೆ ತನ್ನ ಮಗುವಿಗೆ ಹಾಲು ಕುಡಿಸಬಾರದಂತೆ.

* ಹಲ್ಲು ಬರವಾಗ ಮಗುವಿನ ಕೊರಳಿನಲ್ಲಿ ಮಂತ್ರ ಕಟ್ಟಿಸಬಾರದೆಂಬ ನಿಷೇಧ.

* ಋತುಮತಿಯಾದ ಹುಡುಗಿ ಹೆಚ್ಚಾಗಿ ಓಡಾಡುವಂತಿಲ್ಲ.

* ಋತುಮತಿಯಾದ ಹುಡುಗಿ ಭಿಕ್ಷೆ ಬೇಡುವಂತಿಲ್ಲ. ಕೂಲಿ ಕೆಲಸ ಮಾಡುವಂತಿಲ್ಲ.

* ಋತುಮತಿಯಾದ ಹುಡುಗಿ ಪರ ಪುರುಷರನ್ನು ನೋಡುವಂತಿಲ್ಲ.

* ತಾಳಿ ಕಟ್ಟುವ ಸಂದರ್ಭದಲ್ಲಿ ಮದುಮಗಳು ನಗಬಾರದು

* ಮದುವೆ ಕಾರ್ಯಕ್ರಮದಲ್ಲಿ ನಾಯಿಗಳು ಬೊಗಳಬಾರದು. ಆದಕಾರಣ ಅವುಗಳನ್ನು ದೂರ ಓಡಿಸುತ್ತಾರೆ.

* ವಧು ವರರು ದೇವರ ಗುಡಾರದಲ್ಲಿ ಪೂಜೆ ಮಾಡುವ ಸಂದರ್ಭದಲ್ಲಿ ಯಾರು ಹೋಗುವಂತಿಲ್ಲ.

* ಶವ ಸಂಸ್ಕಾರದಲ್ಲಿ ಹೋದವರು, ನೇರವಾಗಿ ಗುಡಾರ/ಮನೆಗಳಿಗೆ ಪ್ರವೇಶಿಸುವಂತಿಲ್ಲ.

* ಸತ್ತಿರುವ ಮೃತ ದೇಹವನ್ನು ವೈದ್ಯರಿಂದ ತಪಾಸಣೆ ಮಾಡಿಸುವಂತಿಲ್ಲ.

* ಸತ್ತಿರುವ ಮೃತ ದೇಹವನ್ನು ಮೂರು-ನಾಲ್ಕು ದಿವಸಗಳವರೆಗೂ ಇಟ್ಟು ಕೊಳ್ಳುವಂತಿಲ್ಲ.

* ಭಿಕ್ಷೆ ಹೋಗುವ ಸಂದರ್ಭದಲ್ಲಿ ಬೆಕ್ಕು ಎದುರಾದರೆ ಭಿಕ್ಷೆಗೆ ಹೋಗುವಂತಿಲ್ಲ. ಸ್ವಲ್ಪ ಸಮಯದ ನಂತರ ಹೋಗಬೇಕು.

* ಕಟ್ಟಿಗೆ ಹೊರೆ ಎದುರಿಗೆ ಬಂದರೆ ಭಿಕ್ಷಾಟನೆ ಹೋಗುವಂತಿಲ್ಲ

* ವಿಧವೆಯಾದವರು ಎದುರಿಗೆ ಬಂದರೆ ಭಿಕ್ಷಾಟನೆಗೆ ಹೋಗುವಂತಿಲ್ಲ.

* ಕುಂಬಾರದವನು ಹೊಸ ಗಡುಗೆ ಎದುರಿಗೆ ತೆಗೆದುಕೊಂಡು ಬಂದರೆ ಭಿಕ್ಷೆಗೆ ಹೋಗುವಂತಿಲ್ಲ.

* ಭಿಕ್ಷೆಗೆ ಹೋಗುವ ಸಂದರ್ಭದಲ್ಲಿ ಮೃತದೇಹ ಎದುರಾದರೆ ಭಿಕ್ಷಾಟನೆ ಮಾಡಲಿಕ್ಕೆ ಹೋಗುವಂತಿಲ್ಲ.

* ಬೇಟೆಗೆ ಹೋಗುವ ಸಂದರ್ಭದಲ್ಲಿ ಬೇರೆ ಸಮುದಾಯದವರನ್ನು ಕರೆದುಕೊಂಡು ಹೋಗುವಂತಿಲ್ಲ.

* ಬೇಟೆಗೆ ಹೋಗುವ ಸಂದರ್ಭದಲ್ಲಿ ಋತುಮತಿ ಹುಡುಗಿ ಗುಡಾರದಲ್ಲಿ ಇರುವಂತಿಲ್ಲ.

* ಕರಡಿ, ಕಾಡೆಮ್ಮೆ, ನವಿಲು ಬೇಟೆ ನಿಷೇಧವಾಗಿದೆ.

* ಮಳೆ ಗುಡುಗು ಬಂದರೆ ಹೆಚ್ಚಾಗಿ ಹೊರಗಡೆ ಹೋಗುವಂತಿಲ್ಲ.

* ಮಾಗಿ ಮಳೆ ಬಂದರೆ ಕೂಲಿ ಕೆಲಸಕ್ಕೆ ಹೋಗುವಂತಿಲ್ಲ.

* ಕಣದ ಸುತ್ತಲೂ ದಾಂಗಡಿನ ಬಳಿ ಇರಬಾರದಂತೆ.

* ಬಿಲ್ವಪತ್ರೆ ಮತ್ತು ಬೇವಿನ ಮರ ಕಡಿಯಬಾರದಂತೆ.

* ಎಕ್ಕೆ ಗಿಡ ಹೂವು ಮನೆಯಲ್ಲಿ ತರಬಾರದಂತೆ.

**ಅಡಿ ಟಿಪ್ಪಣಿಗಳು**

೧. ದೇ. ಜವರೇಗೌಡ, ಜನಪದ ಅಧ್ಯಯನ, ಡಿ.ವಿ.ಕೆ.ಮೂರ್ತಿ ಕೃಷ್ಣಮೂರ್ತಿಪುರಂ, ಮೈಸೂರು, ಪು. ೩೪೩

೨. ಎಂ. ಭೈರೇಗೌಡ, ಇರುಳಿಗರು ಜಾನಪದ ಅಧ್ಯಯನ, ಸಿ.ವಿ.ಜಿ.ಪಬ್ಲಿಕೇಷನ್, ಬೆಂಗಳೂರು, ೨೦೦೧, ಪು.೧೬೯

೩. ವಕ್ತೃ: ಸಿಂಗಾರೆಪ್ಪ, (೬೦), ದೇವರ ಬೇಡಿಕೊಂಡವರು: ಗುಡಾರ ನಗರ, ಬಳ್ಳಾರಿ, ಸಂದರ್ಶನ ದಿನಾಂಕ: ೦೭.೦೬.೨೦೦೩

೪. ವಕ್ತೃ: ಮಾರಕ್ಕ (೪೦) ಗಂಡ ಜಂಬಯ್ಯ, ಗುಡಾರನಗರ, ಬಳ್ಳಾರಿ, ಸಂದರ್ಶನ ದಿನಾಂಕ: ೦೭.೦೬.೨೦೦೩

೫. ವಕ್ತೃ: ಜಂಬಕ್ಕ (೩೬) ಎಡೆ ಮಾಹಿತಿ ಹೇಳಿದವರು: ತೆಕ್ಕಲಕೋಟೆ ಶಿರಗುಪ್ಪ ತಾ. ಸಂದರ್ಶನ ದಿನಾಂಕ: ೦೮.೦೬.೨೦೦೩

೬. ವಕ್ತೃ: ಜಂಬಕ್ಕೆ (೩೬) ತೆಕ್ಕಲಕೋಟೆ, ಶಿರಗುಪ್ಪ ತಾ. ಬಳ್ಳಾರಿ ಜಿಲ್ಲೆ.

೭. ಅವರೇ

೮. ಅವರೇ

೯. ಅವರೇ

೧೦. ವಕ್ತೃ: ಸಿಂಗಾರೆಪ್ಪ (೬೦), ಗಾಳೆಪ್ಪ ರಾವುಲೋರ್ ನಾಗಪ್ಪ ಮತ್ತಿತರರು, ಕುಲಪಂಚಾಯತಿಯಲ್ಲಿ ಭಾಗವಹಿಸಿದವರು, ಗುಡಾರ ನಗರ, ಬಳ್ಳಾರಿ

೧೧. ವಕ್ತೃ: ಸಿಂಗಾರೆಪ್ಪ (೬೦), ಗುಡಾರ ನಗರ ಶ್ರೀಧರಗಡ್ಡೆ, ಬಳ್ಳಾರಿ.

೧೨. ವಕ್ತೃ: ಮಾರೆಪ್ಪ (೪೦), ತೆಕ್ಕಲಕೋಟೆ, ಶಿರಗುಪ್ಪ ತಾ. ಬಳ್ಳಾರಿ ಜಿಲ್ಲೆ.

೧೩. ವಕ್ತೃ: ಜಂಬಕ್ಕ (೩೦), ತೆಕ್ಕಲಕೋಟೆ, ಶಿರಗುಪ್ಪ ತಾ. ಬಳ್ಳಾರಿ ಜಿಲ್ಲೆ.

೧೪. ಅವರೇ

೧೫. ಅವರೇ

೧೬. ಚಂದ್ರಶೇಖರ ಬಿ. ದಾಮ್ಲೆ., ಭಾರತೀಯ ಸಾಮಾಜಿಕ ಅಧ್ಯಯನ, ಪು.೫೩

೧೭. ಗಂಗಾಧರ ದೈವಜ್ಞ, ಬುಡಕಟ್ಟು ಅಧ್ಯಯನದ ಮಾಲೆ-೨, ಬುಡಕಟ್ಟು ಸಮಾಜ ಹುಟ್ಟು ಸಾವಿನ ನಡುವೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೧೮. ವಕ್ತೃ: ಡಿ. ನಾಗಪ್ಪ, ಸಿಂಧೋಳ್ಳು ಆಶ್ರಯ ಕಾಲೋನಿ, ಕಂಪ್ಲಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.

೧೯. ವಕ್ತೃ: ಸಿಂಗಾರೆಪ್ಪ (೬೦), ಗುಡಾರ ನಗರ ಶ್ರೀಧರಗಡ್ಡೆ, ಬಳ್ಳಾರಿ ಜಿಲ್ಲೆ

೨೦. ಅವರೇ

೨೧. ಅವರೇ

೨೨. ಅವರೇ

೨೩. ವಕ್ತೃ: ನಾಗಪ್ಪ (೩೨), ಸಿಂಧೋಳ್ಳು ಆಶ್ರಯ ಕಾಲೋನಿ, ಕಂಪ್ಲಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.

೨೪. ವಕ್ತೃ: ರಾಜಮ್ಮ ಗಂಡ ಸಿಂಗಾರೆಪ್ಪ, ಗುಡಾರನಗರ, ಬಳ್ಳಾರಿ

೨೫. ವಕ್ತೃ: ಸಿಂಧೋಳ್ಳು ಸಣ್ಣ ರಾಮಪ್ಪ (೫೫), ತೆಕ್ಕಲಕೋಟೆ, ಶಿರಗುಪ್ಪ ತಾ. ಬಳ್ಳಾರಿ ಜಿಲ್ಲೆ

೨೬. ಬೈರೇಗೌಡ ಎಂ., ಇರುಳಿಗರು ಜಾನಪದ ಅಧಯನ, ಸಿ.ವಿ.ಜಿ. ಪಬ್ಲಿಕೇಷನ್ ಬೆಂಗಳೂರು, ಪು. ೧೯೩

೨೭. Quoted by Lal Srivastave, Folk Cultural and Oral Tradition, 1974, p.125

೨೮. ವಕ್ತೃ: ರಾವುಲೋರ್ ಮಹೇಶಪ್ಪ (೪೦), ಹಿರೇಲಿಂಗೇಶ್ವರ ಕಾಲೋನಿ ಸುಕಾಂಪೇಟೆ, ಸಿಂಧನೂರು ತಾ. ರಾಯಚೂರು ಜಿಲ್ಲೆ.

೨೯. ಅವರೇ

೩೦. ವಕ್ತೃ: ಬಿಚ್ಚಪ್ಪ (೫೫), ಬಸವನಗರ, ಗುಲ್ಬರ್ಗಾ

೩೧. ಮೈತ್ರಿ ಕೆ.ಎಂ., ಬುಡಕಟ್ಟು ಅಧ್ಯಯನ ಪತ್ರಿಕೆ (ಲೇ) ಬುಡಕಟ್ಟು ನ್ಯಾಯ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ಪು. ೧೫೧

೩೨. ವಕ್ತೃ: ಸಿಂಗಾರೆಪ್ಪ (೬೦), ಗುಡಾರ ನಗರ ಶ್ರೀಧರಗಡ್ಡೆ, ಬಳ್ಳಾರಿ

೩೩. ನ್ಯಾಯ ಪಂಚಾಯಿತಿ ಮಾಡುವ ಸ್ಥಳ: ಹುಬ್ಬಳಿ ಉಣಕಲ್ಲು ಕೆರೆಯ ಹಿಂಭಾಗ

೩೪. ವಕ್ತೃ: ಕುಂಟೆಪ್ಪ (೩೦), ಸಿದ್ದೇಶ್ವರ ನಗರ (ಉಣಕಲ್ ಕೆರೆ ಹತ್ತಿರ), ಹುಬ್ಬಳ್ಳಿ

೩೫. ಅವರೇ

೩೬. ತಪ್ಪು ಮಾಡಿರುವ ವ್ಯಕ್ತಿ ಮಾರಪ್ಪ ಮತ್ತು ನಿರಾಪರಾಧಿಯಾದ ಜಂಬಲ್ಲಮ್ಮ, ಸಿದ್ದೇಶ್ವರ ನಗರ, ಹುಬ್ಬಳ್ಳಿ

೩೭. ವಕ್ತೃ: ಮಾರೆಪ್ಪ (೬೦), ಸಿದ್ದೇಶ್ವರ ನಗರ, ಹುಬ್ಬಳ್ಳಿ ಸಂದರ್ಶನ ದಿನಾಂಕ: ೧೯.೦೫.೨೦೦೩

೩೮. ಮಂಜುನಾಥ ಬೇವಿನಕಟ್ಟೆ., ಜನಪದ ನಂಬಿಕೆಗಳು, ೧೯೯೬, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ

೩೯. ಥಾಮಸ್ ಪುಲ್ಲರ್., ಜಾನಪದ ಸ್ವರೂಪ ಮತ್ತು ಸಾಹಿತ್ಯ, ೧೯೯೭, ಕರ್ನಾಟಕ ಸಾಹಿತ್ಯ ಪರಿಷತ್, ಬೆಂಗಳೂರು.

೪೦. ವಕ್ತೃ: ಪೂಜಾರಿ ಜಂಬಯ್ಯ (೪೦), ಭಾಗ್ಯನಗರ ಕ್ಯಾಂಪ್, ಹಿರೇಜಂತಕಲ್ ಗಂಗಾವತಿ ತಾ. ಕೊಪ್ಪಳ ಜಿಲ್ಲೆ.

ಅಧ್ಯಾಯ - ೫

# ಧಾರ್ಮಿಕ ಹಬ್ಬಾಚರಣೆಗಳು

೧. ಧಾರ್ಮಿಕತೆ

೨. ಹಬ್ಬಗಳು

೩. ಜಾತ್ರೆಗಳು

೪. ಹರಕೆ

೫. ಬಲಿ ಆಚರಣೆ



# ಧಾರ್ಮಿಕ ಹಬ್ಬಾಚರಣೆಗಳು

ಬುಡಕಟ್ಟು ಸಮುದಾಯಗಳು ಧಾರ್ಮಿಕ ಆಚರಣೆಗಳಿಗೆ ಮೊದಲ ಆದ್ಯತೆಯನ್ನು ನೀಡಿವೆ. ಇಂದು ಬುಡಕಟ್ಟುಗಳ ಸಂಸ್ಕೃತಿ ಎಂದು ಹೆಸರಿಸುತ್ತಿದ್ದೇವೆಯೋ ಅದು ವಾಸ್ತವವಾಗಿ ವಿವಿಧ ಸಮುದಾಯಗಳು ದೇವರ ಮೇಲಿನ ಗಾಢವಾದ ನಂಬಿಕೆ, ಭಕ್ತಿಯಿಂದ ತಮ್ಮ ಜೀವನ ರೂಪಿಸಿಕೊಂಡು, ಅರಳಿ ನಿಂತಿರುವಂಥದ್ದು. ಭಾರತದ ಬುಡಕಟ್ಟು ಸಮುದಾಯಗಳ ಸಂಸ್ಕೃತಿಯ ಧಾರ್ಮಿಕ ವಿಚಾರಗಳ ಸಂಗ್ರಹಾಲಯವಾಗಿದೆ. ಹಾಗೂ ಅವರವರ ಸಂಸ್ಕೃತಿಯ ಅನೇಕ ಆಚರಣೆಗಳು ಅನೇಕ ಬುಡಕಟ್ಟು ಸಮುದಾಯಗಳಲ್ಲಿ ವಿಭಿನ್ನ ದೃಷ್ಟಿಯಲ್ಲಿ ಮಿಶ್ರಣವಾಗಿದೆ. ಇಂದಿನ ಆ ಎಲ್ಲಾ ವಿಭಿನ್ನ ದೃಷ್ಟಿಕೋನದ ಪರಸ್ಪರವಾದ ವೈಶಿಷ್ಟ್ಯಗಳೂ ಭಾರತೀಯ ಬುಡಕಟ್ಟು ಸಮುದಾಯಗಳಲ್ಲಿ ಧಾರ್ಮಿಕ ಆಚರಣೆಗಳು ಉನ್ನತ ಸ್ಥಾನಮಾನವನ್ನು ಪಡೆದುಕೊಂಡಿವೆ.

ಭಾರತದೇಶದಲ್ಲಿ ಬುಡಕಟ್ಟು ಸಮುದಾಯಗಳಿಗೆ ಪ್ರಾಚೀನ ಇತಿಹಾಸವಿದೆ. ಜೊತೆಗೆ ವಿಶಿಷ್ಟ ಸ್ಥಾನಮಾನವೂ ಇದೆ. ಈ ಹಿನ್ನೆಲೆಯಲ್ಲಿ ಬುಡಕಟ್ಟು ಸಮುದಾಯಗಳು ದೇವರ ಮೇಲಿನ ಪ್ರಭಾವದಿಂದ ಇಡೀ ವಿಶ್ವದಲ್ಲಿ ಮಾದರಿಯಾಗಿವೆ ಹಾಗೂ ಅದನ್ನು ರೂಪಿಸುವ, ಬೆಳಸುವ ಬಹುಸಂಖ್ಯಾತ ಬುಡಕಟ್ಟು ಸಮುದಾಯಗಳಿಗಿಂತ ಎಲ್ಲಾ ಕ್ಷೇತ್ರಗಳಲ್ಲಿಯೂ ವೈವಿಧ್ಯಮಯವೆನಿಸಿವೆ.

ಶತಶತಮಾನಗಳಿಂದ ಬುಡಕಟ್ಟು ಸಮುದಾಯಗಳಲ್ಲಿ ಸಮ್ಮಿಶ್ರ ಧಾರ್ಮಿಕ ಸಂಸ್ಕೃತಿ ರೂಪ ತಳೆಯುತ್ತಿದೆ. ಈ ಬಗೆಯ ಸಮುದಾಯಗಳು ಧಾರ್ಮಿಕ ಸಂಗಮದ ಹಾಗೂ ಸಮ್ಮಿಶ್ರಣದ ಅಪೂರ್ವ ಕ್ಷೇತ್ರವಾಗಿ ಪರಿಣಮಿಸಿದೆ. ಇಲ್ಲಿನ ಬುಡಕಟ್ಟು ಜನರು ತಾವು ಎಲ್ಲೆಲ್ಲಿ ವಾಸವಾಗಿದ್ದಾರೋ, ಅಲ್ಲೆಲ್ಲಾ ದೇವರುಗಳನ್ನು ಅವಲಂಬಿಸಿ, ಭಕ್ತಿಭಾವ ಆಚರಣೆಗಳ ಮೂಲಕ ನಡೆದುಕೊಳ್ಳುತ್ತಾ ಬಂದಿದ್ದಾರೆ ಎಂಬುವುದು ಮರೆಯುವಂತಿಲ್ಲ.

ಪರಂಪರೆಯಿಂದ ಬಂದ ಧಾರ್ಮಿಕ ಶ್ರದ್ಧೆಯೇ ತಮ್ಮ ಬಾಳಿನ ಆಧಾರವೆಂದು ನಂಬಿದ್ದಾರೆ. ಹೀಗಾಗಿ ಜೀವನದುದ್ದಕ್ಕೂ ಎದುರಾಗುವ ಎಲ್ಲಾ ಸಮಸ್ಯೆ ತೊಡಕು ತೊಂದರೆಗಳಿಗೂ ಕಾರಣವಾದ ಶಕ್ತಿಯೊಂದಿದೆ ಎಂದು ಬುಡಕಟ್ಟು ಸಮುದಾಯಗಳು ನಂಬುತ್ತಾರೆ. ಇವರ ಪ್ರಕಾರ ಮಾನವನಿಗೆ ಬರುವ ರೋಗಗಳನ್ನು ದೇವರೆಂದು ಕರೆದರು. ಪ್ಲೇಗು ಬಂದಾಗ ಪಕಳದಮ್ಮ, ದಡಾರ ಬಂದಾಗ ಸೀತಾಳಮ್ಮ, ಹುಚ್ಚುತನ ಬಂದಾಗ ಹುಚ್ಚಮ್ಮ, ಭೇದಿ ಬಂದಾಗ ಕುಕ್ಕಲದಮ್ಮ, ಮೈಗೆ ಉರಿಬಂದಾಗ ಉರಿಮಾರಮ್ಮ, ಸ್ಮಶಾನವನ್ನು ಸಂಕೇತಿಸುವ ಮಸಣಮ್ಮ, ನೀರನ್ನು ಗಂಗಮ್ಮ, ಗುಡ್ಡ ಕಾಯುವವಳು

ಗುಡ್ಡದಮ್ಮ, ಕೋಟೆ ಕಾಯುವವಳು ಕೋಟೆಮ್ಮ, ಓಣಿ ಕಾಯುವವಳು ಓಣೆಮ್ಮ, ಪೆಟ್ಟಿಗೆ ಕಾಯುವವಳು ಪೆಟ್ಟಿಗೆಮ್ಮ, ಬುಟ್ಟಿಯಲ್ಲಿರುವಳು ಬುಟ್ಟಿ ದುರಗಮ್ಮ ಇತ್ಯಾದಿ ಎಲ್ಲಾ ದೇವತೆಗಳ ಅನುಗ್ರಹದಿಂದಲೇ ಆಗಿವೆ ಎಂದು ಭಾವಿಸುತ್ತಾರೆ. ಮಾತೃ ದೇವತಾ ಪಂಥದ ಜನಪದ ರೂಪಗಳೇ ಗ್ರಾಮದೇವತೆಗಳು.[೧] ಇದರಿಂದ ಭಯ, ಭಕ್ತಿ ಭೀತಿಯಿಂದ ಮರ, ಕಲ್ಲಿನ ಶಿಲೆಗಳನ್ನು ಆರಾಧಿಸುತ್ತಿದ್ದ ಬುಡಕಟ್ಟು ಜನರು ಹಿಂದಿನ ಕಾಲದಿಂದ ಇಂದಿನ ಕಾಲದವರೆಗೂ ತಮ್ಮ ಕುಲದೇವತೆಗಳಿಗೆ ನಡೆದುಕೊಂಡು ಬಂದಿದ್ದಾರೆ.

ಪ್ರಾಚೀನ ಕಾಲದಿಂದಲೂ ತಮ್ಮ ಪುರಾಣ ಸಾಹಿತ್ಯ, ಮೌಖಿಕ ಕಥೆಗಳನ್ನು ಅವಲೋಕಿಸಿದರೆ "ಅರಣ್ಯ ವಾಸಿಗಳಾದ ಬುಡಕಟ್ಟು ಸಮುದಾಯಗಳು ತಾವು ಪೂಜಿಸುವ ಪ್ರೇತಾತ್ಮಗಳು ಗ್ರಾಮ ಸಮುದಾಯಗಳು ಬೆಳೆದ ಮೇಲೆ ಗ್ರಾಮ ದೇವತೆಗಳಾಗಿ ಮಾರ್ಪಾಟು ಹೊಂದಿರುವ ಸಾಧ್ಯತೆಗಳಿವೆ".[೨] ಈ ಹಿನ್ನೆಲೆಯಲ್ಲಿ ಬುಡಕಟ್ಟು ಸಮುದಾಯಗಳ ಧಾರ್ಮಿಕ ಅನುಕರಣೆಯಿಂದ ಗ್ರಾಮಗಳಲ್ಲಿ ಇಂದು ಮಾತೃ ದೇವತೆಗಳನ್ನು ಕಾಣಬಹುದು. ಇದರ ಜೊತೆಯಲ್ಲಿ ಬುಡಕಟ್ಟು ಸಮುದಾಯದ ವ್ಯಕ್ತಿಗಳು ಮೃತರಾದ ಹಿರಿಯ ವ್ಯಕ್ತಿಗಳು, ನಂತರದ ಹಲವು ವರ್ಷಗಳನ್ನು ಕಳೆದಂತೆ ಕುಲದೇವತೆ ಅಥವಾ ಸಾಂಸ್ಕೃತಿಕ ವೀರರಾಗುತ್ತಾರೆ. "ಸಾಮಾಜಿಕ ಎಡರು ತೊಡರುಗಳಿಗೆ ಎದೆಗುಂದದೆ ಕೈಗೊಂಡ ಕಾರ್ಯ ಸಂಕಲ್ಪವನ್ನು ಉತ್ಸಾಹದಿಂದ ಸಾಧಿಸಿ ಸತ್ತವರನ್ನು ವೀರನೆನ್ನುತ್ತಾರೆ. ವೀರತ್ವವೆಂಬುದು ಉತ್ತಮ ಪ್ರಕೃತಿಯವರ, ಉದಾತ್ತ ಸ್ವಭಾವ, ಪರೋಪಕಾರಿ, ಭಕ್ತಿ, ದಯೆ, ದಾನ, ತ್ಯಾಗ, ಪ್ರೇಮ ಹೀಗೆ ಯಾವ ಸ್ವಭಾವದಲ್ಲಾದರೂ ಗುರುತಿಸಬಹುದು. ಉದಾಹರಣೆಗಾಗಿ ಭಕ್ತಿಯಲ್ಲಿ ಬೇಡರ ಕಣ್ಣಪ್ಪ - ತ್ಯಾಗ; ದಾನದಲ್ಲಿ - ಕರ್ಣ; ಸತ್ಯದಲ್ಲಿ - ಹರಿಶ್ಚಂದ್ರ; ಪ್ರೇಮದಲ್ಲಿ - ಶ್ರೀಕೃಷ್ಣ; ಯುದ್ಧದಲ್ಲಿ - ಅರ್ಜುನ ಹೀಗೆ ಹಲವು ಬಗೆಯ ವೀರರನ್ನು ಗುರುತಿಸಬಹುದೆಂದು".[೩] ಹಾಗೆಯೇ ಮಹಾಸತಿಯರಾದ ಹೆಣ್ಣು ಮಾತೃ ಸ್ಥಾನದಲ್ಲಿ ನಿಂತುಕೊಂಡು ದೇವತೆಯರೆನಿಸಿಕೊಂಡಿದ್ದಾರೆ. ಅವುಗಳಲ್ಲಿ ಲಕ್ಷ್ಮಿ, ಸರಸ್ವತಿ, ಪರಮೇಶ್ವರಿ, ಕಾಳಿ, ದುರ್ಗಾಂಬಿಕೆ ಇತ್ಯಾದಿಗಳು. ಅಂತಹ ವೀರರಿಗೂ ಮತ್ತು ಮಾತೃದೇವತೆಗಳಿಗೂ ಎಲ್ಲ ಶುಭ-ಸಂದರ್ಭಗಳಲ್ಲಿ ಮೊದಲ ಪೂಜೆ ಸಲ್ಲುತ್ತದೆ.

ಮಾತೃ ದೇವತೆಗಳ ಆರಾಧನೆಯ ಚರಿತ್ರೆಯಲ್ಲಿ ಸಿಂಧೋಳ್ಳು ಸಮುದಾಯ ಪೂರ್ವಕಾಲದಲ್ಲಿ ಬಳಕೆಯಲ್ಲಿತ್ತೆಂಬುದಕ್ಕೆ ಮೌಖಿಕ ಸಾಕ್ಷ್ಯಾಧಾರಗಳು ದೊರೆಯುತ್ತದೆ. ಇವರಲ್ಲಿ ದೊರೆತಿರುವ ಅನೇಕ ಸ್ತ್ರೀವಿಗ್ರಗಳು ಮಾತೃದೇವತಾ ಪಂಥಕ್ಕೆ ಸಂಬಂಧಿಸಿದವುಗಳು ಎಂಬುದಾಗಿದೆ. ಈ ಬಗೆಯ ಸ್ತ್ರೀವಿಗ್ರಹಗಳು ಇವರು ವಾಸಿಸುವ ಪ್ರದೇಶಗಳ ನಾನಾ ಕಡೆಗಳಲ್ಲಿ ಅಮ್ಮನ ಮೂರ್ತಿ ಪೆಟ್ಟಿಗೆಗಳು ದೊರೆಯುತ್ತವೆ. ಇವರಲ್ಲಿ ಈರನಾಗಮ್ಮ ಮತ್ತು ಪ್ರಾಣಿ ವಿಶೇಷವಾದ ಕುದುರೆ ವಿಗ್ರಹ ಆಸಕ್ತಿಯನ್ನು ಹೊಂದಿದಳಂತೆ. ಧಾರ್ಮಿಕ ಭಿಕ್ಷಾಟನೆಗಾಗಿ ಮೂಲಧಾರದಿಂದ ಹೆಣ್ಣಿನ ಬಗ್ಗೆಯೂ ಮತ್ತು ಆಹಾರ ಮೂಲವಾದರಿಂದ ಪ್ರಾಣಿಗಳ ಬಗ್ಗೆಯೂ ಇದರಲ್ಲಿ ಮೊದಲಿನ ಸ್ಥಿತಿ ಬೆಳದಿರಬೇಕು.

ಸಿಂಧೋಳ್ಳುರು ಆಹಾರಸಂಗ್ರಹಣೆಯಲ್ಲಿ ಮತ್ತು ಬೇಟೆಯಲ್ಲಿ ತೊಡಗಿದವರಾಗಿದ್ದರಿಂದ ಅವರ ಧಾರ್ಮಿಕ ವಿಚಾರಗಳು ಹೆಣ್ಣು ಮತ್ತು ಪ್ರಾಣಿಗಳಿಗೆ ವಿಶೇಷ ಸ್ಥಾನಮಾನ ಕಲ್ಪಿಸಿಕೊಟ್ಟಿವೆ. ಈ ಕಾರಣಕ್ಕಾಗಿ ಪ್ರಾರಂಭದ ಕಲಾಚಿತ್ರಗಳಲ್ಲಿ ಪ್ರಾಣಿಗಳ ಚಿತ್ರಗಳೇ ಅಧಿಕವಾಗಿದೆ. ಅವುಗಳಲ್ಲಿ ಪೆಟ್ಟಿಗೆ, ಪೋತರಾಜನ

ಮುಖವಾಡಗಳು, ಬುರ್ರ ಬುರ್ರವಾದ್ಯ, ಈಚಲ ಮರದ ದೃಶ್ಯಗಳು, ಕಲಾವರ್ಣರಂಜಿತದಲ್ಲಿ ಚಿತ್ರಿಸಲಾಗಿದೆ. ಹೀಗೆ ಸ್ತ್ರೀಯರಿಂದ ಆರಂಭವಾದರೆ ಪುರುಷನು ಈ ಸಮುದಾಯದಲ್ಲಿ ದೇವರೆನಿಸಿಕೊಂಡು ಭಿಕ್ಷಾಟನೆಯಿಂದ ಧಾರ್ಮಿಕ ಭಿಕ್ಷುಕರ ಕಲಾಕಾರನಾಗಿದ್ದಾನೆ. ಅಂಥವರಲ್ಲಿ 'ಮುನಿಸ್ವಾಮಿ' ಎಂಬುವನು ಪಿತೃ ಪ್ರಧಾನ ಸಮಾಜದ ಮೂಲ ದೈವವಾಗಿದ್ದಾನೆ. ಈ ಹಿನ್ನೆಲೆಯಲ್ಲಿ ಸಿಂಧೋಳ್ಳು ಸಮುದಾಯದ ಧಾರ್ಮಿಕ ಜೀವನ ಸ್ತ್ರೀ ಮತ್ತು ಪುರುಷನ ಸುತ್ತ ಹೆಣೆದುಕೊಂಡಿರುವುದನ್ನು ದೇವರ ಗುಡಾರಗಳಲ್ಲಿ ಕಾಣಬಹುದಾಗಿದೆ.

ಆಧುನಿಕ ದಿನಗಳಲ್ಲಿ ಸಿಂಧೋಳ್ಳರ ಧಾರ್ಮಿಕ ಜೀವನ ಮತ್ತು ಆಚರಣೆಗಳಲ್ಲಿ ಸುಸಂಸ್ಕೃತ ವಿಚಾರವಾದಿಗಳಾಗಿದ್ದಾರೆ. ಇವರು ಮಳೆ, ಗುಡುಗು, ಸಿಡಲು, ಮಿಂಚು, ಗಿಡಮರ, ಪಾತ್ರೆ ಪಡಗ, ಭಿಕ್ಷೆಕೊಡುವ ಜನ ತಮ್ಮ ಪಾಲಿನ ದೇವರುಗಳೆಂದು ಭಾವಿಸುತ್ತಾರೆ. ಗುಡಾರದಲ್ಲಿ ಪ್ರತಿಯೊಂದು ವಸ್ತುವಿನಲ್ಲೂ ದೇವರು ಇದ್ದಾನೆ ಎಂದು ತಿಳಿದುಕೊಳ್ಳುತ್ತಾರೆ. ಅವುಗಳ ಆರಾಧನೆಯ ಮೂಲಕ ನಿರಂತರವಾಗಿ ಪೂಜಿಸುತ್ತಾರೆ. ಈ ಸಮುದಾಯವು ಯಾವುದೇ ಅನ್ಯ ಧರ್ಮಗಳಿಗೆ, ಸಿದ್ಧಾಂತಗಳಿಗೆ ಕಟ್ಟುಬಿದ್ದಿಲ್ಲ. ಅನೇಕ ದೇವರುಗಳನ್ನು ಪೂಜಿಸುವುದಿಲ್ಲ. ಮಠಗಳಿಗೆ ನಡೆದುಕೊಳ್ಳುವುದಿಲ್ಲ. ದಿನನಿತ್ಯದ ಕಾರ್ಯಕ್ರಮಗಳಲ್ಲಿ ತಮ್ಮ ಪವಿತ್ರವಾದ ಗುಡಾರವನ್ನು 'ದೇವರಮನೆ' ಎಂದು ತಿಳಿದುಕೊಂಡಿದ್ದಾರೆ. ತಮ್ಮ ಕುಲದೈವಗಳು ನಮ್ಮ ಸಂತತಿಗೆ ಮೂಲ ಕಾರಣ." ಅಮ್ಮನ ಪೆಟ್ಟಿಗೆಯೇ ನಮಗೆ ಆಧಾರ, ಬುರ್ರ ಬುರ್ರ ವಾದ್ಯವೇ ನಮಗೆ ಜೀವನದಾರಿ, ನಮ್ಮ ಮೈಯಿಗೆ ಹೊಡೆದುಕೊಳ್ಳುವ ಚಾಟಿ ಅಮ್ಮ ದೇವರಿಗೆ ತೃಪ್ತಿಪಡಿಸುವ ಪ್ರಸಾದವಂತೆ." ಹೀಗೆ ತಮ್ಮ ಜೀವನ ಕ್ರಮದ ಆಚರಣೆಗಳನ್ನು ಹಲವು ರೀತಿಯಲ್ಲಿ ವಿಶ್ಲೇಷಿಸಿಕೊಳ್ಳಲು ಪ್ರಯತ್ನಿಸುತ್ತಾರೆ. ಧಾರ್ಮಿಕ ಜೀವನದಿಂದ ಅವರ ಕುಟುಂಬಗಳಲ್ಲಿ "ಧಾರ್ಮಿಕ ನಿಷ್ಠೆ, ಸತ್ಯ ನಿತ್ಯದ ಬದುಕು ದೈವನಿಷ್ಠೆ ಇತ್ಯಾದಿಗಳು ಅವರ ಜೀವನದ ಮನೋಭಾವನೆಗಳಾಗಿ ಇಂದಿಗೂ ಕಂಡುಬರುತ್ತದೆ". ಹೀಗೆ ಭಯ-ಭಕ್ತಿಗಳಿಂದ ತಮ್ಮ ಧಾರ್ಮಿಕ ಜೀವನದ ಆಚರಣೆಗಳ ಮೂಲಕ ಇಂದಿನ ಸಮಾಜದಲ್ಲಿ ಮಾದರಿಯಾಗಿದ್ದಾರೆ.

### ೧. ಕುಲದೈವಗಳ ಗುಡಾರಗಳು

ಭಿಕ್ಷೆ ಬೇಡಿ ಜೀವನ ಸಾಗಿಸುವ ಸಿಂಧೋಳ್ಳುರು ಸ್ವಂತ ನೆಲೆಯನ್ನು ಕಾಣದೇ ಇದ್ದರೂ, ತಮ್ಮ ಕುಲದೇವತೆಗಳನ್ನು ಪೂಜಿಸುತ್ತಾರೆ. ಅನ್ಯ ದೇವರನ್ನು ಎಂದೆಂದಿಗೂ ಪೂಜಿಸುವುದಿಲ್ಲ, ಮಠಗಳಿಗೆ, ಚರ್ಚ್‌ಗಳಿಗೆ ಅನುಕರಣೆಯಂತೆ ಪಾಲಿಸುವುದಿಲ್ಲ. ಹೀಗೆ ವೈಯಕ್ತಿಕ ಜೀವನಕ್ಕೋಸ್ಕರ ತಮ್ಮ ಗುಡಾರದ ಕುಲದೇವರುಗಳ ಬಗ್ಗೆ ನಿರಂತರ ತಲ್ಲೀನರಾಗಿರುತ್ತಾರೆ. ತಲೆಮಾರಿನ ವ್ಯಕ್ತಿಗಳಿಂದ ಕುಲದೈವಗಳನ್ನು ಸ್ವೀಕರಿಸುತ್ತಾ ಬಂದಿದ್ದಾರೆ. ತಮ್ಮ ಭಿಕ್ಷೆ ನೆಲೆಯನ್ನು ಮಾತ್ರ ಸ್ಥಳವೆಂದು ಭಾವಿಸಿಕೊಳ್ಳುವರು. ತಮ್ಮ ಸಂಚಾರ ಹಾಗೂ ಜನಸಮೂಹ ಇರುವ ಸ್ಥಳಗಳಲ್ಲಿ ತಮ್ಮ ಕುಲದೈವಗಳ ಗುಡಾರ/ಗುಡಿಸಿಗಳು ನಿರ್ಮಿಸಿಕೊಂಡಿದ್ದಾರೆ. ಗುಡಾರ/ಗುಡಿಸಿಗಳಲ್ಲಿ ಅನೇಕ ಕುಲದೈವಗಳನ್ನು ಸ್ಥಾಪಿಸಿಕೊಂಡು, ಮುಂದೆ ಪ್ರಸಿದ್ಧಿಗೆ ಬಂದಿರುವಂತೆ ತಾವೂ ಕುಲದೈವಗಳ ಮಹಿಮೆಯ ಬಗ್ಗೆ ಪ್ರಚಾರ ಮಾಡುವರು. ಅದನ್ನು ಧಾರ್ಮಿಕ ವಿಧಿ ಎಂಬಂತೆ ಭಾವಿಸಿಕೊಂಡಿದ್ದಾರೆ. ಪೂರ್ವಜರಿಂದ ಇಂದಿನರವರೆಗೂ ಕುಲದೈವಗಳ

ಗುಡಾರ/ಗುಡಿಗಳನ್ನು ಧಾರ್ಮಿಕ ಕೇಂದ್ರಗಳನ್ನಾಗಿಸಿಕೊಂಡಿದ್ದಾರೆ. ಪ್ರಾದೇಶಿಕವಾಗಿ ಹೆಚ್ಚು ಜನ ಇರುವ ಕೇಂದ್ರಗಳನ್ನು 'ಕುಲಪಂಚಾಯತಿ ಕಟ್ಟೆ' ಎಂದು ಭಾವಿಸಿಕೊಂಡಿದ್ದಾರೆ.

**ಕೋಷ್ಟಕ ೫.೧ ಗುಡಾರ, ಗುಡಿಗಳಲ್ಲಿಯ ಕುಲದೈವಗಳ ನೆಲೆಗಳ ಪಟ್ಟಿ**

| ಕ್ರ.ಸಂ. | ದೈವದ ಹೆಸರು | ಗುಡಾರ, ·ಗುಡಿ ಇರುವ ಸ್ಥಳ |
|---|---|---|
| ೦೩. | ಈರನಾಗಮ್ಮ | ·ಸಿಂಧೋಳ್ಳು ಆಶ್ರಯ ಕಾಲೋನಿ, ಎಂ.ಡಿ.ಕ್ಯಾಂಪ್, ಕಂಪ್ಲಿ |
| ೦೧. | ಕಾಟೆಮ್ಮ | ಹಳೆ ಎ.ಪಿ.ಎಂ.ಸಿ. ನಗರ, ಬಾಗಲಕೋಟೆ |
| ೧೫. | ಕೂಗಮ್ಮ | ಭಾಗ್ಯನಗರ, ಕೀರ್ತಿ ಕಾಲೋನಿ, ಕೊಪ್ಪಳ |
| ೧೦. | ಕೂಗಮ್ಮ | ನರೇಗಲ್ಲು, ರೋಮ ತಾ. ಗದಗ ಜಿಲ್ಲೆ |
| ೦೭. | ಕೊಲ್ಲಾಪ್ಪುರದಮ್ಮ | ಅರೇಹಳ್ಳಿ ವಠಾರ, ಹೊಳಲ್ಕೆರ್ ತಾ. ಚಿತ್ರದುರ್ಗ ಜಿಲ್ಲೆ. |
| ೦೮. | ಗಾಡಿ ದುರಗಮ್ಮ | ಗಾಂಧಿನಗರ, ದಾಂಡೇಲಿ, ಹಳಿಯಾಳ ತಾ. ಉ.ಕನ್ನಡ ಜಿ. |
| ೦೯. | ಗೌರಸಮುದ್ರ ಮಾರಮ್ಮ | ಕೋನಸಾಗರ, ಮೊಳಕಾಲ್ಮೂರು ತಾ. ಚಿತ್ರದುರ್ಗ ಜಿಲ್ಲೆ. |
| ೧೦. | ಗೌರಸಮುದ್ರ ಮಾರಮ್ಮ | ಗಾಂಧಿನಗರ, ಚಂದ್ರಗುತ್ತಿಯ ರಸ್ತೆ, ಬ್ಯಾಡಗಿ ತಾ. ಹಾವೇರಿ ಜಿ. |
| ೦೧. | ದುರುಗಮ್ಮ | ವಿದ್ಯಾನಗರ ಕಾಲೋನಿ, ಬೀದರ |
| ೦೨. | ದುರುಗಮ್ಮ | ೨ನೇ ವಾರ್ಡ್, ಮುದಕವಿ, ರಾಮದುರ್ಗ ತಾ. ಬೆಳಗಾಂ ಜಿ. |
| ೧೩. | ಮಲೆಗುಡ್ಡದ ಕೂಗಮ್ಮ | ಜೊಳದಹಾಳ್, ದಾವಣಗೆರೆ ತಾ. ಜಿಲ್ಲೆ |
| ೧೪. | ಮರಗಮ್ಮ | ·ಬಸವನಗರ, ಗುಲ್ಬರ್ಗಾ |
| ೧೫. | ಮರುಗಮ್ಮ | ಎಲ್.ಬಿ.ಸಿ. ನಗರ, ಚಂದ್ರಬಂಡಿರಸ್ತೆ, ರಾಯಚೂರು |
| ೧೬. | ಮಾರಮ್ಮ | ಎಲ್ಲಮ್ಮ ಕಾಲೋನಿ, ಕೊಳ್ಳೆಗೇರಿ ರಸ್ತೆ, ಮೈಸೂರು ಜಿಲ್ಲೆ |
| ೧೭. | ಮಾರಮ್ಮ | ಗೂರೂಮಾರನಹಳ್ಳಿ ಗ್ರಾಮ, ಚನ್ನರಾಯಪಟ್ಟಣ ತಾ. ಹಾಸನ ಜಿ. |
| ೦೮. | ಮಾರಮ್ಮ | ·ಬಸವನಗರ, ಬಸವನಬಾಗೇವಾಡಿ, ಬಿಜಾಪುರ ಜಿಲ್ಲೆ. |
| ೧೯. | ಮಾರಮ್ಮ | ವುರ್ಲಕುಂದಿ ಈರಣ್ಣನಗರ, ಡಿಪೋ, ರಾಯಚೂರು |
| ೨೦. | ಮಾರಮ್ಮ | ಹನುಮಂತಪುರ, ಮಧುಗಿರಿ ತಾ. ತುಮಕೂರು ಜಿಲ್ಲೆ |
| ೨೧. | ಮುತ್ತಾಲಮ್ಮ | ಕೃಷ್ಣಪುರ, ಕೆ.ಎ.ಆರ್.ಪೇಟೆ ತಾ. ಮಂಡ್ಯ ಜಿಲ್ಲೆ |
| ೨೨. | ಮುತ್ತಾಲಮ್ಮ | ಸೊರಬ, ಶಿವಮೊಗ್ಗ ಜಿಲ್ಲೆ |
| ೨೩. | ಸುಂಕಲಮ್ಮ | ಮಣ್ಣಮ ಸರ್ಕಾರಿ ಪದವಿ ಪೂರ್ವ ಕಾಲೇಜ್ ಹತ್ತಿರ, ಚನ್ನಗಿರಿ, ಶಿವಮೊಗ್ಗ |
| ೨೪. | ಹುಲಿಗೆಮ್ಮ | ಹಳೇ ನೇಕಾರ ನಗರ, ದುರ್ಗಾದೇವಿ ನಗರ, ಹುಬ್ಬಳ್ಳಿ |

(ಸೂಚನೆ : ಗುಡಾರ, ·ಗುಡಿ ಇರುವ ಸ್ಥಳಗಳ ಸಂಕೇತಗಳು)

ಹೀಗೆ ಸಿಂಧೋಳ್ಳುರು ತಮ್ಮ ಧಾರ್ಮಿಕ ಪರಂಪರೆ, ಸಂಸ್ಕೃತಿಗಳಿಗೆ ಪ್ರಭಾವಿತರಾಗಿ ಹಾಗೂ ಪ್ರೇರಿತರಾಗಿ ತಾವು ನೆಲೆಗೊಂಡಿರುವ ಆಯಾ ಪ್ರಾದೇಶಿಕ ಕುಲದೈವಗಳನ್ನು ತಮ್ಮದನ್ನಾಗಿ ಮಾಡಿಕೊಂಡು ಪೂಜಿಸುತ್ತಾರೆ. ಅಲ್ಲದೇ ಪ್ರಾದೇಶಿಕ ಭಿನ್ನತೆ ಇದ್ದರೂ, ತಮ್ಮ ಸಂಸ್ಕೃತಿಯ ಕರ್ತವ್ಯವೆಂಬಂತೆ ಪಾಲಿಸಿಕೊಂಡು ಬಂದಿದ್ದಾರೆ. ಪರಂಪರೆಯಿಂದ ಬಂದ ಧಾರ್ಮಿಕ ಆಚರಣೆಯೇ ಅವರ ಬಾಳಿಗೆ ಆಧಾರ. ಜೀವನದಲ್ಲಿ ಕಷ್ಟ, ಸುಖ, ಒಳಿತು-ಕೆಡಕುಗಳಿಗೂ ಮೂಲಭೂತವಾದ ಆಗೋಚರ ಶಕ್ತಿಯೊಂದಿದೆ ಎಂದು ನಂಬಿ, ತಮ್ಮ ಸುತ್ತಲಿನ ಪರಿಸರದಲ್ಲಿ ಗುಡಾರ ಮತ್ತು ಗುಡಿಗಳ ನಿರ್ಮಾಣ ಮಾಡಿಕೊಂಡು ದೇವರುಗಳ ಆರಾಧ್ಯ ಕೇಂದ್ರಗಳನ್ನಾಗಿ ನಿರ್ಮಿಸಿಕೊಂಡಿದ್ದಾರೆ.

### ೨. ಕುಲದೈವಗಳ ಪರಿಚಯ

ಪ್ರತಿಯೊಂದು ಸಮುದಾಯದ ಮೊದಲನೆಯ ದೇವರು 'ತಾಯಿ ದೇವತೆ' ಅಥವಾ 'ಹೆಣ್ಣು ದೇವತೆ' ಎಂತಲೂ ಕರೆಯುತ್ತಾರೆ. ಆ ದೈವವನ್ನು ಆರಾಧಿಸುವುದು ಮಾತೃ ದೇವತೆಯ ಆರಾಧನೆಯೆಂದು ಸಿಂಧೋಳ್ಳುರು ಭಾವಿಸುತ್ತಾರೆ. ಸ್ತ್ರೀ ಸ್ವರೂಪ ಶಕ್ತಿಗೆ ಸ್ವರೂಪಿಣಿ ಎನ್ನುವ ಭಾವನೆ ಹೆಣ್ಣು ದೇವತೆಗೆ ಆಧಾರವಾಗಿದೆ. ಶ್ರೇಣೀಕೃತ ಸಮಾಜವು ಸ್ತ್ರೀ ದೇವತೆಗೆ ಕಾಳಿ, ಚಂಡಿ, ಚಾಮುಂಡಿ, ಭೈರವಿ ಇತ್ಯಾದಿ ಹೆಸರುಗಳಿಂದ ಕರೆದಿದ್ದರೆ, ಬುಡಕಟ್ಟು ಸಮುದಾಯವಾದ ಸಿಂಧೋಳ್ಳುರು ತಮ್ಮ ಕುಲದೈವಗಳನ್ನು ಬುಟ್ಟಿ ದುರಗಮ್ಮ, ಸುಂಕಲಮ್ಮ, ಗಾಳೆಮ್ಮ, ಜಂಬಲಮ್ಮ, ಎಲ್ಲಮ್ಮ, ಕೂಗಮ್ಮ, ಹುಲಿಗೆಮ್ಮ, ಈರನಾಗಮ್ಮ, ದ್ಯಾವಮ್ಮ ಇತ್ಯಾದಿ ಹೆಸರುಗಳಿಂದ ಕರೆಯಲಾಗಿದ್ದು ಇವೇ ಅವರ ಕುಲದೈವಗಳಾಗಿವೆ.

ಈ ನಾಡಿನ ಜನರಿಗೆ ದೇವರನ್ನು ತೋರಿಸಿಕೊಟ್ಟವರು ನಾವೇ ಎಂಬುದು ಇವರ ಅಭಿಪ್ರಾಯವಾಗಿದೆ. ದೇವರ ಬಗ್ಗೆ ಗುಣಗಾನ ಮಾಡುತ್ತಾ, ದೇವರ ಮಹಿಮೆಗಳನ್ನು ಉದ್ಧರಿಸುತ್ತಾ, ನಮ್ಮ ಹಿರಿಯರ ಕುಲದೈವಗಳ ಬಗ್ಗೆ ಹೇಳುತ್ತಾ ಬಂದಿದ್ದಾರೆ.[೬] ಹಲವಾರು ದೇವತೆಗಳನ್ನು ನಂಬಿಕೊಂಡು ಸಿಂಧೋಳ್ಳುರು ಹೇಳುವ ಅನೇಕ ಐತಿಹ್ಯ, ದಂತಕಥೆಗಳು, ಪುರಾಣಗಳು ಬಹುರೋಚಕವಾಗಿದೆ. ಒಂದು ದೇವತೆಗೆ ಸಂಬಂಧಿಸಿದಂತೆ ಹಾಡು, ಕಥೆ, ಐತಿಹ್ಯ, ಪುರಾಣಗಳು ಈ ಸಮುದಾಯ ದೇವರಗಳ ಬಗ್ಗೆ ತಿಳಿದುಕೊಳ್ಳಲು ಸಾಧ್ಯತೆಗಳಿವೆ. ಭಿಕ್ಷಾಟನೆ ಆರ್ಥಿಕ ಚಟುವಟಿಕೆ ಆತನ ಸಂಸ್ಕೃತಿ ನಿರ್ಮಾಣದಲ್ಲಿ ಅಪೂರ್ವ ಪಾತ್ರ ವಹಿಸುತ್ತದೆ. ಹಲವು ಸಾಮಾಜಿಕ, ಸಾಂಸ್ಕೃತಿಕ, ಆರ್ಥಿಕ ಚಟುವಟಿಕೆಗಳು ಬಹುಮುಖ್ಯವಾದುದು. ಆತ ಭಿಕ್ಷಾಟನೆ ಆಹಾರ ಸಂಗ್ರಹಣೆಗಾಗಿ ಬಳಸಿದ ತಂತ್ರ ಇಂದಿಗೂ ಕುತೂಹಲಕಾರಿಯಾಗಿದೆ. ಇಂದು ಭಿಕ್ಷಾಟನೆಯ ಪೂಜಾರಿ ತನ್ನ ಕುಲದೇವರುಗಳನ್ನು ನಾನಾ ಕಡೆಗಳಲ್ಲಿ ಪರಿಚಯಿಸುತ್ತಾನೆ, ದೈವಗಳನ್ನು ಆರಾಧಿಸುತ್ತಾ ತನ್ನ ಸಮಾಜದ ಸಂಘಟನೆಯ ಕಡೆಗೆ ಗಮನಹರಿಸುತ್ತಾರೆ. ತನ್ನ ಸಮಾಜದ ಜನರದಲ್ಲಿ ಏಕತೆಯನ್ನು ಉಂಟು ಮಾಡಲಾಗುವುದು. ಈ ದೃಷ್ಟಿಯಿಂದ ಕುಲದೈವಗಳು ಧಾರ್ಮಿಕ ಜೀವನದಲ್ಲಿ ಸಕ್ರೀಯವಾದ ಪಾತ್ರ ನಿರ್ವಹಿಸುತ್ತದೆ. ಗುಡಾರದ ಬದುಕಿನಲ್ಲಿ ದೈವಗಳು ಜೀವಂತ ಶಕ್ತಿಯಾಗಿ ಕಂಡುಬಂದ ಕೆಲವು ಐತಿಹ್ಯ ದಂತಕಥೆಗಳನ್ನು ಗುಡಾರಗಳ, ದೈವಗಳ ಪರಿಚಯದ ಮೂಲಕ ಈ ಅಧ್ಯಯದಲ್ಲಿ ವಿಶ್ಲೇಷಿಸಲಾಗಿದೆ.

ದುರುಗಮ್ಮ : ಸಿಂಧೋಳ್ಳರು ಆಂಧ್ರ ಪ್ರದೇಶದ ತೆಲಂಗಾಣ ಭಾಗದ ಕಾಡಿನಲ್ಲಿ ಬೇಟೆಯಾಡಿಕೊಂಡು, ಗೆಡ್ಡೆ-ಗೆಣಸುಗಳನ್ನು ಅಗೆದುಕೊಂಡು ತಿಂದು ಜೀವನ ಸಾಗಿಸುತ್ತಿದ್ದರಂತೆ.[೭] ಒಂದು ದಿನ ಹಾಗೆ ಆಹಾರ ಹುಡುಕಿಕೊಂಡು ಸಿಕ್ಕಿದ್ದನ್ನು ತಿಂದು, ನೀರು ಕುಡಿಯಲು ಕೊಳವೊಂದಕ್ಕೆ ಹೋದಾಗ ಆಯಾತಪ್ಪಿ, ಆ ಕೊಳದೊಳಕ್ಕೆ ಬೀಳುತ್ತಿದ್ದ ಹೆಂಡತಿಯನ್ನು ಹಿಡಿದುಕೊಳ್ಳಲು ಹೋಗಿ, ಗಂಡ-ಹೆಂಡತಿ ಇಬ್ಬರೂ ಬೀಳುತ್ತಾರೆ. ನಂತರ ಸಾವಿಗೀಡಾಗುತ್ತಾರೆ. ಜೊತೆಯಲ್ಲಿದ್ದ ಬೇಟೆನಾಯಿಗಳೂ ಕೂಡ ತನ್ನ ಒಡೆಯರ ಸಾವನ್ನು ಕಂಡು ತಾವೂ ಅದೇ ಕೊಳದೊಳಕ್ಕೆ ಬಿದ್ದು, ಆತ್ಮಹತ್ಯೆ ಮಾಡಿಕೊಳ್ಳತ್ತವಂತೆ.[೮] ತೆಲಂಗಾಣ ಪ್ರದೇಶದಲ್ಲಿ ಹಾಗಾಗಿರುವುದರಿಂದ ಅಂದು ಹತರಾದ ದಂಪತಿಗಳ ಸಂಬಂಧಿಕರು ಇಂದು ಬಳ್ಳಾರಿ ಜಿಲ್ಲೆಯ ಕೂಡ್ಲಿಗಿ, ಕಂಪ್ಲಿ, ಬಳ್ಳಾರಿ, ಹಗರಿಬೊಮ್ಮನಹಳ್ಳಿ, ಕೊಟ್ಟೂರು, ತೆಕ್ಕಲಕೋಟೆ, ಸಿರಿಗೇರಿ ಸ್ಥಳಗಳಲ್ಲಿ ನೆಲೆಸಿದ್ದಾರೆ. ಕೆಲವು ದಿವಸಗಳ ನಂತರ ಅವರದೇ ವಂಶ ಸಿಂಧೋಳ್ಳನೊಬ್ಬನ ಕನಸಿನಲ್ಲಿ ದುರುಗಮ್ಮದೇವಿ ಕನಸಿನಲ್ಲಿ ಕಾಣಿಸಿಕೊಂಡಳು. "ಮಗನೇ ನಿನ್ನ ಕುಲವನ್ನು ಉದ್ಧಾರ ಮಾಡುತ್ತೇನೆ. ನಿನ್ನ ಸಂತತಿಯನ್ನು ನಾನೇ ಬಳ್ಳಾರಿ ಜಿಲ್ಲೆಯಲ್ಲಿ ಬೆಳಸುತ್ತೇನೆ ಮತ್ತು ಇಲ್ಲಿಯೇ ನೆಲೆ ನಿಲ್ಲುತ್ತೇನೆ" ಎಂದಳಂತೆ. ಅಂದು ಪ್ರಾರಂಭವಾದ ದುರುಗಮ್ಮ ಕಟ್ಟಿಗೆ ಮೂರ್ತಿ ಇಂದು ಜಿಲೆದಾಂತ್ಯದ ಗುಡಾರದ ಆದಿದೇವತೆಯಾಗಿದ್ದಾಳಂತೆ.[೯]



ದುರುಗಮ್ಮ

ಮಂಗಳವಾರ ಮತ್ತು ಶುಕ್ರವಾರ ಪೂಜೆ ಮಾಡುತ್ತಾ, ಇಂದು ಸಿಂಧೋಳ್ಳರು ಭಿಕ್ಷೆಯಿಂದ ಬಂದಿರುವಂತಹ ಹಣವನ್ನು ಸಂಗ್ರಹಿಸಿ, ಗುಡಿಯನ್ನು ನಿರ್ಮಾಣ ಮಾಡಿರುತ್ತಾರೆ. ಯುಗಾದಿ ಹಬ್ಬಕ್ಕೆ ಮತ್ತು ದಸರಾ ಹಬ್ಬಕ್ಕೆ ಪ್ರತಿ ವರ್ಷವೂ ಚಪ್ಪರ ಹಾಕಿ, ದೇವಿಗೆ ಕುರಿ, ಕೋಳಿಯನ್ನು ಬಲಿ ನೀಡುತ್ತಾರೆ. ಅಂದು ಪೂಜಾರಿ ಪೋತರಾಜ ಬುರ್ರ ಬುರ್ರ ವಾದ್ಯದೊಂದಿಗೆ, ಗುಡಿಯ ಮುಂಭಾಗದಲ್ಲಿ ಚಾಟಿ ಮೈಯಿಗೆ ಬಡಿದುಕೊಳ್ಳುತ್ತಾ ಆಚರಣೆ ಮಾಡುತ್ತಾರೆ. ಪ್ರಾರಂಭದಲ್ಲಿ ದೇವರ ಗುಡಾರದ ಮುಂದೆ ಮಾಡುತ್ತಿದ್ದರಂತೆ. ದುರುಗಮ್ಮ ದೇವಿಗೆ ಸೀರೆ, ಒಡವೆಗಳನ್ನೆಲ್ಲಾ ತೊಡಿಸುತ್ತಾರೆ. ಬೆಳಗಿನ ಜಾವದಲ್ಲಿ ಕೋಳಿ ಬಲಿ ಕೊಟ್ಟನಂತರ ಮಧ್ಯಾಹ್ನ ಸಮಯದಲ್ಲಿ ಕುರಿ ಬಲಿ ಕೊಡುತ್ತಾರೆ. ಅಂದು ಹಬ್ಬದ ವಾತಾವರಣದ ಸಂಭ್ರಮವಿರುತ್ತದೆ.

**ಮರಗವ್ವ :** ಗುಲಬರ್ಗಾ ಕೇಂದ್ರದಿಂದ ಪಶ್ಚಿಮ ಭಾಗದ ರಸ್ತೆಯಲ್ಲಿ ಹೋಗುತ್ತಿದ್ದಂತೆ, ರಸ್ತೆಯ ಬಲಭಾಗದಲ್ಲಿ ಸಿಂಧೋಳ್ಳರ ಮನೆಗಳು ಸಿಗುತ್ತವೆ. ಅಲ್ಲಿ ಮರಗವ್ವ ದೇವಸ್ಥಾನವಿದೆ. ಒಂದು ಕಾಲದಲ್ಲಿ ಇಲ್ಲಿ ಕಲ್ಲು-ಮುಳ್ಳುಕಂಟಿಗಳು ತುಂಬಿರುವ ಅರಣ್ಯ ಪ್ರದೇಶವಾಗಿತ್ತು. ಅಲ್ಲಿಗೆ ಮಕ್ಕಳು ದನಗಳನ್ನು ಕಾಯಲು ಹೋಗುತ್ತಿದ್ದರಂತೆ. "ಒಂದು ದಿನ ಹೀಗೆ ಕಾಟಮ್ಮ ಅಡವಿಗೆ ಹೋಗಿದ್ದಳಂತೆ. ದನ ಕುರಿಗಳು ಮೇಯಿಸುವಾಗ ಕಾಟವ್ವ ಕುಳಿತು ಮನಸ್ಸಿಗೆ ಬಂದಂತೆ ಮಣ್ಣಿನ ಗುಡಿ ಮಾಡಿದಳಂತೆ".[೧೦] ಅದರೊಳಗೆ ಒಂದು ಚಿಕ್ಕ ಮೂರ್ತಿ ಮಾಡಿ, ಕೂಡಿಸಿದಳಂತೆ. ಅದೇ ಅಡವಿಯಲ್ಲಿರುವ ಕಣಗಲು ಹೂವು, ತಂಗಡ ಗಿಡ ಹೂವು ಮುಡಿಸಿದಳು. ಅರಿಶಿಣ, ಕುಂಕುಮ ಹಚ್ಚಿ ಪೂಜೆ ಮಾಡಿದಳಂತೆ. ಸಂಜೆ ಮನೆಗೆ ಹೋಗುವಾಗ ಆ ಮೂರ್ತಿ ಯನ್ನು ತಲೆಯ ಮೇಲಿಟ್ಟುಕೊಂಡು, ಕೈಯಲ್ಲಿ ಎರಡು ಒಣಗಿದ ಕಟ್ಟಿಗೆ ಹಿಡಿದು ಬಾರಿಸುತ್ತಾ, ದನಕರುಗಳೊಂದಿಗೆ ಬಸವನ ನಗರಕ್ಕೆ ಬಂದಳಂತೆ.[೧೧] ನಡು ಬೀದಿಯಲ್ಲಿ ಮೂರ್ತಿಯನ್ನು ಇಳಿಸಿದಳು. ಅಕ್ಕ ಪಕ್ಕದ ಜನರು ನೋಡಿ, ಮರಗವ್ವ ಬಂದಳಂತೆ.... ತಾಯಿ ಮರಗವ್ವ ಬಂದಳಂತೆ.... 'ಮರಗವ್ವ ದೇವಿ' ಎಂದು ನಾಮಕರಣವಾಯಿತು. ಕಾಟಮ್ಮನಿಂದಾಗಿ ಊರಲ್ಲಿ ಮಳೆ-ಬೆಳೆ, ಪ್ಲೇಗಿನ ಬ್ಯಾನಿ ಬರಲಿಲ್ಲವಂತೆ. ಮರಗವ್ವನಿಗೆ 'ಪಿಲೇಗಿನ ಅವ್ವ' ಅಂತಲೂ ಕರೆಯುತ್ತಾರೆ.[೧೨] ಹೀಗೆ ಕಾಟಮ್ಮನಿಂದ ಮೂರ್ತಿ ಮಾಡಿಕೊಂಡು ನಮ್ಮ ಬಸವನ ನಗರದಲ್ಲಿ ಮರಗವ್ವ ನೆಲೆಸಿದ್ದಾಳೆ ಎಂದು ಹೇಳುತ್ತಾರೆ. ಆದರೆ ಕರ್ನಾಟಕ ಸರ್ಕಾರದ ಸನ್ಮಾನ್ಯ ಸಚಿವರಾದ ಶ್ರೀಮಾನ್ ಮಲ್ಲಿಕಾರ್ಜುನ ಖರ್ಗೆ ಸಾಹೇಬ್ರರಿಂದ ಮರಗವ್ವ ದೇವಸ್ಥಾನಕ್ಕೆ ಜಾಗ ಸಿಕ್ಕಿತ್ತು. ಆದ್ರೆ ಗುಡಿ ಮಾತ್ರ ಸಂಪೂರ್ಣ ಆಗಲಿಲ್ಲ ಎಂದು ಈ ಸಮುದಾಯದವರು ಹೇಳುತ್ತಾರೆ.[೧೩]



ಮರಗವ್ವ

**ದ್ಯಾಮವ್ವ :** ಸಿಂಧೋಳ್ಳರ ಜೀವನದಲ್ಲಿ ಹಾಸು ಹೊಕ್ಕಾದ ಅನೇಕ ಶಕ್ತಿ ದೇವತೆಗಳಲ್ಲಿ ದ್ಯಾಮವ್ವ ಕೂಡ ಒಬ್ಬಳು. ಈ ದೇವತೆಯನ್ನು ಕುಲದೇವತೆ ಎಂದೂ ಕರೆಯುವುದುಂಟು.[೧೪] ದ್ಯಾಮವ್ವಳಿಗೆ ದ್ಯೆವಮ್ಮ ದ್ಯಾಮವ್ವ ದೇವಮ್ಮ ಇತ್ಯಾದಿ ಹೆಸರುಗಳಿಂದ ಕರೆಯುವುದು ರೂಢಿಯಲ್ಲಿದೆ. ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನ ಸೂರೇಬಾನು ಗ್ರಾಮದಲ್ಲಿ ದ್ಯಾಮವ್ವದೇವಿ ಸಿಂಧೋಳ್ಳರ ಪ್ರಧಾನ ದೇವತೆ ಮತ್ತು ಪ್ರಾಚೀನ ಸ್ತ್ರೀ ಕುಲದೇವತೆ ಹೌದು. ಈ ದೇವಿ ಇದೇ ಗ್ರಾಮದೊಂದಿಗೆ ಹುಟ್ಟಿರುವ ಸಾಧ್ಯತೆಯಿದೆ ಎನ್ನುತ್ತಾರೆ.[೧೫] ತಮ್ಮ ರಕ್ಷಣೆಗಾಗಿ ದ್ಯಾಮವ್ವ ಗುಡಿ ನಿರ್ಮಿಸಿಕೊಂಡು ಪೂಜಿಸುತ್ತಾರೆ. ಕೆಲವು ಹಿಂದಿನ ದಿನಗಳಲ್ಲಿ ಗುಡಾರದಲ್ಲಿ ಇದ್ದಳಂತೆ ಈ ದೇವಿಯ ಮೂಲವನ್ನು ಗಮನಿಸಿದರೆ ದ್ರಾವಿಡ ದೇವತೆ ಎಂಬುದು ಸ್ಪಷ್ಟವಾಗುತ್ತದೆ. ಈ ದೇವಿಗೆ ಪೂಜೆ, ಪುನಸ್ಕಾರ ನೈವೇದ್ಯ ಮಾಡುವರು. ಯುಗಾದಿ ದಿನದಂದು ಹಬ್ಬ ಆಚರಿಸುವರು. ಈ ಕುಲದೇವತೆ ವೈಶಿಷ್ಟ್ಯಪೂರ್ಣ ದೇವತೆಯೆನಿಸಿಕೊಂಡಿದೆ.

ದ್ಯಾಮವ್ವನ ಸುತ್ತ ಹೆಣೆದುಕೊಂಡಿರುವ ಐತಿಹ್ಯವೊಂದನ್ನು ಸಿಂಧೋಳ್ಳುರು ಹೀಗೆ ಹೇಳುತ್ತಾರೆ. ಕಬ್ಬಲಿಗರ ಸಮುದಾಯದಲ್ಲಿ ಸುಂದರವಾದ ಕನ್ಯೆಯೊಬ್ಬಳು ಇದ್ದಳಂತೆ.[೧೯] ಅನುರಕ್ತವಾದ ಸಿಂಧೋಳ್ಳು ಯುವಕ ತನ್ನ ಜಾತಿಯನ್ನು ಬಚ್ಚಿಟ್ಟು, ಅವಳನ್ನು ವಂಚಿಸಿ ಮದುವೆಯಾಗುತ್ತಾನೆ. ಇವರು ದಾಂಪತ್ಯದ ಫಲವಾಗಿ ಗಂಡು ಮಗವು ಜನಿಸಿತ್ತು. ಆ ಮಗುವಿಗೆ ಜಂಬಲಪ್ಪ ಎಂದು ನಾಮಕರಣ ಮಾಡಿದರು. ಒಂದು ದಿನ ಸಿಂಧೋಳ್ಳುನಾದ ಈತ ಬುಟ್ಟಿ ಹೊತ್ತುಕೊಂಡು ತನ್ನ ಮೈಯಿಗೆ ಚಾಟಿ ಹೊಡೆದುಕೊಳ್ಳುತ್ತಾ, ಆರ್ಭಟಿಸುವುದನ್ನು ನೋಡಿ ಮಡದಿ ವಿಚಲಿತಳಾಗುತ್ತಾಳೆ. ಆಕೆ ನನ್ನನ್ನು ವಂಚಿಸಿ ಮದುವೆಯಾದೆ ಎಂದು ಗುಡುಗುತ್ತಾಳೆ. ಆಕೆಯು ತನ್ನ ಗಂಡನಿಂದ ತಪ್ಪಿಸಿಕೊಂಡು ಓಡುತ್ತಾಳೆ. ಆಕೆಯ ಹಿಂದೆ ಇವನೂ ಓಡುತ್ತಾನೆ. ಇವಳ ಬೆನ್ನ ಹಿಂದೆಯೇ ಅವನು ಆವೇಶದಿಂದ ಬರುತ್ತಿರುವುದುನ್ನು ಕಂಡು, ಆಕೆಯ ಜೀವದಾಸೆಯಾಗಿ.... ನೀನು ನನ್ನ ಮುಖ ನೋಡಬೇಡ, ನೀನು ಇದೇ ತರಹ ದಿನಾಲು ಮುಖಕ್ಕೆ ಮುಖವಾಡಹಾಕಿಕೊಂಡು ಭಿಕ್ಷೆಬೇಡಲು ಹೋಗು ಎಂದು ಶಾಪಹಾಕಿದಳಂತೆ. ಅಂದಿನಿಂದ ಪೂಜಾರಿ ತನ್ನ ಮುಖವಾಡ ಹಾಕಿಕೊಂಡು ದ್ಯಾಮಪ್ಪ ಮೂರ್ತಿ ತೆಗೆದುಕೊಂಡು ಭಿಕ್ಷೆಬೇಡಲು ಹೋಗುತ್ತಾನೆ. ಇವರು ದ್ಯಾಮವ್ವ ಇರುವ ಕಡೆಗಳಲ್ಲಿ ಪೋತರಾಜ ಮುಖವಾಡ ಧರಿಸುವುದುಂಟು.

ಇನ್ನೊಂದು ಐತಿಹ್ಯ ಪ್ರಕಾರ ಸೊರೇಬಾನು ಗ್ರಾಮದಲ್ಲಿ ಕಾಲರಾ ರೋಗ ಕಾಣಿಸಿಕೊಂಡು ಅಲ್ಲಿನ ಅನೇಕ ಜನ ಸಾವನ್ನಪ್ಪಿದ್ದರು. ಉಳಿದವರು ಬದುಕುವ ಆಸೆಗಾಗಿ ದ್ಯಾಮವ್ವಮೂರ್ತಿ ಹತ್ತಿರ ಹೋಗಿ "ಅವ್ವಾ ತಾಯವ್ವಾ" ಈ ರೋಗದಿಂದ ನಮ್ಮನ್ನು ಕಾಪಾಡವ್ವ ನಿನಗೆ ಗುಡಿ ನಿರ್ಮಿಸುತ್ತೇವೆ ಎಂದು ಊರು ಜನ ಹರಕೆ ಮಾಡಿಕೊಂಡರಂತೆ. ದೇವಿಯ ಅನುಗ್ರಹದಿಂದ ಅವರೆಲ್ಲ ಬದುಕಿ ಉಳಿದರು ಎಂಬುದು ನಮ್ಮ ತಾತನವರು ಹಿಂದೆ ಹೇಳುತ್ತಿದ್ದರು.[೨೦] ಬೇಡಿಕೊಂಡಂತೆ ದೇವಿಗೆ ಹೊಸದೊಂದು ಗುಡಿ ನಿರ್ಮಿಸಿಕೊಟ್ಟರಂತೆ. ಅಂದಿನಿಂದ ಕಾಲರಾ ನಿರ್ಮೂಲನೆ ಮಾಡುವವಳು ಈ ದ್ಯಾಮವ್ವಳಂತೆ.

**ಕೂಗಮ್ಮ** : ಸಿಂಧೋಳ್ಳುರಲ್ಲಿ ಒಬ್ಬನಿಗೆ ಮಾತು ಬರುತ್ತಿರಲಿಲ್ಲವಂತೆ ಭಿಕ್ಷೆ ಬೇಡಲು ಕಷ್ಟವಾಯಿತು. ಇದು ಸಮುದಾಯದ ಜನರಿಗೆ ಚಿಂತಾಜನಕವಾಯಿತು. ಒಂದು ದಿನ ದೇವರು ಕನಸಿನಲ್ಲಿ ಬಂದು "ನಾನು ಕೂಗಮ್ಮ ಎಂದು. ಇಲ್ಲಿ ನೀವು ದೇವಸ್ಥಾನ ಮಾಡಿ ಎಂದು ಕೇಳಿಕೊಂಡಳಂತೆ. ನೀನು ಭಿಕ್ಷೆಗೆ ಹೋದಾಗ ನನ್ನ ಮೂರ್ತಿಯ ಎದುರಿಗೆ ಹಾಡಿನೊಂದಿಗೆ ಮಾತನಾಡು ನಿನಗೆ ಮಾತುಗಳು ಬರುತ್ತವೆ ಎಂದು ಹೇಳಿದಳಂತೆ". ಅಂದಿನಿಂದ ಮೊರದಲ್ಲಿ ಕೂಗಮ್ಮ ಮೂರ್ತಿ ತೆಗೆದುಕೊಂಡು ಬಯಲು ಜಾಗದಲ್ಲಿ ಮೊರವನ್ನಿಟ್ಟು ಕೂಗಮ್ಮ ಮೂರ್ತಿ ಎದುರಿಗೆ,

"ಅಮ್ಮ ಕೂಗಮ್ಮ ಬಂದಾಳೆ,
ದುರುಗಮ್ಮ ಬಂದಾಳೆ,
ಸುಂಕಲಮ್ಮ ಬಂದಾಳೆ,
ಜಂಬಲಮ್ಮ ಬಂದಾಳೆ".

ಎಂದು ಜೋರಾಗಿ ಹಾಡಿನೊಂದಿಗೆ ಹೇಳುತ್ತಾ, ಕೂಗಮ್ಮ ದೇವಿ ಗುಣಗಾನ ಮಾಡುತ್ತಾನೆ. ಅಂದಿನಿಂದ ಕೂಗಮ್ಮ ಗುಡಾರ ದೇವತೆಯಾದಳಂತೆ. ಮೊದಲು ಸೊಪ್ಪಿನ ಗುಡಿಸಲು ಕಟ್ಟಿ ಕೂಗಮ್ಮ ದೇವತೆಗೆ ಪೋತರಾಜ ಪೂಜೆ ಮಾಡಿದರೆಂದು ಹೇಳುತ್ತಾರೆ.

**ಪಾಲಕಮ್ಮ :** ರಾಯಚೂರುನಿಂದ ಎಲ್.ಬಿ.ಸಿ. ನಗರದಲ್ಲಿ ಶಕ್ತಿ ದೇವತೆ ದೇವಾಲಯವಿದ್ದು ಪಾಲಕಮ್ಮ ಗುಡಾರದ ನೆಲೆಯಲ್ಲಿ ನೆಲೆಸಿದ್ದಾಳೆ. ಸಿಂಧೋಳ್ಳುರು ಪಾಲಕಮ್ಮನಿಗೆ ವಿವಿಧ ಹೆಸರಿನಿಂದ ಕರೆಯುವುದುಂಟು. ಪಾಲಕಮ್ಮ>ಪೋಚಮ್ಮ>ಪೋಕ್ಷಮ್ಮ ಎಂಬ ಹೆಸರುಗಳು ಹಿಂದಿನಿಂದಲೂ ರೂಢಿಯಲ್ಲಿವೆ. ಆದರೆ ನಿತ್ಯ ಭಿಕ್ಷಾಟನೆಗಾಗಿ 'ಪಾಲಕಮ್ಮ' ದೇವಿ ಎಂತಲೂ ಕರೆಯುವ ವಾಡಿಕೆಯಿದೆ ಈ ಹಿನ್ನೆಲೆಯಲ್ಲಿ ಸಿಂಧೋಳ್ಳು ಮುಖ್ಯಸ್ಥನಾದ ಗುಡಿ ಪೂಜಾರಿಯವರು ಪಾಲಕಮ್ಮ ಬಗ್ಗೆ "ಸಾಹೇಬ್ರ ಪಾಲಕಮ್ಮ ಇವಳಿಗೆ ನಿಶ್ಚಿತ ರೂಪವಿಲ್ಲ. ಯಾವುದೇ ಶಾಸ್ತ್ರೋಕ್ತವಾದ ಪೂಜಾ ವಿಧಿ-ವಿಧಾನಗಳಿಲ್ಲ. ನಮ್ಮ ಸಂಪ್ರದಾಯದಂತೆ ಈ ದೇವತೆ ಸುಮಾರು ೮೦೦-೯೦೦ ವರ್ಷಗಳಷ್ಟು ಹಳೆಯದು. ಈ ದೇವಿಯ ಶಕ್ತಿಯನ್ನು ಮಹಿಳೆ ತಾನು ಸಾಕಿರುವ ಮಕ್ಕಳನ್ನು ಕಾಪಾಡುವ ಮತ್ತು ತಣ್ಣಗಿರುವಂತೆ ಮಾಡುವ ದೇವತೆ".[೧೮] ಎಂಬ ಕಲ್ಪನೆಯಲ್ಲಿ ಪೂಜಿಸುವರು. ಮಕ್ಕಳಿಗೆ ಅಮ್ಮ (ತಟ್ಟು) ಬಂದಾಗ ವಿಶೇಷವಾಗಿ ಪೂಜಿಸುವರು. ಮಕ್ಕಳಿಗೆ ತಟ್ಟು ಬಂದಾಗ ಮೂರು ದಿನಗಳವರೆಗೂ ಬೇವಿನ ಸೊಪ್ಪಿನಿಂದ ಮಗುವಿಗೆ ಸ್ನಾನಮಾಡಿಸಿ, ಮಗುವಿಗೆ ಬಿಳಿ ಬಟ್ಟೆ ತೊಡಿಸುತ್ತಾರೆ. ನಂತರ ಬೇವಿನ ಎಲೆಗಳನ್ನು ಮಕ್ಕಳಲ್ಲಿ ಕೊಟ್ಟು ಅಮ್ಮ ಹೋದಳು.................. ಎಂದು ಜೋರಾಗಿ ಕೂಗಿಕೊಳ್ಳುತ್ತಾ, ಪಾಲಕಮ್ಮದೇವಿ ಹತ್ತಿರ ಬಂದು, ಗುಡಿಯ ಮುಂಭಾಗದಲ್ಲಿ ನೀರು ಹಾಕುವರು. ಇದು ನೆಚ್ಚಿನ ಕುಲದೇವತೆ ಎಂದು ಹೇಳುತ್ತಾರೆ.[೧೯]

**ಗಾಳೆಮ್ಮ :** ಗಾಳೆಮ್ಮ ದೇವತೆ ಸಿಂಧೋಳ್ಳುರ ಮಕ್ಕಳ ರಕ್ಷಣೆ ಮಾಡುವಳೆಂಬ ಪ್ರತೀತಿ ಇದೆ. ಈಕೆ ಗುಡಾರದ ಜನರನ್ನು ಸಲಹುವ ಅಧಿದೇವತೆಯಾದರೂ, ಗ್ರಾಮದಲ್ಲಿ ಜನರನ್ನು ಮತ್ತು ಜಾನುವಾರುಗಳಿಗೆ ರೋಗ ತರಿಸುವ ಮಾರಿ ಎಂತಲೂ ಕರೆಯುತ್ತಾರೆ. ಪ್ರತಿಯೊಂದು ಗ್ರಾಮದಲ್ಲಿ ಗಾಳೆಮ್ಮ ಇರುತ್ತಾಳೆ. ಈ ದೈವವನ್ನು ಉರಿಮಾರಮ್ಮ, ಮಾರಮ್ಮ, ಗಾಳೆಮ್ಮ, ಉಗ್ರದೇವತೆಯೆಂತಲೂ ಕರೆಯುವರು. ಸಿಂಧೋಳ್ಳುರು ತಾವು ವಾಸಿಸುವ ಪ್ರದೇಶಗಲ್ಲಿ ಗಾಳೆಮ್ಮ ದೇವಿಮೂರ್ತಿಯನ್ನು ದೈವಕ್ಕೆ ಸಾಮ್ಯ ಕಲ್ಪಿಸಿರುವುದು ಕಾಣಸಿಗುತ್ತದೆ. ಒಮ್ಮೆ ಪೂಜಾರಿ ತನ್ನ ಕನಸಿನಲ್ಲಿ ಮಾಂತ್ರಿಕವಾಗಿ ಬಂದು, ನೀನು ವಾಸಿಸುವ ನೆಲೆಯಲ್ಲಿ ನನ್ನ ಕಟ್ಟಿಗೆ ದೇವಿಮೂರ್ತಿ ಇಟ್ಟುಕೊಂಡು, ಪೂಜೆ ಮಾಡು, ನಿನಗೆ ಯಾವುದೇ ತೊಂದರೆ ಉಂಟಾಗುವುದಿಲ್ಲವೆಂದು ಹೇಳಿದಳಂತೆ. ಅಂದಿನಿಂದ ಪ್ರತಿಯೊಂದು ಗುಡಾರ ದಲ್ಲಿಯೂ ಕಟ್ಟಿಗೆ ಮೂರ್ತಿ ಮಾಡಿಕೊಂಡು, ಪೂಜಿಸತೊಡಗಿದರು. ಹಾಗೂ ಹಂಪಿ ರಸ್ತೆಯ ಗಾಳೆಮ್ಮನ ಗುಡಿಯ ಗಾಳೆಮ್ಮ ದೇವಿಯ ಹಬ್ಬ ಉತ್ಸವಗಳಲ್ಲಿ ಸಿಂಧೋಳ್ಳುರು ಭಕ್ತಿ-ಭಾವಗಳಿಂದ ಭಾಗವಹಿಸುತ್ತಾರೆ.

ಕೂಡ್ಲಿಗಿ ರಸ್ತೆಯಲ್ಲಿರುವ ಗಾಳೆಮ್ಮ ಗುಡಿಗೆ ಇಲ್ಲಿನ ಸಿಂಧೋಳ್ಳುರು ದೈವ ಭಕ್ತಿಯಿಂದ ಆಚರಣೆ ಮಾಡುತ್ತಾರೆ. ಇಲ್ಲಿನ ಚಿಕ್ಕ ಮಕ್ಕಳಿಗೆ ಸೀತಾಳ, ಸಿಡುಬು, ದಡಾರಗಳು ಬಂದಾಗ, ಗಾಳೆಮ್ಮ ದೈವವನ್ನು ಆಚರಿಸುವುದು ವಾಡಿಕೆ. ಹಿಂದೆ ಸಿಂಧೋಳ್ಳುರು ವಾಸಿಸುವ ಕಾಲೋನಿಗಳಲ್ಲಿ ಪ್ಲೇಗು ಬಂದಾಗ ಅನೇಕ ಜನರು ಬಲಿಯಾಗುತ್ತಿದ್ದರಂತೆ. ಇದನ್ನರಿತು ಸಿಂಧೋಳ್ಳುರು ಗಾಳೆಮ್ಮ ದೇವಿಯನ್ನು ಊರುಗಡಿ ದಾಟಿಸಿ ಕಳಿಸಿದರೆ ರೋಗ ವಾಸಿಯಾಗುತ್ತದೆಂಬ ನಂಬಿಕೆ ಈಗಲೂ ಇದೆ.

**ಮಾರಮ್ಮ :** ಮೈಸೂರು ಜಿಲ್ಲೆಯ ಗುಂಡ್ಲುಪೇಟೆ ತಾಲ್ಲೂಕಿನ ಬರಗಿ ಗ್ರಾಮದಲ್ಲಿ ಸಿಂಧೋಳ್ಳು ಸಮುದಾಯದ ಅಧಿದೇವತೆಯಾಗಿ ಆರಾಧಿಸಲ್ಪಡುತ್ತಿದ್ದಾಳೆ. ಸಹಗಮನ ಪದ್ಧತಿಯನ್ನು ಅಥವಾ

ಅನುಗಮನ ಪದ್ಧತಿಯನ್ನೋ ಅನುಸರಿಸಿದ ಸತಿಯು ಮಾಸ್ತಿ ದೇವತೆಯಾಗಿ ಆರಾಧನೆಗೆ ಅರ್ಹಳಾದಳು. ಭಿಕ್ಷಾಟನೆಯ ಅದಿದೇವತೆಯು ರಕ್ಷಣೆ ನೀಡುವುದರಲ್ಲಿ ಪ್ರವೀಣಳೆಂದು ನಂಬಿದ ಈ ಜನರು ಅದನ್ನು ಗುಡಾರದಲ್ಲಿ ದೇವಿ ಮೂರ್ತಿಯಾಗಿ ನಿಲ್ಲಿಸಿದರು. ಆದಕಾರಣ ಸಿಂಧೋಳ್ಳರ ಸಮುದಾಯಕ್ಕೆ ನೆಚ್ಚಿನ ದೇವತೆ. ಮಾರಮ್ಮ ಸಿಂಧೋಳ್ಳರ ಪಾಲಿಗೆ ಅಲ್ಲದೆ ಗ್ರಾಮದಲ್ಲಿಯೂ 'ಮಾರಿ' ರೂಪದಲ್ಲಿ ಭಕ್ತರ ಸಮೂಹವನ್ನೇ ಆಕರ್ಷಿಸಿಕೊಂಡಿದ್ದಾಳೆ. ಈ ಸ್ಥಳದಲ್ಲಿ ನೆಲೆಸಿರುವ ಮಾರಿಯೂ ವರ್ಷದಲ್ಲೊಮ್ಮೆ ಆರಾಧ್ಯ ದೇವತೆಯಾಗುತ್ತಾಳೆ.

ಸಿಂಧೋಳ್ಳ ಸಮುದಾಯದವರು ಮಾರಿಯ ಬಗ್ಗೆ ಪ್ರಚಲಿತವಿರುವ ಪುರಾಣವನ್ನು ನೋಡಿದರೆ ಇದು ಬೇರೊಂದು ಸಮುದಾಯಕ್ಕೂ ಭಿನ್ನವಾಗಿದೆ. ಇವರು ಹೇಳುವ ಪ್ರಕಾರ "ಒಂದು ದಿನ ಬೇಡ ಸಮುದಾಯದ ಮನೆ ಮುಂದೆ ಹನ್ನೆರಡು ವರ್ಷದ ಹುಡುಗಿಯೊಬ್ಬಳು ಕುಳಿತಿದ್ದಳು. ಬೇಡ ಸಮುದಾಯದ ಮನೆಯವರು ಮುಂಜಾನೆ ಎದ್ದು ಬಾಗಿಲು ತೆರೆದಾಗ ಕುಳಿತಿದ್ದ ಹುಡುಗಿಯನ್ನು ಕಂಡು ಆಕೆಯನ್ನು ಯಾರು ನೀನು? ಎಂದು ಪ್ರಶ್ನಿಸಿದರು. ಅದಕ್ಕೆ ನಾನು ಬ್ರಾಹ್ಮಣರ ಹುಡುಗಿ, ನನಗೆ ತಂದೆ - ತಾಯಿ ಯಾರೂ ಇಲ್ಲ ಎಂದು ಉತ್ತರಿಸಿದಳು. 'ಬೇಡ' ಮನೆಯವರಿಗೆ ಆಕೆಯ ಬಗ್ಗೆ ಅನುಕಂಪ ಮೂಡಿ ಆಕೆಯನ್ನು ಮನೆಯೊಳಗಡೆ ಕರೆದುಕೊಂಡರು. ಅಂದಿನಿಂದ ಆ ಹುಡುಗಿ ಅವರ ಮನೆಯಲ್ಲೆ ಬೆಳೆದಳು. ಅವಳು ಮನೆಯ ಹೊರಗಡೆ ಓಡಾಡುವಾಗ ದಾರಿ ಮಧ್ಯೆ ಪ್ರತಿದಿನ ಒಬ್ಬ ಹುಡುಗ ಆಕೆಯನ್ನು ನೋಡಿ ನಗುತ್ತಾ ಹೋಗುತ್ತಿದ್ದನು. ಮೊದಲ ಒಂದೆರಡು ದಿನ ಪ್ರತಿಕ್ರಿಯೆ ತೋರದೆ ಅವಳು ತಲೆತಗ್ಗಿಸಿಕೊಂಡು ಹೊರಟು ಹೋದಳು. ಅನಂತರ ಅವಳು ನಗೆಗೆ ಪ್ರತಿನಗೆ ಬೀರುತ್ತಾ ಹೋಗುತ್ತಿದ್ದಳು. ಹೀಗೆ ಕಾಲ ಕಳೆದಂತೆ ಅವಳು ಆ ಹುಡುಗನಲ್ಲಿ ಅನುರಕ್ತಳಾದಳು. ಅವರಿಬ್ಬರು ದಾರಿಯಲ್ಲಿ ಸಂಧಿಸಿದಾಗ ಮಾತನಾಡಿಕೊಳ್ಳುತ್ತಿದ್ದರು. ಅದನ್ನು ಕಂಡ ಜನರು ಆಕೆಯ ಮನೆಯವರಿಗೆ ಸುದ್ದಿ ತಿಳಿಸಿದರು. ಬೇಡ ಮನೆಯವರು ಅದನ್ನು ಖಚಿತಪಡಿಸಿಕೊಳ್ಳಲು ಒಮ್ಮೆ ಅವರಿಬ್ಬರೂ ಮಾತನಾಡುವಾಗ ಕಣ್ಣಾರೆ ಕಂಡರು. ಆಕೆಯನ್ನು ಕರೆದು ಆ ಹುಡುಗನೊಡನೆ ಮಾತನಾಡುವುದನ್ನು ನಿಲ್ಲಿಸಲು ಹೇಳಿದಾಗ ಅವಳು ಅದನ್ನು ತಿರಸ್ಕರಿಸಿ, ಆತನನ್ನು ತಾನು ಮದುವೆಯಾಗುತ್ತೇನೆಂದು ಹೇಳಿದಳು. ಮನೆಯವರು ಇನ್ನೂ ಹಟಹಿಡಿದರೆ ಸರಿಯಲ್ಲವೆಂದು ತಿಳಿದು ಅವರಿಬ್ಬರ ಮದುವೆ ನಿಶ್ಚಯ ಮಾಡಲು ಆ ಹುಡುಗನನ್ನು ಮನೆಗೆ ಕರೆದು ಅವನ ಜಾತಿ ಯಾವುದೆಂದು ಪ್ರಶ್ನಿಸಿದರು. ಅವನು ತಾನು ಬ್ರಾಹ್ಮಣನೆಂದು ಹೇಳಿಕೊಂಡನು. ಆಗ ಮನೆಯವರು ಇಬ್ಬರ ಜಾತಿಯು ಒಂದೇ ಆಗಿರುವುದರಿಂದ ಮದುವೆಯಾಗಲು ಅಡ್ಡಿಯಿಲ್ಲವೆಂದು ಮದುವೆ ಮಾಡಿ ಕೊಟ್ಟರು.

ಮದುವೆಯಾದ ನಂತರ ಆಕೆ ಗಂಡನ ಮನೆಗೆ ಹೋದಳು. ಅಲ್ಲಿನ ಪರಿಸರವನ್ನು ಓಡಾಡುತ್ತಲೇ ಗಮನಿಸುತ್ತಿದ್ದಳು. ಆ ಮನೆಯಲ್ಲಿನ ಒಂದು ಕೋಣೆಗೆ ಯಾವಾಗಲೂ ಬೀಗ ಹಾಕಿ ಇರುತ್ತಿತ್ತು. ಅದ್ಯಾಕೆ ಈ ಕೋಣೆಗೆ ಯಾವಾಗಲೂ ಬೀಗ ಹಾಕಿರುತ್ತಾರೆ ಎಂದು ಅವಳು ಯೋಚಿಸತೊಡಗಿದಳು. ಒಂದು ದಿನ ಗಂಡ ಮನೆಯಿಂದ ಹೊರಗೆ ಹೋಗುವಾಗ ತಾನು ಸಂಜೆಗೆ ವಾಪಸ್ ಬರ್ತೀನಿ ಎಂದು ಹೇಳಿ ಹೋದನು. ಇದೇ ಸಮಯವೆಂದು ಆಕೆ ಕೋಣೆಯ ಬೀಗ ಒಡೆದು ಒಳ ಹೊಕ್ಕಿದಳು. ಅಲ್ಲಿ ಗೋಡೆಯ ಮೇಲೆ ಪೋತರಾಜನ ಮುಖವಾಡ, ನೇತು ಹಾಕಿದ್ದರು. ಇನ್ನೊಂದೆಡೆ ಬುರ್ರ ಬುರ್ರವಾದ್ಯ

ಸಾಮಾನು ನೇತು ಹಾಕಿದ್ದರು. ಆಕೆ ಅವುಗಳನ್ನೆಲ್ಲಾ ಕಂಡು ಆಶ್ಚರ್ಯಪಟ್ಟಳು. ಪೋತರಾಜನ ಮುಖವಾಡ ಮನೆಯಲ್ಲಿಟ್ಟುಕೊಳ್ಳಲು ಕಾರಣವೇನು? ತನ್ನ ಗಂಡ ಬ್ರಾಹ್ಮಣನಾಗಿದ್ದರೆ ಬುರ್ರ ಬುಗ್ರ ವಾದ್ಯವನ್ನೇಕೆ ಮನೆಯಲ್ಲಿ ಇಟ್ಟುಕೊಳ್ಳುತ್ತಿದ್ದ? ಎಂದು ಆಲೋಚಿಸತೊಡಗಿದಳು. ಹೇಗೊ ಸಂಜೆಗೆ ಗಂಡ ಬರುತ್ತಾನೆ. ಆಗ ಅದರ ಬಗ್ಗೆ ವಿಚಾರಿಸಿಕೊಳ್ಳೋಣ ಎಂದು ನಿಶ್ಚಯಿಸಿ ಕೋಣೆಯ ಬಾಗಿಲ ಭದ್ರಪಡಿಸಿದಳು. ಸಂಜೆ ಸಮಯದಲ್ಲಿ ಗಂಡ ಮನೆಗೆ ಬಂದನು. ಹೆಂಡತಿಯು ಮಾತನಾಡದೆ ಮುಖ ಗಂಟಿಟ್ಟುಕೊಂಡು ಓಡಾಡುತ್ತಿರುವುದನ್ನು ಗಮನಿಸಿದ ಆತ 'ಏಕೆ ಹೀಗೆ ಮಾತನಾಡದೆ ಕುಳಿತಿರುವೆ?' ಎಂದು ಪ್ರಶ್ನಿಸಿದ. ಅದಕ್ಕೆ ಅವಳು ಅವನ ಕೈ ಹಿಡಿದು, ಕೋಣೆಗೆ ಕರೆದುಕೊಂಡು ಹೋಗಿ ನೇತುಹಾಕಿದ್ದ ಮುಖವಾಡ, ಬುರ್ರ ಬುರ್ರವಾದ್ಯವನ್ನೆಲ್ಲಾ ತೋರಿಸಿ, ಇವೆಲ್ಲಾ ಏನಿದು ನಿಜ ಹೇಳು ನೀನು ಯಾವ ಜಾತಿಯವನು ಎಂದು ಪ್ರಶ್ನಿಸಿದಳು. ದಿಕ್ಕು ತೋಚದ ಅವನು ಪೇಚಿಗೆ ಸಿಕ್ಕಿಕೊಂಡು ಕಾರಣ ಸುಳ್ಳು ಹೇಳಲಾಗದೆ, ತಾನು ಸಿಂಧೋಳ್ಳು ಜಾತಿಗೆ ಸೇರಿದವನು, ಭಿಕ್ಷೆ ಬೇಡುವನು ಎಂದನು. ಆಗ ತಕ್ಷಣ ತನ್ನ ಸಾಕಿದ ತಂದೆ ತಾಯಿ ಮತ್ತು ಗಂಡನನ್ನು ಬಿಟ್ಟು ಕೆರೆಯ ದಂಡೆಯ ಮೇಲೆ ಬಂದಳು. ನೀರನ್ನು ಮುಟ್ಟದೆ, ಆಹಾರ ಸೇವಿಸದೆ, ನೀರಿನಲ್ಲಿ ಬಿದ್ದು ಪ್ರಾಣಬಿಟ್ಟಳು. ಇಂದಿಗೂ ಸಿಂಧೋಳ್ಳುರು ಮಾರಮ್ಮ ದೇವಿ ಹಬ್ಬ ಆಚರಿಸುವ ಸಂದರ್ಭದಲ್ಲಿ ಮುಂಜಾನೆ ಸಮಯದಲ್ಲಿ ಕೆರೆಯ ನೀರಿಗೆ ಮೊದಲು ಪೂಜೆ ಮಾಡಿ ಮಾರಮ್ಮ ಮೂರ್ತಿಯನ್ನು ತೆಗೆದುಕೊಂಡು ಪೂಜೆ ಮಾಡುತ್ತಾರೆ ಎಂದು ಹೇಳುತ್ತಾರೆ. ನಮ್ಮ ತಾಯಿ ಯಿಂದಲೇ ನಮ್ಮ ಸಿಂಧೋಳ್ಳು ಸಮುದಾಯದ ಬೆಳವಣಿಗೆಯಾಗಿದೆ. ಎಂದು ಇಲ್ಲಿನ ವಕ್ತೃಗಳ ಅಭಿಪ್ರಾಯವಾಗಿದೆ.

ಎಲ್ಲಮ್ಮ : ಸಿಂಧೋಳ್ಳು ಸಮುದಾಯದವರಿಗೆ ಎಲ್ಲಮ್ಮ ದೇವತೆ ಅಧೀನ ದೇವತೆ ಮತ್ತು ಗುಡಾರ ದೇವತೆಯೂ ಹೌದು. ಸಿಂಧೋಳ್ಳುರು ಎಲ್ಲಮ್ಮನಿಗೆ ಉಚ್ಚಂಗಮ್ಮ, ಉಚ್ಚಂಗಿ ಎಲ್ಲಮ್ಮ, ರೇಣುಕೆ ಮೊದಲಾದ ಹೆಸರುಗಳಿಂದ ಕರೆಯುತ್ತಾರೆ. ಈ ಹೆಸರುಗಳಿಂದ ಪ್ರಸಿದ್ಧಿಯಾದ ದೇವಾಲಯಗಳು ಅನೇಕ ಕಡೆಗಳಲ್ಲಿ ಕಂಡು ಬಂದರೂ, ಅವರು ಅಲ್ಲಿಗೆ ಹೋಗಿ ಆರಾಧಿಸುತ್ತಾರೆ. ಅವುಗಳಲ್ಲಿ "ಚಂದ್ರ ಗುತ್ತಿ, ಉಚ್ಚಂಗಿದುರ್ಗ, ಹೊಸದುರ್ಗ, ಚಿತ್ರದುರ್ಗ ಮೊದಲಾದ ಸ್ಥಳಗಳಂತಿವೆ".[೨೦] ಸಿಂಧೋಳ್ಳುರು ಜಮದಗ್ನಿ ಋಷಿಯ ಹೆಂಡತಿ ರೇಣುಕೆ ಕುರಿತು ಪುರಾಣ ಮತ್ತು ದಂತಕಥೆಗಳ ಬಗ್ಗೆ ಮಾಹಿತಿ ನೀಡುತ್ತಾರೆ. ಹರಪನಹಳ್ಳಿ ತಾಲೂಕಿನಲ್ಲಿರುವ ಉಚ್ಚಂಗಿ ದುರ್ಗವೇ ಉತ್ತುಂಗ ಮಹಾರಾಜನ ರಾಜಧಾನಿಯಂತೆ. ಈ ರಾಜನ ಕುಮಾರಿ ಉಚ್ಚಂಗಿಯೇ ರೇಣುಕಾಮಾತೆ. ಜಮದಗ್ನಿ ಋಷಿಯ ಪತ್ನಿ. ಈ ದಂಪತಿಗಳ ಐದನೆಯ ಮಗನೇ ಪರಶುರಾಮ. ಸೊರಬ, ತೀರ್ಥಹಳ್ಳಿ, ಶಿಕಾರಿಪುರ, ಸಹ್ಯಾದ್ರಿ ಪ್ರದೇಶ ಈತನ ಕ್ಷೇತ್ರವಾಗಿದೆ. ಹೈಹಯ ವಂಶೀಕನಾದ ನರ್ಮದಾತೀರದ ಮಾಹಿಷ್ಮತಿಯ ಅರಸನೇ ಕಾರ್ತಿವೀರ್ರ್ಯಾರ್ಜುನ. ರಾವಣನನ್ನು ಸೆರೆಯಲ್ಲಿಟ್ಟು, ಮಹಾವೀರ ಜಮದಗ್ನಿ ಋಷಿಯ ಸುರುಭಿಗಳನ್ನು ಕಂಡು ಹರ್ಷಿಸಿ, ಅವುಗಳನ್ನು ತನ್ನ ದೇಶಕ್ಕೆ ತೆಗೆದುಕೊಂಡು ಹೋಗಲು ಬಲ ಪ್ರಯೋಗ ಮಾಡಿದನು. ಈ ಸಂದರ್ಭದಲ್ಲಿ ಋಷಿವರ್ಯನು ಮಡಿದನು. ರೇಣುಕೆಯು ಸಹಗಮನ ಮಾಡಿದಳು. ಈ ಮಹಾಸತಿಯೊಡನೆ ಅವಳ ನೆಚ್ಚಿನ ಸಖಿಯಾದ ಮಾತಂಗಿ, ಮಾತಂಗ ಕನ್ಯೆಯವರು ತಮ್ಮ ಸ್ವಾಮಿಯ ಪಾದಕಮಲದಲ್ಲಿ ಪ್ರಾಣಾರ್ಪಣೆ ಮಾಡಿದರು. ಸಹಗಮನ ನಡೆದ ಚಂದ್ರಗುತ್ತಿಯಲ್ಲಿ ರೇಣುಕೆಯ ಮಹಾಸತಿಗಲ್ಲೂ,

ಸಮೀಪದಲ್ಲಿ ಮಾತಂಗ ಕನ್ಯೆಯರ ವೀರಗಲ್ಲುಗಳೂ ಪ್ರತಿಷ್ಠಾಪಿಸಲ್ಪಟ್ಟವು. ತವರು ಮನೆಯಾದ ಉಚ್ಚಂಗಿದುರ್ಗಾದಲ್ಲಿ ಅದೇ ರೀತಿ ಪ್ರತಿಮೆಗಳು ನಿಲ್ಲಿಸಲ್ಪಟ್ಟವು. ಅಲ್ಲಿಂದ ಆರಂಭಗೊಂಡ ಎಲ್ಲಮ್ಮ, ಉಚ್ಚಂಗಿದುರ್ಗ, ರೇಣುಕ ಮೂರ್ತಿಗಳು ನಮ್ಮ ಗುಡಾರಗಳಲ್ಲಿ ಇಂದಿಗೂ ಪೂಜೆ ಮಾಡಿಕೊಳ್ಳುತ್ತವೆ[೨೧] ಎಂಬುದು.

### ೩ ಕುಲದೈವದ ವಸ್ತು, ವಿನ್ಯಾಸದ ರಚನೆ

ಗುಡಾರದ ಕುಲದೇವತೆಯ ಪ್ರತಿಮೆಗಳನ್ನು ಸಾಮಾನ್ಯವಾಗಿ 'ವಿಶ್ವಕರ್ಮ' ಸಮುದಾಯಕ್ಕೆ ಸೇರಿದ ಬಡಿಗೇರರು ತಯಾರು ಮಾಡಿಕೊಡುತ್ತಾರೆ. "ಇವರನ್ನು ಮಯಮತದವರು, ಮಾಯಾಚಾರರೆಂದು ಕರೆಯುತ್ತಾರೆ".[೨೨] ಅಲ್ಲದೇ ಗ್ರಾಮದೇವತೆಗಳ ಅರ್ಚಕರು ಬಡಿಗೇರರೇ ಆಗಿರುತ್ತಾರೆ. ಆದರೆ ಸಿಂಧೋಳ್ಳುರು ಗುಡಾರದ ಅರ್ಚಕ ಕುಲದ ಮುಖ್ಯಸ್ಥನಾಗಿರುತ್ತಾನೆ. ಕರ್ನಾಟಕದಲ್ಲಿ ಪ್ರತಿಮೆಗಳನ್ನು ರಚಿಸುವ ಬಡಿಗೇರರು ರಾಜ್ಯದಲ್ಲೆಡೆ ದೊರೆಯುತ್ತಾರೆ.

**ದೇವಿಮೂರ್ತಿ :** ದೇವಿಯ ಮೂರ್ತಿಯನ್ನು ಹೆಚ್ಚಾಗಿ ಬೇವಿನ ಮರದಿಂದ ಮಾಡಲಾಗುತ್ತದೆ. ಬಡಿಗೇರರು ಮೂರ್ತಿಗಳನ್ನು ಮಂಗಳವಾರ ಇಲ್ಲವೇ ಶುಕ್ರವಾರ ದಿನಗಳಲ್ಲಿ ಪ್ರಾರಂಭ ಮಾಡುತ್ತಾರೆ. ಹಾಗೂ ಗೌರಿ ಹಬ್ಬಗಳಲ್ಲಿ ತಯಾರು ಮಾಡುತ್ತಾರೆ. ಶಿಲ್ಪಿ ಮೊದಲು ತಾನು ಮಾಡಬೇಕೆಂದಿರುವ ಪ್ರತಿಮೆಯ ಮೂರು ಅಡಿ ಎತ್ತರ ೯೧.೭ ಸೆಂ.ಮೀ. ಎತ್ತರವನ್ನು ನಿರ್ಧರಿಸಿ, ನಂತರ ಅದರ ವಿವಿಧ ಅಂಗಾಂಗಳನ್ನು ಉದ್ದಗಲಗಳನ್ನು ಗುರುತು ಮಾಡಿಕೊಳ್ಳುತ್ತಾನೆ. ಈ ಅಳತೆಗೆ ಸರಿ ಹೊಂದುವ ಬೇವಿನ ಮರದ ತುಂಡುಗಳನ್ನು ಆಯಕ್ಕೆ ಮಾಡಿಕೊಂಡು, ಕೆತ್ತನೆ ಮಾಡಬೇಕಾಗಿರುವ ಭಾಗನನ್ನು ಸಮತಟ್ಟ ಮಾಡಲಾಗುವುದು. ನಂತರ ಪೆನ್ಸಿಲ್‌ನಿಂದ ಸಮತಟ್ಟಾದ ಭಾಗದ ಮೇಲೆ ಸಂಬಂಧಪಟ್ಟ ಅಂಗಾಂಗಳ ಆಕೃತಿ ಗೆರೆಯನ್ನು ಹಾಕಲಾಗುತ್ತದೆ. ಈ ಗೆರೆಯ ಆಚೆಗಿನ ಮರವನ್ನು ಉಳಿಯಿಂದ ತೆಗೆದು ಹಾಕುತ್ತಾರೆ. ಬಾಳಚಿಯಿಂದ ಉಪಕರಣದ ಸಹಾಯದಿಂದ ಕೈಕಾಲುಗಳ ಭಾಗಗಳನ್ನು ಮಾಡಿಕೊಳ್ಳಲಾಗುವುದು. ವಿವಿಧ ಭಾಗಗಳನ್ನು ರಚಿಸಿದ ನಂತರ ಕ್ರಮವಾಗಿ ಜೋಡಣೆ ಮಾಡುತ್ತಾರೆ. ಹೀಗೆ ಸಿದ್ಧಮಾಡಿದ ದೇವಿ ಪ್ರತಿಮೆಗೆ ಕೆಂಪು, ಹಳದಿ, ನೀಲಿ ಬಣ್ಣಗಳು ಲೇಪಿಸಲಾಗುವುದು. ಇತ್ತೀಚಿನ ದಿನಗಳಲ್ಲಿ ದೇವಿ ಮೂರ್ತಿಗಳನ್ನು ವುಡ್ ಪ್ರೈಮರ್ ಹಾಗೂ ಫೆವಿಕಾಲ್‌ನೊಡನೆ ಕಲಸಿದ ವೈಟ್ ಜಿಂಕ್ ಪೌಡರನ್ನು ಬಳಿದು, ಅದು ಒಣಗಿದ ನಂತರ ಬಣ್ಣವನ್ನು ಹಚ್ಚುತ್ತಾರೆ. ಹಾಗೂ ಅಂಗಡಿಗಳಲ್ಲಿ ಮಾರುವ ರಸಾಯನಿಕ ಬಣ್ಣಗಳನ್ನು ಈ ಪ್ರತಿಮೆಗಳಿಗೆ ಬಳಿಯಲಾಗುತ್ತದೆ. ಮೂರ್ತಿಯನ್ನು ಚೌಕಾಕಾರದ ಬಾಕ್ಸ್‌ನಲ್ಲಿ ದೇವಿ ಮೂರ್ತಿಯನ್ನು ಅಳವಡಿಸುತ್ತಾರೆ. ಮೂರ್ತಿ ಮಾಡಿದ ಬಳಿಕ ಕುಲದ ಮುಖ್ಯಸ್ಥರು ನಗದು ಹಣ ಮತ್ತು ೨೧ ಕೆ.ಜಿ. ಜೋಳ ನೀಡುತ್ತಾ, ದೃಷ್ಟಿ ಪರಿಹಾರಕ್ಕಾಗಿ ಕುರಿಮರಿ ಮತ್ತು ಒಂದು ಜೊತೆ ಬಟ್ಟೆಗಳನ್ನು ಉಡುಗೊರೆಯಾಗಿ ನೀಡುತ್ತಾರೆ.

**ದೇವಿಯ ಉಡುಪು :** ದೇವಿಗೆ ಸಾಮಾನ್ಯವಾಗಿ ಬಿಳಿಸೀರೆ, ಹಸಿರು ಕುಪ್ಪಸ ಉಡಿಸುವರು. ಕುಲದ ಮುಖ್ಯಸ್ಥರು ಮಂಗಳವಾರ ಮತ್ತು ಶುಕ್ರವಾರ ವಿಶೇಷ ಹಬ್ಬ ಉತ್ಸವಗಳಲ್ಲಿ ಸೀರೆಗಳನ್ನು ಬದಲಾವಣೆ ಮಾಡುತ್ತಾರೆ.

**ದೇವಿಯ ಆಭರಣಗಳು :** ದೇವಿ ಕೊರಳಲ್ಲಿ ಕರಿಮಣಿ, ಬಂಗಾರದ ಆಭರಣ, ಟೊಂಕದಲ್ಲಿ ಡಾಬು, ಮೂಗಿನಲ್ಲಿ ನತ್ತು, ಕೈಯಲ್ಲಿ ಹಸಿರು ಬಳೆಗಳು, ಕಾಲಲ್ಲಿ ರುಳಿ, ಚೈನಾ ಹಾಕುತ್ತಾರೆ. ಇತರೇ ಆಭರಣಗಳಾದ ಮುದ್ರೆ, ಚೂಡಾಮಣಿ, ಮುಂದಲೆಬೊಟ್ಟು, ಬಂದಿಪದಕ, ಗುಂಡುಸರ, ಚಕ್ರಸರ, ಕೊತ್ತಂಬರಿ ಸರ, ಎದೆಹಾರ, ಪದಮಸರ, ಎದೆಪದಕ ಎದೆಮಣಿ ಇತ್ಯಾದಿ ಆಭರಣಗಳನ್ನು ಹಾಕುತ್ತಾರೆ. ಉಗ್ರದೇವತೆಗೆ ಕಣ್ಣು ಬಟ್ಟು ಕ್ವಾರ ಮೀಸೆಯನ್ನು ಮಾಡಿಸಿ ಇಡುವರು. ಸರ್ವ ಸಾಮಾನ್ಯವಾಗಿ ದೇವತೆಗಳ ಕೈಯಲ್ಲಿ ಖಡ್ಗ, ಕೊಡಲಿ, ತ್ರಿಶೂಲ, ಚಕ್ರ, ಗದೆ, ಹಗ್ಗ, ಶಂಖಗಳು ಇರುವುದು ಕಂಡುಬರುವುದು. ಗುಡಾರದ ಕುಲ ದೇವತೆಗಳಲ್ಲಿಯೂ ಮೇಲಿನ ಆಯುಧಗಳು ಇರುವುದನ್ನು ಕಾಣಬಹುದಾಗಿದೆ.

**೪. ಪೂಜೆಗಳು**

ಸಿಂಧೋಳ್ಳುರು ಕುಲದೇವತೆಗಳಿಗೆ ನಿತ್ಯ ಪೂಜೆ ಮಾಡುತ್ತಾ ಬಂದಿದ್ದಾರೆ. ಕುಲದೇವತೆಗಳಿಂದ ನಮ್ಮ ಮನೆತನ ಪ್ರಸಿದ್ಧಿಯನ್ನು ಪಡೆದುಕೊಂಡಿದೆ. ಅವರ ಈ ಬಗೆಯ ಶ್ರದ್ಧಾತ್ಮಕ ಭಕ್ತಿಯಿಂದಾಗಿ, ಧಾರ್ಮಿಕ ಭಿಕ್ಷಾಟನೆಯಲ್ಲಿ ಔದಾರ್ಯವನ್ನು ತೋರುವರು. ಭಕ್ತಾದಿಗಳು ಕುಲದೇವತೆಗಳಿಗೆ ಭಿಕ್ಷೆ ಕೊಡುತ್ತಾರೆ. ಪೂಜಾರಿ ತಮ್ಮ ಹಾಡಿನ ಮೂಲಕ, ಸಂಕಷ್ಟಗಳು ಪರಿಹಾರವಾಗುತ್ತವೆಯೆಂದು ಹೇಳುತ್ತಾನೆ. ಜನರು ದೇವಿಯ ಮಹಿಮೆಯಿಂದ ನಮ್ಮ ಕುಟುಂಬವು ಸಮೃದ್ಧವಾಗಿವೆ ಎನ್ನುತ್ತಾರೆ. ಈ ತಾಯಿಯ ದಯದಿಂದಲೇ ಆ ಪ್ರಾಂತ್ಯದಲ್ಲೆಲ್ಲ ಸಮೃದ್ಧವಾದ ಮಳೆ, ಬೆಳೆಯಾಗುತ್ತಿದೆಯೆಂದು ಭಾವಿಸಿಸುತ್ತಾರೆ. ಹಾಗಾಗಿ ಕುಲದೇವತೆಗಳ ಬಗ್ಗೆ ಸಿಂಧೋಳ್ಳು ಪೂಜಾರಿ ನಿತ್ಯಪೂಜೆ ಮಾಡಿಯೇ ತಮ್ಮ ತಮ್ಮ ಧಾರ್ಮಿಕ ಭಿಕ್ಷಾಟನೆಗಳಿಗೆ ತೊಡಗುತ್ತಾನೆ.

**ನಿತ್ಯಪೂಜೆ :** ಗುಡಾರದ ಕುಲದೇವತೆಗಳಿಗೆ ನಿತ್ಯಪೂಜೆ ನಡೆಯುತ್ತದೆ. ಪೂಜಾರಿ ನಸುಕಿನಲ್ಲಿಯೇ ಎದ್ದು, ಮಿಂದು ಮಡಿಯುಟ್ಟು, ಗುಡಾರದಲ್ಲಿ ಕುಲದೇವತೆಗಳನ್ನು ಪೂಜಿಸಿ, ನಮಸ್ಕರಿಸುತ್ತಾನೆ.

**ವಾರದಪೂಜೆ :** ನಿತ್ಯಪೂಜೆ ಮಾಡುವುದರಲ್ಲದೆ ವಾರದಲ್ಲಿ ಎರಡು ದಿನಗಳಾದ ಮಂಗಳವಾರ ಮತ್ತು ಶುಕ್ರವಾರದಂದು ಗುಡಾರದಲ್ಲಿ ಕುಲದೇವತೆಗಳಿಗೆ ಪೂಜೆಯನ್ನು ಸಲ್ಲಿಸುತ್ತಾರೆ. ಇದನ್ನು ವಾರದ ಪೂಜೆ ಎಂದು ಕರೆಯುತ್ತಾರೆ. ವಾರದ ಪೂಜಾದಿನಗಳಲ್ಲಿ ದೇವರ ಮೂರ್ತಿಗಳನ್ನು ತೊಳೆದು, ಮಡಿಬಟ್ಟೆಯಿಂದ ಒರೆಸುತ್ತಾರೆ. ಇದಾದ ಮೇಲೆ ವಿಗ್ರಹಕ್ಕೆ ಕುಂಕುಮಾಕ್ಷತೆಗಳನ್ನಿಟ್ಟು, ಬಗೆ ಬಗೆಯ ಪರಿಮಳಭರಿತ ಹೂವುಗಳಿಂದ ಅಲಂಕರಿಸುತ್ತಾರೆ. ಅನಂತರ ಧೂಪ, ದೀಪಾರತಿಗಳನ್ನು ಬೆಳಗಿ, ಹಣ್ಣುಕಾಯಿ, ಪ್ರಸಾದವನ್ನು ನೈವೇದ್ಯ ಮಾಡಿ ಗುಡಾರ ಮಕ್ಕಳಿಗೆ ಹಂಚುತ್ತಾರೆ.

**ಧಾರ್ಮಿಕ ಭಿಕ್ಷಾಟನೆ**

ಬುಟ್ಟಿ ಮತ್ತು ಪೆಟ್ಟಿಗೆಯಲ್ಲಿ ದೇವರನ್ನು ಹೊತ್ತುಕೊಂಡು ಭಿಕ್ಷೆಕೊಡುವ ನೆಲೆಗಳಿಗೆ, ಭಕ್ತರಿಂದ ಹಣ, ದವಸಧಾನ್ಯ, ಒಡವೆ, ವಸ್ತುಗಳನ್ನು ಕಾಣಿಕೆಯಾಗಿ ಪಡೆಯುತ್ತಾ, ಜೀವನ ಮಾಡುವ ಸಿಂಧೋಳ್ಳುರು ದೇವಿಯ ಆರಾಧನೆಯನ್ನೇ ಮುಖ್ಯ ಕಸುಬನ್ನಾಗಿ ಮಾಡಿಕೊಂಡಿದ್ದಾರೆ. ಇವರು ಅಲೆಮಾರಿ ಜನಾಂಗದವರಾಗಿದ್ದು, ತಮ್ಮನ್ನು ಆಂಧ್ರ ಮೂಲದವರೆಂದು ಹೇಳಿಕೊಳ್ಳುತ್ತಾರೆ. ಪೂಜಾರಿ ಭಿಕ್ಷೆಗೆ ಹೋಗುವ ಪೂರ್ವದಲ್ಲಿ ಕಾಲಿಗೆ ಗೆಜ್ಜೆ ಕಟ್ಟಿಕೊಂಡು, ನಡುವಿನಲ್ಲಿ ಕೆಂಪು ವಸ್ತ್ರವನ್ನು ಸುತ್ತಿಕೊಂಡು,

ಮುಖದ ತುಂಬಾ ಭಂಡಾರ ಹಚ್ಚಿಕೊಂಡು, ಕೊರಳಲ್ಲಿ ಬೇವಿನ ಸೊಪ್ಪನ್ನು ಹಾಕಿಕೊಂಡು, ಕೇಶರಾಶಿಯನ್ನು ಬಿಟ್ಟುಕೊಂಡು, ಬುರ್ರ ಬುರ್ರ ಸದ್ದಿನ ವಾದ್ಯದೊಂದಿಗೆ ಅರ್ಭಟಿಸುತ್ತಾನೆ. ರಾಮಾಯಣದ ರಾವಣ ಪಾತ್ರಧಾರಿಯಂತೆ ವರ್ತಿಸುತ್ತಾನೆ. ಇವನು ನಗರಗಳಲ್ಲಿ, ಓಣಿ, ವಠಾರದ ಮಧ್ಯದಲ್ಲಿ ಭಿಕ್ಷೆ ಬೇಡುವುದಕ್ಕೆ ಹೋಗುವನು. ಬುರ್ರ ಬುರ್ರ ವಾದ್ಯದೊಂದಿಗೆ ತೀವ್ರಗತಿಯಲ್ಲಿ ಕುಣಿಯುತ್ತಾ, ಹ್ಹಾಹ್ಹಾಹ್ಹಾಹ್ಹಾ......... ಎಂದು ಬರೀ ಮೈಯಲ್ಲಿ ಚಾಟಿಯಿಂದ ಹೊಡೆದುಕೊಳ್ಳುತ್ತಾ ಜನರಿಗೆ ಹಾರೈಸುವ ಮಾತುಗಳು

"ತಿಮ್ಮಪ್ಪನಿಗೆ ಜಯವಾಗಲಿ
ಲಕ್ಷ್ಮಿಗೆ ಮಕ್ಕಳಾಗಲಿ
ಊರಿಗೆ ಮಳೆ ಬರಲಿ
ಪೀಡೆ ಹೋಗಲಿ"

ಎಂದು ಒಂದು ಕಡೆ ಹೇಳಿದರೆ, ಮತ್ತೊಂದೆಡೆ ಜನರಿಗೆ ಮನರಂಜನೆಯನ್ನು ನೀಡಿ ಅದಕ್ಕೆ ಪ್ರತಿಫಲವಾಗಿ ಪಡೆಯುವ ನಿರಾಳವೇ ಭಿಕ್ಷೆಯಾಗಿದೆ. ಜೊತೆಯಲ್ಲಿ ಮಹಿಳೆ ದೇವರ ಬುಟ್ಟಿ ಹೊತ್ತುಕೊಂಡು ಊರಿಗೆ ಬಂದರೆ, ಬರುವ ರೋಗ ರುಜಿನಗಳು ದೂರವಾಗುವುದೆಂದು ಬಯಸುತ್ತಾರೆ. ಭಕ್ತರು ಮೊರದಲ್ಲಿ ತಂದಿರುವ ಕಾಳು ಧಾನ್ಯಗಳನ್ನು ಸ್ವೀಕಾರ ಮಾಡಿ, ಮತ್ತೆ ಮೂರು ಹಿಡಿ ಜೋಳ, ಭಂಡಾರ ಮೊರದಲ್ಲಿ ಹಾಕಿ ಕೊಡುವನು. ಇದನ್ನು ಭಕ್ತರು ಪ್ರಸಾದವೆಂದು ಸ್ವೀಕಾರ ಮಾಡಿಕೊಳ್ಳುವರು.[೨೨] ಈ ಪ್ರಸಾದವನ್ನು ಶುಭ ಸಂದರ್ಭದಲ್ಲಿ ಬಳಸುವರು. ಪೂಜಾರಿ ಭಿಕ್ಷೆಗೆ ಮತ್ತೊಮ್ಮೆ ಮನೆ ಹತ್ತಿರ ಬಂದಾಗ ತನ್ನ ಮೈಯಿಗೆ ಮತ್ತೇ ಚಾಟಿ ಬಾರಿಸಿಕೊಂಡು ಬುರ್ರ ಬುರ್ರ ವಾದ್ಯದೊಂದಿಗೆ ಕುಣಿಯುತ್ತಾ, ಧಾರ್ಮಿಕ ಹಾಡುಗಳನ್ನು ಹಾಡುತ್ತಾನೆ. ಉದಾಹರಣೆ-



"ಹ್ಹಾಹ್ಹಾಹ್ಹಾ.......
ದುರುಗಮ್ಮ ಬಂದಾಳೆ
ಮಾರಮ್ಮ ಬಂದಾಳೆ
ದಾನಮ್ಮ ಬಂದಾಳೆ
ಸುಂಕಲಮ್ಮ ಬಂದಾಳೆ
ಸೀತಾಳಮ್ಮ ಬಂದಾಳೆ
ದಡಾರಮ್ಮ ಬಂದಾಳೆ
ಇಷ್ಟ ಬಂದ, ಹರಕೆ ಹೊತ್ತವರು
ಹಣವನ್ನಾಗಲಿ, ಕಾಳಕಡಿಯನ್ನಾಗಲಿ ಕೊಡಬೇಕು

ಇಲ್ಲದಿದ್ದರೆ ಬಹಳ ಹೊಣೆಯಾಗುವುದು
ಹರಕೆ, ಮುಡುಪು ಹೊಂದಿದವರು
ನಿಮ್ಮ ಮುಡುಪು ಕೊಡಬೇಕೆಂತೆನ್ನ"[೨೪]

ಎಂದು ಓಣಿಯಲ್ಲಿ ಹೇಳುತ್ತಾ ಹೋಗುತ್ತಾನೆ. (ಭಿಕ್ಷೆ ಹಾಡುಗಳು ಅನುಬಂಧದಲ್ಲಿ ನೋಡಿರಿ) "ದುರ್ಗೆ ಆದಿಶಕ್ತಿ ರೂಪತಾಳಿ, ದುರ್ಗಮನೆಂಬ ಅಸುರನನ್ನು ಕೊಂದದ್ದು ಪುರಾಣ ಪ್ರಸಿದ್ಧಿಯಾಗಿದೆ. ಈ ದುರ್ಗೆ ಅಥವಾ ದುರ್ಗಮನೆಂಬ ರಾಕ್ಷಸ ಪುರುಷರಿಂದ ಸಾಯದಂತೆ ವರವನ್ನು ಪಡೆದು ಲೋಕ ಕಂಟಕನಾಗಿದ್ದಾಗ ಬ್ರಹ್ಮನ ಕೋರಿಕೆಯ ಮೇರೆಗೆ ಕಾಳರಾತ್ರಿಯ ಮೂಲಕ ದುರ್ಗವನ್ನು ತನ್ನಲಿಗೆ ಬರಮಾಡಿ ಅವನೊಂದಿಗೆ ಯುದ್ಧಮಾಡಿ ಕೊಂದಳು ಎಂಬುದು ಪುರಾಣ ಕಥೆಯಿದೆ. ಇದನ್ನು ಸಾರಿ ಪೂಜಾರಿ ತನ್ನ ಮೈಯಿಗೆ ಚಾಟಿಯಿಂದ ದಂಡಿಸಿಕೊಳ್ಳುತ್ತಾ ದೇವಿಯನ್ನು ಆರಾಧಿಸುವುದಕ್ಕೆ ಚಾಲನೆ ದೊರಕಿರಬೇಕು."[೨೫] ನಂತರ ಮುಂಗೈ ಮೇಲೆ ಚೂಪಾದ ಗಾಜಿನ ಬಳೆಗಳಿಂದ ರಕ್ತ ಚಿಮ್ಮಿಸುತ್ತಾನೆ. ಇದರಿಂದ ದೇವಿ ತೃಪ್ತಿಪಡುತ್ತಾಳೆ ಎಂಬುವುದು ಇವರ ನಂಬಿಕೆ. ಇನ್ನೂ ಜನರು ಹಣ ಕೊಡುವವರೆಗೂ ರಕ್ತವನ್ನು ಚಿಮ್ಮಿಸುತ್ತಾನೆ. ಬಂದಿರುವ ರಕ್ತವನ್ನು ಮುಖದಲ್ಲಿ ಹಚ್ಚಿಕೊಳ್ಳುತ್ತಾನೆ. ಹೀಗೆ ಪೂಜಾರಿ ಜನಗಳಿಗೋಸ್ಕರ ಅಭಿವೃದ್ಧಿ ಪಡಿಸಲಿಕ್ಕೆ ಒಂದು ಯಾತನೆಯಾದರೆ ಇನ್ನೊಂದಡೆ ತನ್ನ ಹೊಟ್ಟೆ ತುಂಬಿಸಿಕೊಳ್ಳುವುದಕ್ಕೆ ಹೀಗೆ ಮಾಡುವುದುಂಟು ಹಾಗಂತ ಇವರು ಸೋಮಾರಿಗಳಲ್ಲ. ಎಷ್ಟು ಸಮಸ್ಯೆಗಳು ಮತ್ತು ಸುಖವಿದ್ದರೂ ವಾರದಲ್ಲಿ ಎರಡು ಬಾರಿಯಾದರು ಧಾರ್ಮಿಕ ಭಿಕ್ಷೆ ಬೇಡಲಿಕ್ಕೆ ಹೋಗುತ್ತಾರೆ. ಇವರು ಕರ್ನಾಟಕದಲ್ಲಿ ಒಟ್ಟು ಭಿಕ್ಷೆ ಬೇಡವರ ಸಂಖ್ಯೆ ೧,೭೭೫ ಜನರು ಇದ್ದಾರೆ. ಇವರಲ್ಲಿ ಪುರುಷರ ಸಂಖ್ಯೆ ೧,೦೪೨ ಮತ್ತು ಸ್ತ್ರೀಯರ ಸಂಖ್ಯೆ ೭೪೩ ಇರುವುದು ಕಂಡು ಬರುತ್ತದೆ.

ವೃತ್ತಚಿತ್ರ ೫.೧ ಕರ್ನಾಟಕದಲ್ಲಿ ಸಿಂಧೋಳ್ಳರ ಧಾರ್ಮಿಕ ಭಿಕ್ಷೆ




ಧಾರ್ಮಿಕ ಭಿಕ್ಷಾಟನೆ ಮೇಲೆ ಪ್ರಭಾವ ಬೀರುವ ಅಂಶಗಳು

* ಜನಗಳಿಗೆ ಮುಖ್ಯಪಾತ್ರಧಾರಿಯಾಗುವುದು.
* ಭಿಕ್ಷಾಟನೆ ಕುಟುಂಬದ ಪ್ರಧಾನ ಕಸುಬು
* ಧಾರ್ಮಿಕ ಮನೋಭಾವನೆ ಮತ್ತು ಕಟ್ಟುಪಾಡು.

* ಸಾಮಾಜಿಕ ಆಚರಣೆಯಾಗಿದೆ.

* ವರನು ವಿವಾಹ ಮಾಡಿಕೊಳ್ಳಬೇಕಾದರೆ, ಭಿಕ್ಷೆಯ ಪರೀಕ್ಷೆಯಲ್ಲಿ ಎಷ್ಟು ಭಿಕ್ಷೆಯ ಹಣ ಸಂಪಾದಿಸುವನೆಂದು, ತಿಳಿದು ವಧುವನ್ನು ನೀಡುತ್ತಾರೆ.

ಧಾರ್ಮಿಕ ಭಿಕ್ಷಾಟನೆಯ ವರ್ತುಲ




* ಪರಂಪರಾನುಗತ ನಂಬಿಕೆ ಮತ್ತು ಲೋಕರೂಢಿ.

* ಭಿಕ್ಷಾಟನೆ ಮಾಡಿರುವ ವ್ಯಕ್ತಿ ನ್ಯಾಯ ಪಂಚಾಯಿತಿ ಮುಖ್ಯಸ್ಥನಾಗಿರುತ್ತಾನೆ.

* ಭಿಕ್ಷಾಟನೆ ಮಾಡಿರುವ ವ್ಯಕ್ತಿ ಮಂಗಳ ಕಾರ್ಯಕ್ರಮದಲ್ಲಿ ಮುಖ್ಯಸ್ಥನಾಗಿರುತ್ತಾನೆ.

### ೨. ಹಬ್ಬಗಳು

ಬುಡಕಟ್ಟು ಸಮುದಾಯಗಳು ಸಸ್ಯರಾಧನೆ, ಪ್ರಾಣಿಯಾರಾಧನೆ ಎರಡನ್ನು ಪೂಜಿಸುತ್ತಾರೆ. ತಾವು ವಾಸಿಸುವ ಸ್ಥಳಗಳಲ್ಲಿ ವಿಶೇಷವಾಗಿ ಆರಾದನೆ ಮಾಡುತ್ತಾ ಕಲ್ಲು, ಮಣ್ಣು, ನೀರು ಸರಿಯುವ ಸ್ಥಳ ಅವರು ಬಳಸುವ ಪರಿಕರಗಳು, ಇತ್ಯಾದಿಗಳನ್ನು ಆರಾಧಿಸುವ ಜನರಿದ್ದಾರೆ. ತಮ್ಮ ನಡುವಿನ ಅನೇಕ ವಸ್ತುಗಳನ್ನು ಪೂಜಿಸುತ್ತಾರೆ. ಹಾಗೆಯೇ ತಾ ವು ವಾಸಿಸುವ ಪರಿಸರದಲ್ಲಿ ಪ್ರಾಣಿ ಪಕ್ಷಿಗಳು ಕಂಡುಬಂದರೆ

ಅವುಗಳ ರಕ್ಷಣೆಗಾಗಿ ಹೋರಾಡಿದ ಅನೇಕ ಸಾಂಸ್ಕೃತಿಕ ವೀರರು, ದೇವರುಗಳಾಗಿ ಪೂಜೆಗೊಳ್ಳುತ್ತಿದ್ದಾರೆ. ಪ್ರಾಣಾರ್ಪಣೆ ಮಾಡಿದ ಮಹಿಳೆಯರೂ ವಿವಿಧ ರೀತಿಯಲ್ಲಿ ಪೂಜೆಗೊಳ್ಳುತ್ತಿದ್ದಾರೆ. ಯಾವ ಕಾಲದಲ್ಲಿ ಪೂಜೆ ಆರಂಭಗೊಂಡಿತ್ತೋ, ಅಂದಿನಿಂದ ತಮ್ಮ ಮನೆಗಳಲ್ಲಿ ಪೂಜೆಯ ಜೊತೆಯಲ್ಲಿ ಹಬ್ಬವೂ ಹಮ್ಮಿಕೊಳ್ಳಲಾಯಿತು. " 'ಹಬ್ಬ' ಎನ್ನುವ ಶಬ್ದ ಸಂಸ್ಕೃತದ ಪರ್ವನ್ ಪದದ ತದ್ಭವ 'ಪರ್ವ'ವಾಗಿದೆ. 'ಪರ್ವ' ಎಂದರೆ ಇನ್ನೊಂದರ ಜೊತೆಯಲ್ಲಿ ಸಂಧಿಸುವುದು ಎಂದರ್ಥ. ಸಂಪ್ರದಾಯಗಳು ಮತ್ತು ಆಚರಣೆಗಳು ಹಬ್ಬಗಳಿಗೆ ಪ್ರೇರಕಗಳಾಗಿವೆ".[೩೬] ಸಂಪ್ರದಾಯಗಳ ನೆಲೆಯಲ್ಲಿ ಪೂಜೆಯೂ ಜನರ ಸಾಮಾಜಿಕ ಚಲನ ಶೀಲತೆಯ ಒಂದು ಹಬ್ಬವಾಗಿದೆ ಮತ್ತು ಜೀವಂತ ನೆನಪು ತರುವ ಭಾವನೆಗಳಾಗಿವೆ. "ಸಂಸ್ಕೃತಿ ಬೆಳೆದದ್ದೇ ಹಬ್ಬಗಳಿಂದ ಹಾಗೂ ಹಬ್ಬಗಳನ್ನು ಆಚರಿಸುವುದರಿಂದ. ಬುಡಕಟ್ಟು ಜನರ ಸಂಸ್ಕೃತಿ ಒಂದು ವಿಶೇಷ ಸಂಸ್ಕೃತಿ ಎಂದು ತೆ ೦ೀರಿಸಿಕೊಡುವುದೇ ಹಬ್ಬವಾಗಿದೆ. ಹಬ್ಬಗಳ ಹುಟ್ಟಿಗೆ ಬುಡಕಟ್ಟು ಧರ್ಮದ ನಂಬಿಕೆಗಳೇ ಕಾರಣ."[೩೭]

ಆಧುನಿಕ ದಿನಗಳಲ್ಲಿ ಹಬ್ಬಗಳು ಕಡಿಮೆಯಾಗಿಲ್ಲ. ಎಂತಹ ಕಷ್ಟದ ಪರಿಸ್ಥಿತಿ ಇದ್ದರೂ ಸಹ ಹಬ್ಬಗಳನ್ನು ಆಚರಿಸುವುದು ಮಾತ್ರ ನಿಲ್ಲುವುದಿಲ್ಲ. ಬೇರೆಯಾವ ವಿಷಯಗಳಿಗೆ ಹಣ ಕ್ರೂಢೀಕರಣ ವಾಗದಿದ್ದರೂ ಹಬ್ಬದಲ್ಲಿ ತಮಗರಿವಿಲ್ಲದೇ ಹಣ ಜಮಾವಣೆಯಾಗುವುದು ಆಶ್ಚರ್ಯಕರವಾದ ಸಂಗತಿ. ನಿಸರ್ಗದ ಆರಾಧನೆ ಮತ್ತು ದೇವರನ್ನು ತಮ್ಮೊಡನೆ ಒಲಿಸಿಕೊಳ್ಳುವ ಸತತ ಪ್ರಯತ್ನಗಳಾಗಿ ಹಬ್ಬ ಆಚರಣೆಯನ್ನು ಮಾಡುತ್ತಾರೆ. ಬುಡಕಟ್ಟು ಸಮುದಾಯಗಳಲ್ಲಿ ಶೈವ ಪಂಥದ ದೇವರುಗಳಾದ ಬಸವಣ್ಣ, ಧರ್ಮಸ್ಥಳ ಮಂಜುನಾಥಸ್ವಾಮಿ, ತಿರುಪತಿ ವೆಂಕಟೇಶ್ವರ ಆದಿಯಾಗಿ ಹಲವು ದೇವರುಗಳ ಹಬ್ಬಗಳನ್ನು ಆಚರಿಸುತ್ತಾ ಬಂದಿದ್ದಾರೆ. "ಇತ್ತೀಚೆಗೆ ರಾಘವೇಂದ್ರ ಸ್ವಾಮಿ ಮಲೆನಾಡಿಗೆ ಪ್ರವೇಶ ಮಾಡಿದ್ದಾನೆ."[೩೮] ಈ ರೀತಿಯಾಗಿ ತಮ್ಮ ಬದುಕಿನ ಎಲ್ಲ ಕಷ್ಟ ಸುಖಗಳಿಗೂ ದೇವರೇ ಕಾರಣ ಎಂದು ಭಾವಿಸಿದ್ದಾರೆ. ಬುಡಕಟ್ಟು ಸಮುದಾಯಗಳು "ನಿಸರ್ಗವನ್ನು ನಿಂಯತ್ರಿಸುವ ಮತ್ತು ದೇವರನ್ನು ಒಲಿಸಿಕೊಳ್ಳುವ ಸತತ ಪ್ರಯತ್ನವು ನಡೆಯುವುದರ ಫಲವಾಗಿಯೇ ಹಬ್ಬಗಳು ಹುಟ್ಟಿಕೊಂಡವು."[೩೯] ಸಿಂಧೋಳ್ಳುರು ಭಿಕ್ಷೆಯ ಜೊತೆಗೆ ಅನೇಕ ವೃತ್ತಿಗಳಲ್ಲಿ ಭಾಗಿಯಾಗಿ, ತಾವು ನಂಬಿರುವ ದೇವತೆಗಳನ್ನು ಪೂಜಿಸುವುದರೊಂದಿಗೆ ಹಬ್ಬಗಳನ್ನು ಆಚರಿಸುವುದನ್ನು ರೂಢಿಸಿಕೊಂಡಿದ್ದಾರೆ. ಜೊತೆಗ ಜೀವನ ನಿರ್ವಹಣೆಗಾಗಿ ಬೇಟೆ, ಕೂಲಿ ಕೆಲಸದಿಂದ ವರ್ಷವೆಲ್ಲ ದುಡಿಯುವುದರಿಂದ ಬಿಡುವು ಇರುತ್ತಿರಲಿಲ್ಲ. ಇಂತಹ ಸಮಯದಲ್ಲಿ ಅವರ ಸುಖ ಸಂತೋಷದಿಂದ ಇರಲು ಹಬ್ಬಗಳನ್ನು ಆಚರಿಸಿಕೊಂಡು ಬಂದಿದ್ದಾರೆ. ಅವುಗಳಲ್ಲಿ ಯುಗಾದಿ, ದಸರಾ, ಮೊಹರಂ ಮುಖ್ಯವಾದವುಗಳು ಹಾಗೂ ಗ್ರಾಮದೇವತೆಗಳ ಹಬ್ಬಗಳನ್ನು ಸಹ ಮಾಡುವುದುಂಟು.

**ಯುಗಾದಿ ಹಬ್ಬ :** ಯುಗಾದಿ ಹಬ್ಬ ವರ್ಷದ ಎಲ್ಲ ಹಬ್ಬಗಳಿಗೂ ಮೊದಲನೆಯ ಹಬ್ಬವಾಗಿದೆ. ಶ್ರೇಣೀಕೃತ ಜನರು ಜನವರಿ ಮೊದಲ ದಿನವನ್ನು ಹೊಸವರ್ಷ ಎಂದು ಆಚರಿಸಿಕೊಂಡರೆ, ಗುಡಾರದ ಸಿಂಧೋಳ್ಳುರು ಯುಗಾದಿ ಆರಂಭದ ದಿನವೆಂದು ಭಾವಿಸಿಕೊಳ್ಳುತ್ತಾರೆ. ಅಲ್ಲದೇ ಅಲ್ಲಿನ ಶುಭ-ಅಶುಭ, ಒಳ್ಳೆಯದು, ಕೆಟ್ಟದ್ದು ಇಡೀ ವರ್ಷದ ತನಕ ಮುಂದವರೆದುಕೊಂಡು ಹೋಗುವುದು ಎಂಬ ನಂಬಿಕೆಯುಳ್ಳವರಾಗಿದ್ದಾರೆ. ಯುಗಾದಿಯನ್ನು ಅತ್ಯಂತ ಉತ್ಸಾಹ ಸಂಭ್ರಮಗಳಿಂದ ಸ್ವಾಗಿತಿಸುತ್ತಾ, ತಮ್ಮ

ತಮ್ಮ ಗುಡಾರಗಳಲ್ಲಿ ವಿಜೃಂಭಣೆಯಿಂದ ಆಚರಣೆ ಮಾಡಿಕೊಳ್ಳುತ್ತಾರೆ. ಗುಡಾರದ ಬಗ್ಗೆ, ಪ್ರೀತಿಸುವ ತಂದೆ ತಾಯಿಗಳ ಬಗ್ಗೆ ಹಬ್ಬದಲ್ಲಿ ವಿಶೇಷವಾಗಿ ಪೂಜಿಸುವ ಸಂಸ್ಕೃತಿ ಇವರಲ್ಲಿದೆ. ಇವರು ಸರ್ವ ರೀತಿಯಲ್ಲಿ ಒಳಿತು ಆಗಬೇಕೆಂಬ ಬಯಕೆಗಳನ್ನು ಇಟ್ಟುಕೊಂಡಿರುವುದು ಯುಗಾದಿ ಹಬ್ಬದಲ್ಲಿ ಕಂಡು ಬರುತ್ತದೆ.

ಸಿಂಧೋಳ್ಳು ಸಮುದಾಯದವರು ಯುಗಾದಿ ಹಬ್ಬವನ್ನು ಮೂರು ದಿನಗಳವರೆಗೆ ಆಚರಿಸುತ್ತಾರೆ. ೧. ಅಮವಾಸ್ಯೆಯ ದಿನ, ೨. ಚಂದ್ರ ನೋಡುವ ದಿನ, ೩. ಕರಿ ದಿನ

೧. ಅಮವಾಸ್ಯೆಯ ದಿನ : ಸಿಂಧೋಳ್ಳುರು ಮುಂಜಾನೆಯ ಸಮಯದಲ್ಲಿ ಸ್ನಾನ ಮಾಡಿಕೊಂಡು, ತಮ್ಮ ಗುಡಾರದ ಕುಲದೇವರಗಳಿಗೆ ಪೂಜೆ ಮಾಡಿಕೊಂಡು ಬರುತ್ತಾರೆ. ಆ ದಿನ ಯಾರ ಪತ್ತಿರ ಜಗಳ ಮಾಡುವಂತಿಲ್ಲ. ಮಾಡಿದರೆ ಕೇಡು ಉಂಟಾಗುತ್ತದೆ ಎಂಬ ಮನೋಭಾವನೆ ಅವರಲ್ಲಿದೆ. ಆದಕಾರಣ ಮೌನದಿಂದ ಇರುತ್ತಾರೆ. ಗುಡಾರಗಳಲ್ಲಿ ಪತ್ನಿಯರು ಬಿಸಿ ಬಿಸಿ ದೋಸೆಯನ್ನು ಮಾಡುವಲ್ಲಿ ನಿರತರಾಗಿರುತ್ತಾರೆ. ಅಂದು ಪುರುಷರು ಬೇಟೆಯಾಡಲು ಹೋಗುತ್ತಾರೆ.

೨. ಚಂದ್ರನನ್ನು ನೋಡುವ ದಿನ : ಚಂದ್ರನನ್ನು ನೋಡುವ ದಿನವನ್ನು ಪಾಡ್ಯದ ದಿನ ಎಂದು ಕರೆಯುತ್ತಾರೆ. ಪ್ರತಿಯೊಂದು ಗುಡಾರಗಳಿಗೂ ಮಾವಿನ ತೋರಣಗಳನ್ನು ಕಟ್ಟುತ್ತಾರೆ. ಬೇವಿನ ಸೊಪ್ಪು ಇಳಿ ಬಿಡುತ್ತಾರೆ. ಮನೆಯಲ್ಲಿ ನೀರನ್ನು ಬಿಸಿಮಾಡಿ ಬೇವಿನ ಎಲೆಗಳನ್ನು ಹಾಕಿ, ಕೆಲವರು ಎಣ್ಣೆ ಬೆರೆಸಿಕೊಂಡು ಜಳಕ ಮಾಡುತ್ತಾರೆ. ಇವರಲ್ಲಿ ಇರುವ ಹಳೇ ಬಟ್ಟೆಗಳನ್ನು ಶುಭ್ರವಾಗಿ ಮಾಡಿಕೊಂಡು, ಹಾಕಿಕೊಳ್ಳುತ್ತಾರೆ. ಇನ್ನೂ ಕೆಲವರು ತಮ್ಮ ಹಿರಿಯರಿಗೆ ಹೊಸ ಬಟ್ಟೆಗಳನ್ನು ಏರಿಸಿ ತದನಂತರ ಹಾಕಿಕೊಳ್ಳುತ್ತಾರೆ. ಇಲ್ಲಿನ ಸಿಂಧೋಳ್ಳುರ ಕೆಲವು ಕುಟುಂಬಗಳಲ್ಲಿ ಬೇವು ಹಾಗೂ ಬೆಲ್ಲಗಳನ್ನು ಸೇರಿಸಿದ ಪುಡಿಯನ್ನು ತಯಾರಿಸಿರುತ್ತಾರೆ. ಇವರ ಬಾಳಿನಲ್ಲಿ ಕಷ್ಟದಿಂದ ಮುಕ್ತಿಹೊಂದಿಕೊಂಡು ಸುಖಗಳು ಸಮನಾಗಿ ಬರಲಿ ಎಂಬುವುದೇ ಇದರ ಮರ್ಮ. ಹೆಚ್ಚಿನದಾಗಿ ಸಿಂಧೋಳ್ಳುರು ಪಕ್ಕದ ಊರಿನಲ್ಲಿ ಸಿಹಿ ಊಟದ ಭಿಕ್ಷೆ ಬೇಡಿಕೊಂಡು, ಗುಡಾರದಲ್ಲಿ ಒಟ್ಟಿಗೆ ಕುಳಿತುಕೊಂಡು ಊಟ ಮಾಡುವುದು ಸಾಮಾನ್ಯವಾಗಿದೆ. ಆದರೂ ತಮ್ಮ ಕೈಲಾದಷ್ಟು ಅಭಿರುಚಿಯ ತಿಂಡಿಗಳನ್ನು ತಯಾರಿಸಿಕೊಳ್ಳುತ್ತಾರೆ. ಅಂದು ಮಧ್ಯಾಹ್ನ ಸಮಯದಲ್ಲಿ ಮಹಿಳೆಯರು ಚೌಕಬಾರ ಆಟವನ್ನು ಆಡಿಕೊಂಡು ಸಂತೋಷಿಸುತ್ತಾರೆ. ಸಂಜೆ ಸಮಯದಲ್ಲಿ ಚಂದ್ರನನ್ನು ನೋಡುತ್ತಾರೆ. ಚಂದ್ರನನ್ನು ನೋಡಿದ ನಂತರ ತಮ್ಮ ತಂದೆ-ತಾಯಿಗಳ ಕಾಲಿಗೆ ನಮಸ್ಕರಿಸುತ್ತಾರೆ.

ಮಗ : ಅಪ್ಪ ಚಂದ್ರನನ್ನು ನೋಡಿದಿರಾ[೩೦]

ತಂದೆ : ನೋಡಿದೆ ಮಗ ಎಂದು ಹೇಳುತ್ತಾನೆ.[೩೧]

ಮಗ : ಅಪ್ಪನ ಕಾಲಿಗೆ ನಮಸ್ಕರಿಸಿ, ತಾಯಿಯನ್ನು ಸಹ ನಮಸ್ಕರಿಸಿ ಬರುತ್ತಾನೆ.

ತಂದೆ : ಚಿಕ್ಕ ಚಿಕ್ಕ ಮಕ್ಕಳಿಗೆ ೫೦ ಪೈಸೆ, ೧ ರೂ.ಗಳನ್ನು ಕಾಣಿಕೆಯನ್ನು ನೀಡಿ ಆಶೀರ್ವದಿಸುತ್ತಾರೆ.

ಚಂದ್ರನನ್ನು ನೋಡುವ ದಿನವನ್ನು ಸಂಭ್ರಮದಿಂದ ಆಚರಿಸಿ, ಸಿಹಿ ಊಟ ಮಾಡಿಕೊಂಡು ಸಂತೋಷದಿಂದ ಇರುತ್ತಾರೆ.

೩. ಕರಿದಿನ : ಕರಿದಿನ ಎಂದರೆ, ಮಾಂಸದ ಊಟ ಮಾಡುವ ದಿನ ಎಂದರ್ಥ. ಸಿಂಧೋಳ್ಳರು ಯುಗಾದಿಯ ಮಾರನೆ ದಿವಸ ಬೇಟೆಗೆ ಹೋಗುತ್ತಾರೆ. ಬೇಟೆಯಲ್ಲಿ ಬಿದ್ದಿರುವ ಮೊಲ, ಜಿಂಕೆ ಇತ್ಯಾದಿ ಪ್ರಾಣಿಗಳನ್ನು ಪಾಲು ಹಾಕುವ ವ್ಯವಸ್ಥೆ ಅವರಲ್ಲಿದೆ. ಯಾವುದೇ ತಕರಾರು ಇಲ್ಲದೇ ಪ್ರತಿಯೊಬ್ಬರು ತಮಗೆ ಬರಬೇಕಾದ ಮಾಂಸದ ಪಾಲನ್ನು ತೆಗೆದುಕೊಂಡು ಹೋಗುತ್ತಾರೆ. ಬಂದಿರುವ ಮಾಂಸವನ್ನು ಬೇಯಿಸಿಕೊಂಡು ಊಟ ಮಾಡುತ್ತಾರೆ.

ದಸರಾಹಬ್ಬ : ಭಾರತೀಯ ಹಬ್ಬಗಳಲ್ಲಿ ಒಂದಾದ ದಸಾರ ಹಬ್ಬವನ್ನು ಸಿಂಧೋಳ್ಳ ಸಮುದಾಯವೂ ಆಚರಣೆ ಮಾಡುತ್ತದೆ. ಇದು ಹಿರಿಯರನ್ನು ನೆನಪಿಸಿಕೊಳ್ಳುವ ಹಬ್ಬವಾಗಿದೆ. ಇಲ್ಲಿ ಹಿರಿಯರ ಹಬ್ಬಕ್ಕೆ ಹೆಚ್ಚಿನ ಮಹತ್ವವನ್ನು ಕೊಡುತ್ತಾರೆ. ನಾಡಿನ ಹಲವು ಪ್ರದೇಶಗಳಲ್ಲಿ ಭಿಕ್ಷೆಗೆ ಹೋಗಿರುವ ಜನರು, ತಮ್ಮ ತಮ್ಮ ವಾಸಸ್ಥಳದಲ್ಲಿ ಸೇರಿಕೊಂಡು, ಹಬ್ಬ ಆಚರಿಸಿಕೊಳ್ಳುತ್ತಾರೆ. ಇದು ಪರಂಪರಾಗತವಾಗಿ ಬರುತ್ತಿರುವ ಹಬ್ಬಗಳಲ್ಲಿ ಒಂದು ಇದನ್ನು ಕನ್ನಡನಾಡಿನಲ್ಲಿ ನಾಡಹಬ್ಬ ಎಂತಲೂ ಕರೆಯುತ್ತಾರೆ.

ದಸರಾ ದಿನದಂದು ಸಿಂಧೋಳ್ಳರು ಬನ್ನಿಸೊಪ್ಪು ತಂದು ತಮ್ಮ ಮನೆಯಲ್ಲಿರುವ ಆಯುಧಗಳನ್ನು ಪೂಜೆ ಮಾಡುತ್ತಾರೆ. ಗುಡಾರದಲ್ಲಿರುವ ದೇವರ ಮೂರ್ತಿಗಳು, ಮುಖವಾಡ, ದಿನನಿತ್ಯ ಬಳಸುವ ಕೆಲವು ಉಪಕರಣಗಳಾದ ಕುಡುಗೋಲು, ಕುರ್ಚಿಗೆ, ಕೊಡಲಿ, ಈಳಿಗೆ ಮತ್ತಿತರ ವಸ್ತುಗಳನ್ನು ನೀರಿನಲ್ಲಿ ತೊಳೆದು ಪೂಜೆ ಮಾಡುತ್ತಾರೆ. ಮನೆಯಲ್ಲಿರುವ ಸೈಕಲು ಇತರ ಸಾಮಾನುಗಳಿಗೂ ಪೂಜೆ ಮಾಡುತ್ತಾರೆ. ಆನಂತರ ದೇವಿ ಮೂರ್ತಿಗೆ ನಿಂಬೆಹಣ್ಣಿನಿಂದ ನಿವಾಳಿಸಿ, ಶಾಂತಿ ಮಾಡುತ್ತಾರೆ. ಕೋಳಿಯನ್ನು ಬಲಿಕೊಟ್ಟು, ರಕ್ತ ಮೂಲವಸ್ತುಗಳ ಮೇಲೆ ಚೆಲ್ಲುತ್ತಾರೆ.

ಹಿರಿಯರ ಹಬ್ಬ : ಸಿಂಧೋಳ್ಳರ ಅತ್ಯಂತ ಮಹತ್ವವಾದ ಹಬ್ಬ. ಬಹಳ ಕಾಲದಿಂದಲೂ ಆಚರಿಸಿಕೊಂಡು ಬಂದಿರುವಂತಹ ಹಬ್ಬವಾಗಿದೆ. ತಮ್ಮ ವಂಶದಲ್ಲಿದ್ದ ಹಿರಿಯರನ್ನು ವರ್ಷಕ್ಕೊಮ್ಮೆ ನೆನಪಿಸಿಕೊಳ್ಳುವುದೇ ಇದರ ವಿಶೇಷತೆ. ಹಿರಿಯರು ಬಳಸಿರುವಂತಹ ವಸ್ತುಗಳನ್ನು, ಗುಡಾರಗಳಲ್ಲಿ ಇಟ್ಟು ರಾತ್ರಿ ಸಮಯದಲ್ಲಿ ಪೂಜೆ ಮಾಡುತ್ತಾರೆ. ತಂಬಿಗೆ ಮೇಲೆ ತೆಂಗಿನಕಾಯಿ ಇಟ್ಟು ಅದರ ಮೇಲೆ ಹೊಸ ಬಟ್ಟೆಗಳನ್ನು ತೊಡಿಸಿ ತಂಬಿಗೆಗೆ ತಾಳಿಸರ ಹಾಕಿ, ತಂಬಿಗೆ ಮುಂದೆ ಎಡೆಯಲ್ಲಿ ಪಾಯಸ, ಅನ್ನದ ಎಡೆ ಇಟ್ಟು, ಮುಖ್ಯಸ್ಥನು ತಂಬಿಗಗೆ ವಿಭೂತಿ, ಕುಂಕುಮ ಹಚ್ಚಿ, ತೆಂಗಿನಕಾಯಿ ಹೊಡೆದು ಊದುಬತ್ತಿಗಳಿಂದ ಆರತಿ ಬೆಳಗುವನು. ನಂತರ ಮುಖ್ಯಸ್ಥನು ನಮಸ್ಕರಿಸಿ ಇನ್ನುಳಿದ ಸದಸ್ಯರು ನಮಸ್ಕರಿಸುವರು. ಬನ್ನಿ ಎಲೆಗಳನ್ನು ಪ್ರತಿಯೊಬ್ಬರೂ ತೆಗೆದುಕೊಂಡು ಬನ್ನಿ ತೆಗೆದುಕೊಂಡು ಬಂಗಾರದಂಗ ಇರಾವ್ವ, ಬಂಗಾರದಂಗ ಇರಾಪ್ಪ ಎಂದು ಹಾರೈಸುತ್ತಾರೆ. ಇದು ಅನ್ಯ ಸಮುದಾಯವರ ಅನುಕರಣೆಯಿಂದ ಬಂದಿರುವ ಆಚರಣೆಯಾಗಿದೆ.

**ಮೊಹರಂ :** ಮೊಹರಂ ಹಬ್ಬ ಫೆಬ್ರವರಿ, ಮಾರ್ಚ್ ತಿಂಗಳಿನಲ್ಲಿ ಬರುವ ಹಬ್ಬವಾಗಿದೆ. ಇದು ಹಿಂದೂ ಮುಸ್ಲಿಂಮರು ಭಾವಕ್ಯತೆಯಿಂದ ಪರಸ್ಪರ ವಿಶ್ವಾಸಗಳಿಂದ ಆಚರಿಸುವ ಹಬ್ಬ ಮೊಹರಂ. ಮಹಮದ್ ಪೈಗಂಬರ್‌ನ ಮೊಮ್ಮಗನಾದ ಹಜರತ್ ಇಮಾಮ್ ಹುಸೆನ್ ತಮ್ಮ ಅನೇಕ ಅನುಯಾಯಿಗಳ ಜೊತೆಯಲ್ಲಿ ದೃಷ್ಟನಾದ ಯಜೀದನ ಸೈನ್ಯವನ್ನು ಕರ್ಬಲಾ ಮೈದಾನದಲ್ಲಿ ಎದುರಿಸಿದರು. ನ್ಯಾಯಕ್ಕಾಗಿ ಹೋರಾಡಿದ ದಾರಿಯಲ್ಲಿ ಮರಣ ಹೊಂದಿದ್ದರು. ಮರಣ ಹೊಂದಿದ ತಿಂಗಳಿನ ೧೦ ದಿನದಲ್ಲಿ "ಹುತಾತ್ಮನಾದ ಇಮಾಮ್ ಹುಸೇನ ಸವಿನೆನೆಪಿಗಾಗಿ ಮೊಹರಂ ಹಬ್ಬ ಆಚರಿಸುವುದು".[೩೨] ಈ ಆಚರಣೆ ಇಂದು ಪ್ರತಿ ಹಳ್ಳಿ ಹಳ್ಳಿಗೂ ಪ್ರವೇಶ ಮಾಡಿದೆ. ಮುಸ್ಲಿಂ ಹತ್ಯಾಕಾಂಡದ ಸಂಕೇತವಾಗಿ ಆಚರಿಸುವ ಈ ಹಬ್ಬ ಇಂದು ಬುಡಕಟ್ಟು ಜನರ ಜೀವನದಲ್ಲೂ ಪ್ರಶ್ನಿಸಿದೆ. ಮೊಹರಂ ಹಬ್ಬದ ದಿನ ಸಿಂಧೋಳ್ಳುರಲ್ಲಿ ಹರ್ಷದ ವಾತಾವರಣವಿರುತ್ತದೆ. ಈ ಹಬ್ಬವನ್ನು ಹಿಂದೂ-ಮುಸ್ಲಿಂ ಒಂದಾಗಿ ಸೋದರ ಭಾವನೆಗಳಿಂದ ಆಚರಿಸುತ್ತಾರೆ. ಅಂದಿನ ರಾತ್ರಿ ಸಿಂಧೋಳ್ಳುರು ರಾತ್ರಿಯಿಡೀ ಪೀರಲು ದೇವರು ಮುಂದೆ ಬೆಂಕಿ ಹಾಕಿ, ತಮ್ಮ ಸೇವೆಯನ್ನು ಮಾಡುತ್ತಿರುತ್ತಾರೆ. ಜನ ಸತ್ಯವಂತರು ತೋರಿಸುವ ಪವಾಡ ಮೆರೆಯಲು "ಮಸೀದಿಯ ಮುಂದೆ ತುಳಿದಾಡಲಿಕ್ಕೆ ಮಾಡುವ ಬೆಂಕಿಗೆ 'ಅಲಾವಿ' ಹಬ್ಬ ಎಂದು ಕರೆಯುವುದು".[೩೩] ಮಸೀದಿ/ಗುಡಿಯಲ್ಲಿ ಕೂಡಿಸಿರುವ ದೇವರುಗಳಿಗೆ ಪೂಜೆ ಸಲ್ಲಿಸುತ್ತಾರೆ. ಇಲ್ಲಿ ಮುಸ್ಲಿಂ-ಹಿಂದೂ ಎಂಬ ಭಾವನೆಯೂ ಬರುವುದಿಲ್ಲ. ಅವರವರ ಪೂಜಾವಿಧಾನಗಳನ್ನು ಅನುಸರಿಸುತ್ತಾರೆ. ದೇವರ ಮುಂದೆ ಹಾಕಿರುವ ಬೆಂಕಿ ಹೊಂಡದಲ್ಲಿ ಎಲ್ಲರೂ ಉಪ್ಪನ್ನು ಎಸೆಯುತ್ತಾರೆ. ಮರುದಿನ ಸಿಂಧೋಳ್ಳುರು ಹಲವಾರು ಸಮುದಾಯದವರೊಂದಿಗೆ ಇವರು ಹುಲಿವೇಷ ಹಾಕಿಕೊಂಡು, ಹಲಗೆಗಳನ್ನು ಗತ್ತಿಗೆ ತಕ್ಕಂತೆ

ಜಜಕ್ಕನ್ ತಕ್ಕ, ತಕ್ಕ, ...............
ಜಂಗ ತಕ್ಕ, ತಕ್ಕ, ತಕ್ಕ .............
ಜಜಕ್ಕನ್ ತಕ್ಕ, ತಕ್ಕ, ...............
ಜಂಗ ತಕ್ಕ, ತಕ್ಕ, ತಕ್ಕ ..............
ತಕ್ಕ, ತಕ್ಕ, ತಕ್ಕ, ತಕ್ಕ ...............

ಎಂದು ಕುಣಿಯುತ್ತಾರೆ. ನಂತರ ಮೊಹರಂನ ಕಡೇ ದಿನ ಸಾಯಂಕಾಲದಲ್ಲಿ ದೇವರು ನೀರಿನಲ್ಲಿ ಬೀಳುವ ಕಾರ್ಯಕ್ರಮದಲ್ಲಿ ಬುರ್ರ ಬುರ್ರ ವಾದ್ಯದೊಂದಿಗೆ ಕುಣಿಯುತ್ತಾ ವಿಜೃಂಭಣೆಯಿಂದ ಆಚರಿಸುತ್ತಾರೆ.

## ೩. ಜಾತ್ರೆಗಳು

ಮಾನವನು ಸಾಮಾಜಿಕ ಜೀವನದಲ್ಲಿ ತನಗೆ ಅಗತ್ಯವಾದ ಆಹಾರ ಬೆಳೆಯುವ ಭೂಮಿಯನ್ನು, ನೀರು ದೊರೆಯುವ ನೆಲವನ್ನು ಸಹಜವಾಗಿ ವಾಸಿಸಲು ಅನುಕೂಲಕರವಾದ ಪರಿಸರವನ್ನು ಹುಡುಕಿಕೊಂಡು ಅಲೆದಾಡುತ್ತ ಕೊನೆಗೊಮ್ಮೆ ಒಂದು ಪ್ರದೇಶದಲ್ಲಿ ನೆಲೆನಿಂತನು. ಅಲ್ಲಿಯೂ ಭೂಮಿ, ನೀರು, ಗಾಳಿಗಳಿಗೆ ಅನುಸಾರವಾಗಿ ಆಹಾರವನ್ನು ಬೆಳೆಯುತ್ತಾ, ತಮಗೆ ವಾಸಿಸಲು ಅಗತ್ಯವಾದ ವಸತಿಗಳನ್ನು

ನಿರ್ಮಿಸಿಕೊಂಡನು. ತನ್ನ ದೈನಂದಿನ ಆಗು ಹೋಗುಗಳಿಗೆ ಅನಿವಾರ್ಯವಾದ ಕೌಟುಂಬಿಕ ಸಂಬಂಧಗಳನ್ನು ಕಲ್ಪಿಸಿಕೊಂಡನು. ತನಗೆ ಆಧಾರವಾಗುವ ನಿಸರ್ಗವನ್ನು ಅದರ ಬಹುಮುಖಗಳಲ್ಲಿ ಆರಾಧಿಸುತ್ತಾ ಬಂದನು. ವಿಶಿಷ್ಟವಾದ ಜೀವನ ಪದ್ಧತಿಯನ್ನು ರೂಢಿಸಿಕೊಂಡು ತಮ್ಮ ದೈನಂದಿನ ಬದುಕನ್ನು ರೂಪಿಸುವ ನಿಸರ್ಗ ಶಕ್ತಿಗಳನ್ನು ದೈವಗಳೆಂದು ಆರಾಧಿಸುತ್ತಾ ಪ್ರತೀಕಗಳನ್ನು ಕಲ್ಪಿಸಿ ಅವುಗಳನ್ನು ಪೂಜಿಸುವ ವಿಧಿ ವಿಧಾನಗಳನ್ನು ಅನುಭವದ ಆಧಾರದ ಮೇಲೆ ಸೃಷ್ಟಿಸಿಕೊಂಡನು.

ಕೃಷಿಗೆ ಮತ್ತು ಆಹಾರಕ್ಕೆ ಅಗತ್ಯವಾದ ಸಾಧನಗಳನ್ನು ಹಂತ ಹಂತವಾಗಿ ನಿರ್ಮಿಸಿಕೊಂಡನು. ಮುಖ್ಯವಾಗಿ ಮಾಂಸವೇ ಆಹಾರದ ಪ್ರಮುಖ ಭಾಗವಾಗಿದ್ದ ಕಾಲದಲ್ಲಿ ಪ್ರಾಣಿಗಳ ಬೇಟೆಗೆ ಅಗತ್ಯವಾದ ಉಪಕರಣಗಳನ್ನು ಪ್ರಾಯೋಗಿಕ ಆಧಾರದಲ್ಲಿ ರೂಢಿಸಿಕೊಂಡನು. ಒಂದೆಡೆ ನೆಲೆಸಿದ ಹೆಣ್ಣು ಗಂಡುಗಳ ಕಾರಣದಿಂದ ಅಂತಃಕಲಹ ಆರಂಭವಾಗದಂತೆ ತಮ್ಮತಮ್ಮಲ್ಲೇ ಕೆಲವು ಒಡಂಬಡಿಕೆಗಳನ್ನು ಮಾಡಿಕೊಂಡನು. ಮಳೆ, ಗಾಳಿ, ಬಿಸಿಲು ಮುಂತಾದ ಪ್ರಕೃತಿ ವಿಕೋಪಗಳಿಂದ ರಕ್ಷಿಸಿಕೊಳ್ಳಲು ವಾತಾವರಣಕ್ಕನುಗುಣವಾದ ವಸತಿಗಳು ನಿರ್ಮಾಣವಾಗತೊಡಗಿದ್ದವು. ಕಾಲಕ್ರಮೇಣ ಅವುಗಳಲ್ಲಿ ಸೌಂದರ್ಯ ದೃಷ್ಟಿ ನೆಲೆಗೊಂಡಿತು. ಸಮಾನ ವೃತ್ತಿ, ಸಮಾನ ಮನಸ್ಸು, ಸಮಾನ ಅಭಿರುಚಿಗಳಿಂದ ಕೂಡಿದ ಜನ ಪ್ರತ್ಯೇಕ ಗುಂಪುಗಳಾದರು. ಆ ಗುಂಪುಗಳಿಗೆ ಸಮಾನವಾದ ನಂಬಿಕೆಗಳೂ ಆಚರಣೆಗಳೂ ಚಾಲ್ತಿಗೆ ಬಂದವು. ಹೀಗೆಯೇ ಮಾನವನ ಜೀವನದ ಸಂಕಷ್ಟಗಳನ್ನು ಮರೆಯಲು ಮನಸ್ಸಿಗೆ ಮತ್ತು ಸಂತೋಷದ ಅನುಭವಕ್ಕೆ ಸಹಜವಾದ ಹಾಡು, ಕಥೆ, ಚಿತ್ರ, ಅಲಂಕಾರ ಇತ್ಯಾದಿಗಳು ರೂಪುಗೊಂಡವು. ಎಲ್ಲ ಒಟ್ಟುಗೂಡಿ ಆನಂದಿಸುವಂಥ ಜಾತ್ರೆಗಳು, ಸಂತೆಗಳು, ಹಬ್ಬ ಹರಿದಿನಗಳು ಸಾಮಾಜಿಕ ಜೀವನದಲ್ಲಿ ಫಲವಾಗಿ ಮೂಡಿ ಬಂದವು.

ಬುಡಕಟ್ಟು ಸಮುದಾಯಗಳು ನಿಸರ್ಗದ ಮಡಿಲಿನಲ್ಲಿ ವಾಸಿಸುತ್ತಿದ್ದರಿಂದ ಅವರು ಧಾರ್ಮಿಕ ಆಚರಣೆಗಳನ್ನು ಮೈಗೂಡಿಸಿಕೊಂಡಿರಬೇಕು. ಬುಡಕಟ್ಟು ಸಮುದಾಯಗಳು ನಡೆಸುವ ಧಾರ್ಮಿಕ ಆಚರಣೆಗೆ ಹಾಗೂ ದೇವತಾರಾಧನೆಗಳನ್ನು ಸಾಮೂಹಿಕವಾಗಿ ಆಚರಿಸುತ್ತಾರೆ. ಇವುಗಳು ತಲೆಮಾರಿನಿಂದ ತಲೆಮಾರಿಗೆ ಬೆಳೆದು ಬಂದ ಆಚರಣೆಗಳೇ ಹಬ್ಬ ಹರಿದಿನ ಜಾತ್ರೆಗಳಾಗಿರಬಹುದು. ಹಬ್ಬ ಜಾತ್ರೆಗಳನ್ನು ತನ್ನ ಸಮುದಾಯಕ್ಕೆ ಸೀಮಿತವೆಂಬಂತೆ ಸಮುದಾಯದವರೆಲ್ಲರು ಸಾಮೂಹಿಕವಾಗಿ ಆಚರಿಸುತ್ತಾರೆ.

"ಸಂಸ್ಕೃತದ 'ಯಾತ್ರಾ' ಪದವು ಕನ್ನಡದಲ್ಲಿ 'ಜಾತ್ರೆ'ಯಾಯಿತು".[೩೪] ತೇರು ಅಥವಾ ರಥವನ್ನು ಎಳೆಯುವುದು ಬಹುತೇಕ ಜಾತ್ರೆಗಳ ಮುಖ್ಯ ಭಾಗ. ಜಾತ್ರೆಯೆಂದರೆ ರಥೋತ್ಸವವೇ ಎನ್ನುವಷ್ಟೇ ಇದರ ವ್ಯಾಪಕತೆ ಇದೆ. "ಹೋಳಿಗೆ ಇಲ್ಲದೆ ಹಬ್ಬವಿಲ್ಲ, ರಥವಿಲ್ಲದೆ ಜಾತ್ರೆ ಇಲ್ಲ" ಎಂಬ ಗಾದೆಯನ್ನು ಇಲ್ಲಿ ನೆನಪಿಸಿಕೊಳ್ಳಬಹುದು. "ತೇರು ಮತ್ತು ರಥ ಇವೆರಡರ ನಡುವೆ ಹೆಚ್ಚಿನ ವ್ಯತ್ಯಾಸ ಕಲ್ಪಿಸಿದ್ದರು ದೇವರ ಮೂರ್ತಿಯನ್ನಿಟ್ಟು ಮೆರವಣಿಗೆ ಮಾಡುವ ವಿಶಿಷ್ಟ ವಾಹನವನ್ನು ಮಾತ್ರ ತೇರು ಎನ್ನುತ್ತೇವೆ. ತೇರನ್ನು ಎಳೆಯುವುದು ತೇರಿರುವ ಜಾತ್ರೆಗಳಲ್ಲಿ ತೇರಾದ ಮೇಲೆ ಜಾತ್ರೆ ನೆರೆಯಿತು".[೩೫]

ಆದಿ ಮಾನವನ ಕಾಲದಿಂದಲೇ ಧಾರ್ಮಿಕಾಚರಣೆಗಳು ರೂಢಿಯಲ್ಲಿದ್ದಿರಬೇಕೆಂದು ತೋರುತ್ತದೆ. ಸಾಮಾನ್ಯವಾಗಿ ಆದಿಮಾನವನ ಕಾಲದ ದೇವತಾರಾಧನೆಯೇ ಮೊದಲಾದ ಧಾರ್ಮಿಕ ಆಚರಣೆಗಳು

ಸಾಮೂಹಿಕವಾಗಿಯೇ ನಡೆಯುತ್ತಿದ್ದಿರಬೇಕು. "ಅಲೆಮಾರಿ ಜೀವನದಿಂದ ಬೇಸತ್ತು ತಾತ್ಕಾಲಿಕವಾಗಿ ಯಾದರೂ ನೀರು, ನೆರಳು ಕಂಡ ಕಡೆ ನೆಲೆಯೂರಿದ ನಂತರ ಅಲೆಮಾರಿ ಜನ ಬುಡಕಟ್ಟು ಜನರಾಗಿ ಪರಿವರ್ತನೆಗೊಂಡ ಸಂದರ್ಭದಲ್ಲಿ ಜಾತ್ರೆಗಳು ಸರಳ ಮೂಲಾವಸ್ಥೆಯಲ್ಲಿ ಕಾಣಿಸಿ ಕೊಂಡಿರಬೇಕು."[೩೬]

ಸಿಂಧೋಳ್ಳು ಸಮುದಾಯವು ಕರ್ನಾಟಕದ ನಾನಾ ಭಾಗದಲ್ಲಿ ವಾಸಿಸುತ್ತಿದ್ದು, ಭಿಕ್ಷಾಟನೆಯ ಜೊತೆಯಲ್ಲಿ ಇತರ ವೃತ್ತಿಗಳಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದರಿಂದ ವಿರಾಮ ಪಡೆದು ಸಂತೋಷದಿಂದಿರಲು ಸಮುದಾಯದವರು ಹಬ್ಬ, ಹರಿದಿನ ಜಾತ್ರೆಗಳಲ್ಲಿ ಪಾಲ್ಗೊಳ್ಳುತ್ತಾರೆ. ತಮ್ಮ ತಮ್ಮ ಗುಡಾರಗಳಿಗೆ ಹಸಿರು ತೋರಣಗಳಿಂದ ಸಿಂಗರಿಸಿ, ಜಾತ್ರೆಗಳಲ್ಲಿ ಸಾಮೂಹಿಕವಾಗಿ ಪಾಲ್ಗೊಂಡು ಸಂತೋಷಪಡುತ್ತಾರೆ. ಹಬ್ಬಗಳು ಒಂದು ಕುಟುಂಬಕ್ಕೆ ಸೀಮಿತವೆಂಬಂತೆ ಇರುತ್ತವೆ. ಸಾಮೂಹಿಕವಾಗಿ ಆಚರಿಸುತ್ತಾರೆ. ಇವರು ಹೆಚ್ಚಿನದಾಗಿ ಬಣ್ಣ ಬಣ್ಣದ ವೇಷ ಹಾಕಿಕೊಂಡು, ಧಾರ್ಮಿಕ ಭಿಕ್ಷೆಯನ್ನು ಬೇಡುತ್ತಾರೆ. ಇವರಿಗೆ ಜಾತ್ರೆಗಳು ಬಂದರೆ ಸಾಕು, ಜನರನ್ನು ಆಕರ್ಷಣೆ ಮೂಲಕ ನರ್ತನೆ ಮಾಡುತ್ತಾರೆ. ಇವರಿಗೆ ಜಾತ್ರೋತ್ಸವಗಳು ಬಂದರೆ ಸುಗ್ಗಿ ಕಾಲವೆಂದು ಭಾವಿಸುತ್ತಾರೆ ಮತ್ತು ಇವರ ಬದುಕಿನ ಜೀವಂತ ನಾಡಿ ಮಿಡಿತಗಳಾಗಿವೆ.

**ಹಂಪಿಯ ವಿರೂಪಾಕ್ಷೇಶ್ವರ ಜಾತ್ರೆ :** ಇತಿಹಾಸ ಪರಂಪರೆಗೆ ಸೇರ್ಪಡೆಗೊಂಡಿರುವ ಹಂಪಿ ತನ್ನದೇ ಆದ ವೈಶಿಷ್ಟ್ಯ ಪೂರ್ಣ ಸಾಂಸ್ಕೃತಿಕ ಚರಿತ್ರೆಯನ್ನು ಹೊಂದಿದೆ. ದಕ್ಷಿಣ ಭಾರತದ ಇತಿಹಾಸದಲ್ಲಿ ತನ್ನ ಸಾಂಸ್ಕೃತಿಕ ವೈಭವದ ಉತ್ತುಂಗ ಶಿಖರವನ್ನೇರಿ ಮೆರೆದ ವಿಜಯನಗರ ಸಾಮ್ರಾಜ್ಯ ಮೂಲತಃ ಹುಟ್ಟಿ ಬೆಳೆದು ಬಾಳಿದ್ದು ಈ ನೆಲದಲ್ಲಿ. "ಬೃಹತ್ ಏಕಶಿಲಾ ಬೆಟ್ಟಗಳು, ದೊಡ್ಡ ದೊಡ್ಡ ಗ್ರಾನೈಟ್ ಕಲ್ಲು ಗುಂಡುಗಳ ರಾಶಿಯನ್ನು ಹೊತ್ತುಕೊಂಡಿರುವ ಬೆಟ್ಟ ಸಾಲುಗಳ ಪ್ರದೇಶ ಇದಾಗಿದೆ. ನಿಸರ್ಗನಿರ್ಮಿತವಾದ ಬೃಹತ್ ಗವಿಗಳು, ಕಂದಕಗಳು, ಏಕಶಿಲಾ ಬೆಟ್ಟಗಳು, ಬಂಡೆಗಳ ಕಡಿದಾದ ಇಳಿಜಾರುಗಳು ಇಲ್ಲಿನ ನಿಸರ್ಗ ಸೌಂದರ್ಯವನ್ನು ಮತ್ತಷ್ಟು ಹೆಚ್ಚಿಸಿವೆ. ಬೆಟ್ಟಗುಡ್ಡಗಳ ನಡುವೆ ನುಸುಳಿ ಹರಿಯುವ ತುಂಗಭದ್ರ ನದಿ ಇದು ಈ ಪ್ರದೇಶಕ್ಕೆ ಮತ್ತೊಂದು ವರದಾನವಾಗಿದೆ. ಈ ಪ್ರದೇಶದ ಜನರ ಜೀವನದಿ ಕೂಡ ಇದಾಗಿದೆ. ಈ ನದಿಯ ಎಡಬಲ ದಂಡೆಗಳ ಹಲವು ಸ್ಥಳಗಳಲ್ಲಿ ಆದಿಮ ಸಂಸ್ಕೃತಿಯ ನೆಲೆಗಳನ್ನು ಗುರುತಿಸಲಾಗಿದೆಯೆಂದು."[೩೭] ವಿಜಯನಗರ ಸಾಮ್ರಾಜ್ಯದ ಮೂಲದೈವವಾದ ವಿರೂಪಾಕ್ಷನ ಬಗ್ಗೆ ಹಲವಾರು ಪುರಾಣ, ಪುಣ್ಯಕಥೆ, ಐತಿಹ್ಯ, ಮಹಾಕಾವ್ಯಗಳಲ್ಲಿ ಮಾಹಿತಿ ಲಭ್ಯವಿದೆ. ಹಾಗಾಗಿ ವಿಜಯನಗರ ಸಾಮ್ರಾಜ್ಯದಲ್ಲಿ ವಿರೂಪಾಕ್ಷೇಶ್ವರ ಧಾರ್ಮಿಕವಾಗಿ ಪ್ರಸಿದ್ಧಿಪಡೆದ ದೈವವಾಗಿದೆ.

ಹಂಪಿ ವಿರೂಪಾಕ್ಷೇಶ್ವರ ಜಾತ್ರೆ ಏಪ್ರಿಲ್ ತಿಂಗಳಲ್ಲಿ ನಡೆಯುತ್ತಿದ್ದು ಸಾಂಕೇತಿಕವಾಗಿ ಎರಡು ರಥಗಳನ್ನು ಎಳೆಯುವರು. ಅಂದು ಬಳ್ಳಾರಿ ಜಿಲ್ಲೆಯ ಸಿಂಧೋಳ್ಳುರು ಹಂಪಿ ರಥ ಜಾತ್ರೆ ಎಳೆಯಲಿಕ್ಕೆ ಬರುತ್ತಾರೆ. ಪಂಪಾಂಬಿಕೆ ಪಂಪಾಪತಿಯರೆಂಬ ಕಲ್ಪನೆಯಿಂದ ಜೋಡಿ ರಥಗಳನ್ನು ಎಳೆಯುತ್ತಿರುವುದರ ಬಗೆಗೆ ಜನಪದ ಗೀತೆಗಳಲ್ಲಿ ಉಲ್ಲೇಖಗಳು ದೊರಕುತ್ತವೆ. ಆದರೆ ಇಂದಿನ ದಿನಗಳಲ್ಲಿ ಒಂದು ರಥಕ್ಕೆ ಪಂಪಾಪತಿಯದೆಂದು ನಾಮಕರಣವಾಗಿ ಕರೆದರೆ ಇನ್ನೊಂದಕ್ಕೆ ವಿದ್ಯಾರಣ್ಯರ ರಥವೆಂದು ಕರೆಯುವರು. ಪ್ರತಿಯೊಂದು ಸಮುದಾಯದವರು ಈ ಉತ್ಸವದಲ್ಲಿ ಭಾಗವಹಿಸುತ್ತಾರೆ. ರಥವನ್ನು

ಎಳೆಯುವಾಗ, ಸನ್ನೆ ಹಾಕುವಾಗ ಕಮಲಾಪುರದ, ಹೊಸಪೇಟೆಯ ನಾಯಕರು ನೇತೃತ್ವವಹಿಸುತ್ತಾರೆ. "ರಥವನ್ನು ಎಳೆಯುವಾಗ, ಹೂ ಹಣ್ಣು ಎಸೆಯುವರು. ಜನಪದ ಕಾವ್ಯವೊಂದರಲ್ಲಿ ಹಂಪಿಯ ಗೋಪುರಕ್ಕೆ ನಿಂಬೆಹಣ್ಣನ್ನು ಎಸೆಯುವ ವಾಡಿಕೆಯಿದೆ ಎಂದು ತಿಳಿದುಬರುತ್ತದೆ".[೩೮] ರಥ ಎಳೆದ ಮೇಲೆ ಗುಡಿಯ ಎದುರಿಗೆ ನಿಲ್ಲಿಸುತ್ತಾರೆ. ಅಂತಹ ಸಮಯದಲ್ಲಿ ಸಿಂಧೋಳ್ಳರು ಬುರ್ರ ಬುರ್ರವಾದ್ಯದೊಂದಿಗೆ ಕುಣಿಯುತ್ತಾ, ಕೇಕೆ ಹಾಕುತ್ತತನ್ನ ನೃತ್ಯದೊಂದಿಗೆ ಕುಣಿಯುತ್ತಾರೆ. ಹೆಂಡತಿಯೊಂದಿಗೆ

"ಅಮ್ಮ ತಾಯಿ ವಿರೂಪಾಕ್ಷಪ್ಪ
ಅಮ್ಮ ತಾಯಿ ಪಂಪಮ್ಮ
ಅಮ್ಮ ಸುಂಕಲಮ್ಮ
ಅಮ್ಮ ದುರುಗವ್ವ"

ಜಾತ್ರೆಗಳು ಗುಡಾರಗಳ ಮುಂದೆ ದೇವಿಯ ಮಂಟಪದ ಮುಂದೆ ಸ್ತ್ರೀಯು ಬುರ್ರ ಬುರ್ರ ವಾದ್ಯ ನುಡಿಸಿದರೆ ಪುರುಷನು ಚಾಟಿಯನ್ನು ಮೈಯಿಗೆ ಬಡಿದುಕೊಳ್ಳುತ್ತಾ

ಹ್ಯಾಹ್ಯಾ......... ಮಾರಮ್ಮ
ಹ್ಯಾಹ್ಯಾ........ . ದುರ್ಗಮ್ಮ

ಎಂದು ಕೂಗುತ್ತಾ ಬಡಿದುಕೊಳ್ಳುತ್ತಾ ತಮ್ಮ ಕರ್ತವ್ಯಗಳನ್ನು ನೆರವೇರಿಸುತ್ತಾರೆ.

**ಗುಳೇವು ಲಕ್ಕಮ್ಮ ಜಾತ್ರೆ :** ಕೂಡ್ಲಿಗಿಯಲ್ಲಿ ಗುಳೇವು ಲಕ್ಕಮ್ಮ ಜಾತ್ರೆ ಒಂದು ವಿಶೇಷ ಜಾತ್ರೆಯಾಗಿದೆ. ಈ ಗ್ರಾಮದೇವತೆ ಕೂಡ್ಲಿಗಿ ಮತ್ತು ಪಕ್ಕದ ಗೋವಿಂದಗಿರಿ ಎಂಬ ಹಳ್ಳಿಯಲ್ಲಿ ನೆಲೆಸಿದ್ದಾಳೆ ಎಂದು ಪ್ರತೀತಿ ಇದೆ. ಕೂಡ್ಲಿಗಿನ ಸಮಸ್ತ ಜನರು ಒಂದು ದಿನದ ಮಟ್ಟಿಗೆ ಊರನ್ನು ಬಿಟ್ಟು, ಊರಿನ ಪಕ್ಕದ ತೋಟದಲ್ಲಿ ಒಂದು ಮರಕ್ಕೆ ಒಂದು ಕುಟುಂಬದಂತೆ ಆ ಮರಕ್ಕೆ ಜಮಖಾನೆ, ತಾಡುಪಾಲುಗಳಿಂದ ಅಡ್ಡಕಟ್ಟಿಕೊಂಡು ಬೆಳಿಗ್ಗೆ ೬ ಗಂಟೆಯಿಂದ ಸಾಯಂಕಾಲ ೬ ಗಂಟೆಯವರೆಗೆ ಕಳೆಯುತ್ತಾರೆ. ಕೆಲವರು ಎತ್ತಿನ ಬಂಡಿಗಳನ್ನು ಹೂಡಿಕೊಂಡು ಬರುತ್ತಾರೆ. ಇನ್ನೂ ಕೆಲವೆಡೆ ಒಂದೇ ದೊಡ್ಡ ಮರದಲ್ಲಿ ಎರಡರಿಂದ ಮೂರು ಕುಟುಂಬಗಳು ಇರುತ್ತವೆ. ಬಳ್ಳಾರಿ ರಸ್ತೆಯಲ್ಲಿ ಹುಣಸೇ ಮರಗಳ ಸಾಲಿನಲ್ಲಿ ಹಲವಾರು ಕುಟುಂಬಗಳು ಆ ದಿನ ಒಟ್ಟಾಗಿ ಒಂದೇ ಕಡೆ ನೆಲೆಸುತ್ತಾರೆ. ಅಂದು ಸಿಂಧೋಳ್ಳು ಸಮುದಾಯದವರು ಊರು ಬಿಟ್ಟು ಊಟದ ಭಿಕ್ಷಾಟನೆಗಾಗಿ ಜಾತ್ರೆಯಲ್ಲಿ ಅಲೆಯುತ್ತಿರುತ್ತಾರೆ. ಅಂದು ಬಂದಿರುವ ಸಮುದಾಯಗಳು ಸಿಹಿ ಅಡುಗೆ ಮಾಡಿದರೆ, ಇನ್ನೂ ಕೆಲವರು ಮಾಂಸದ ಅಡುಗೆ ಮಾಡಿಕೊಂಡು ಬರುತ್ತಾರೆ. ಸಾಯಂಕಾಲ ಗುಳೇವು ಲಕ್ಕಮ್ಮ ದೇವತೆ ತನ್ನ ಮೂಲ ಸ್ಥಳದಿಂದ ಬಂದು ಊರಮ್ಮನ ದೇವಸ್ಥಾನದ ಎದುರು ಕೂಡಿಸಿ ಪೂಜೆ ಸಲ್ಲಿಸುತ್ತಾರೆ. ಲಕ್ಕಮ್ಮ ಹಾಗೂ ಊರಮ್ಮ ಸಹೋದರಿಯರೆಂದು ಕಥೆ ಹೇಳುತ್ತಾರೆ. ಇದಕ್ಕೂ ಮುಂಚೆ ಬೆಳಿಗ್ಗೆ ಊರಿನ ಜನರನ್ನು ಹೊರಡಿಸಲು ದೇವತಾ ಪೂಜಾರಿ ದೇವರನ್ನು ಹೊತ್ತುಕೊಂಡು, ಊರೆಲ್ಲ ತಿರುಗಾಡುತ್ತಾನೆ. ಸಿಂಧೋಳ್ಳು ಸಮುದಾಯದ ವೆಂಕಟಪ್ಪನವರು ದೇವಿ ಎದುರಿಗೆ ಚಾಟಿಯನ್ನು ಬಾರಿಸಿಕೊಂಡು, ಬುರ್ರ ಬುರ್ರವಾದ್ಯ ದೊಂದಿಗೆ ನೃತ್ಯ ಮಾಡುತ್ತಾನೆ.[೩೯] ಸಾಯಂಕಾಲ ಮತ್ತೆ ಊರೊಳಗೆ ಕರೆದುಕೊಂಡು ಬರುತ್ತಾನೆ. ರಾತ್ರಿ ಸಮಯದಲ್ಲಿ ಪ್ರತಿಯೊಂದು ಕುಟುಂಬಗಳಿಗೂ ಭೇಟಿನೀಡಿ, ಹಣ, ಮಾಂಸದ ಸಾರು, ಸ್ವೀಕರಿಸಿಕೊಂಡು ಬರುತ್ತಾನೆ.

**ಮಾರಮ್ಮ ಜಾತ್ರೆ :** ಹಾವೇರಿ ಜಿಲ್ಲೆಯ ಕಾಲುವೆ ಕಲ್ಲಾಪುರ ಎಂಬ ಗ್ರಾಮದಲ್ಲಿ ಪ್ರತಿವರ್ಷ ಸೆಪ್ಟಂಬರ್ ಅಥವಾ ಅಕ್ಟೋಬರ್ ತಿಂಗಳಿನಲ್ಲಿ ಜಾತ್ರೆ ನಡೆಯುತ್ತದೆ. ಅದು ಮಂಗಳವಾರ ದಿನದಂದು ಸಿಂಧೋಳ್ಳುರು ಜಾತ್ರೆ ಬರುವ ಮುನ್ನದಲ್ಲಿ ದೇವರ ಗುಡಾರ ಸ್ವಚ್ಛಗೊಳಿಸುವುದು ಅಮ್ಮನ ಪೆಟ್ಟಿಗೆ ಧೂಳು ಕುಳಿತುಕೊಂಡಿದ್ದರೆ, ಅದನ್ನು ಸ್ವಚ್ಛಮಾಡುತ್ತಾರೆ. ಇದರಲ್ಲಿ ಕಟ್ಟಿಗೆ ಮೂರ್ತಿ ಇದೆ. ಮಾರಮ್ಮನ ಪೂಜಾರಿ ಬೆಳ್ಳಿಯ ಮುಖ, ಸಣ್ಣ ಛತ್ರಿ, ಪಾದ, ಆಯುಧಗಳೆಲ್ಲ ಸಂಬಂಧಪಟ್ಟ ಆಭರಣಗಳನ್ನು ತೆಗೆದಿಟ್ಟು ಕೊಳ್ಳುವರು. ಆ ಸಾಮಾಗ್ರಿಗಳನ್ನು ದೇವಿ ಮಾರಮ್ಮಳಿಗೆ ತೊಡಿಸಿ, ಅರಿಷಿಣ, ಕುಂಕುಮ ಹಚ್ಚಿ ನಂತರ ಕೊರಳಲ್ಲಿ ಕರಿಮಣಿ ತಾಳಿ, ಬಿಳಿಯ ಮುತ್ತಿನೊಂದಿಗೆ ಸಿಂಗರಿಸುತ್ತಾರೆ. ನಂತರ ಪೂಜಾರಿ ಮೂಲಕ ಪೂಜೆಯಾಗುತ್ತದೆ. ಪೂಜೆಯ ಸಂದರ್ಭದಲ್ಲಿ ತನ್ನ ಹೆಂಡತಿ ಬುರ್ರ ಬುರ್ರವಾದ್ಯದೊಂದಿಗೆ ತೀವ್ರವಾಗಿ ಬಾರಿಸುತ್ತಾಳೆ. ಮಧ್ಯಾಹ್ನ ಸಮಯದಲ್ಲಿ ಮಾರಮ್ಮನ ಗುಡಿಯ ಮುಂಭಾಗದಲ್ಲಿ ಕುರಿ ಮತ್ತು ಕೋಳಿ ಬಲಿಕೊಡುವ ವ್ಯವಸ್ಥೆಯಿದೆ. ಪೂಜಾರಿ ಪೂಜೆ ಮಾಡಿದ ಬಳಿಕ ಬಲಿಯಾಗುವ ಪ್ರಾಣಿಗಳಿಗೆ ಊದುಬತ್ತಿಯಿಂದ ಬೆಳಗುವ ಮೂಲಕ ಪೂಜಿಸುವನು. ಬಲಿಯಾಗುವ ಪ್ರಾಣಿಯ ಕೊರಳಿನ ಹಗ್ಗ ಜಗ್ಗಿ ಹಿಡಿದರೆ, ಇನ್ನೊಬ್ಬ ವ್ಯಕ್ತಿಯು ಹಿಂದಿನೆರಡು ಕಾಲನ್ನು ಎಳೆದು ಹಿಡಿದಿರುತ್ತಾನೆ. ಮತ್ತೊಬ್ಬ ವ್ಯಕ್ತಿ ಕೊಡಲಿಯಿಂದ ಒಂದೇ ಏಟಿಗೆ ಕುತ್ತಿಗೆ ತುಂಡಾಗುವಂತೆ ಕತ್ತರಿಸಲು ಯತ್ನಮಾಡುತ್ತಾನೆ. ರುಂಡವನ್ನು ಕತ್ತರಿಸಿದ ಬಳಿಕ ಬಲಗಾಲನ್ನು ಕಡಿದು ಅದರ ಬಾಯಲ್ಲಿಟ್ಟು ದೇವಿಗೆ ಎಡೆ ತೋರಿಸಿ ಮನೆಗೆ ಹೊತ್ತು ತರುತ್ತಾರೆ.[೪೦] ಹೀಗೆ ಮೂರು ದಿನ ಬಲಿಕೊಡುವುದು, ಭಿಕ್ಷೆ ಬೇಡುವುದು, ನೃತ್ಯಮಾಡುವುದು ಈ ಸಮುದಾಯದ ಪದ್ಧತಿಯಾಗಿರುತ್ತದೆ.

**ಕೊಪ್ಪಳದ ಗವಿಸಿದ್ದೇಶ್ವರ ಜಾತ್ರೆ :** ಪ್ರತಿವರ್ಷ ಜನವರಿಯಲ್ಲಿ ಗವಿಸಿದ್ದೇಶ್ವರ ಜಾತ್ರೆಯನ್ನು ಸಿಂಧೋಳ್ಳು ಸಮುದಾಯದವರು ಆಚರಿಸುತ್ತಾರೆ. ಇವರ ಜೊತೆಯಲ್ಲಿ ಇತರ ಸಮುದಾಯದವರು ಸುತ್ತಮುತ್ತಲ ಗ್ರಾಮದ ಭಕ್ತರು ಪಾಲ್ಗೊಳ್ಳುತ್ತಾರೆ. ನೂರಾರು ಅಂಗಡಿ ಮಳಿಗೆಗಳಿರುತ್ತವೆ. ಬ್ರಾಹ್ಮಣರು, ಮುಸ್ಲಿಂ, ದಲಿತರು, ಎಲ್ಲಾ ಜಾತಿ ವರ್ಗದ ಜನರ ಸಮ್ಮುಖದಲ್ಲಿ ಗವಿಮಠದ ಭಕ್ತರು ಇಲ್ಲಿನ ಕಾರ್ಯಕ್ರಮಗಳಲ್ಲಿ ಪಾಲ್ಗೊಳ್ಳುವರು. ಈ ಹಿನ್ನೆಲೆಯಲ್ಲಿ ಸಿಂಧೋಳ್ಳು ಸಮುದಾಯದ ಮುಖ್ಯಸ್ಥರು ಭಾಗವಹಿಸಿ ತಮ್ಮ ಭಕ್ತಿ ಸೇವೆ ಮಾಡಿಕೊಳ್ಳುತ್ತಾರೆ. ಈ ಭಾಗದಲ್ಲಿ ನಡೆಯುವ ಜಾತ್ರೆ ಎಂಟು ದಿನಗಳವರೆಗೆ ನಡೆಯುತ್ತಿದ್ದು, ಪ್ರತಿದಿನ ಒಂದಿಲ್ಲೊಂದು ವಿಧಿಯಾಚರಣೆಗಳಿರುತ್ತವೆ.

ಸಿಂಧೋಳ್ಳು ಸಮುದಾಯದವರು ವ ಹಾರಥೋತ್ಸವದ ಅಂಗವಾಗಿ ಆ ದಿನ ಬೆಳಗಿನ ಜಾವ ಸುಮಾರು ಐದು ಗಂಟೆಗೆ ತಮ್ಮ ಗುಡಾರಗಳಿಂದ ಹೊರಗೆ ಬಂದು, ತಮ್ಮ ಗುಡಾರಗಳನ್ನು ಸಾರಿಸಿ, ಶುಭ್ರತೆಯಿಂದ ಕಾಪಾಡಿಕೊಳ್ಳುತ್ತಾರೆ. ಅಂದು ಮನೆಯಲ್ಲಿಯೂ ಜಾತ್ರೆಯ ಸಂಭ್ರಮ ತುಂಬಿರುತ್ತದೆ. ಹಿರಿಯರು, ಮಕ್ಕಳು, ಎಲ್ಲರೂ ಸ್ನಾನಮಾಡಿಕೊಂಡು ದೇವಸ್ಥಾನದ ಹತ್ತಿರ ಹೋಗುತ್ತಾರೆ. ಪ್ರಮುಖ ವ್ಯಕ್ತಿಗಳು ಬಣ್ಣ ಬಣ್ಣದ ವೇಷಹಾಕಿಕೊಂಡು, ಭಿಕ್ಷೆಕೇಳಲಿಕ್ಕೆ ಹೋಗುತ್ತಾರೆ. ಸಂಜೆಯ ಸಮಯದಲ್ಲಿ ಉತ್ಸವ ಮೂರ್ತಿಯನ್ನು ದೊಡ್ಡ ತೇರಿನಲ್ಲಿಟ್ಟು ಪಾದಕಟ್ಟೆಯವರೆಗೆ ಎಳೆಯುತ್ತಾರೆ. ನೆರೆದ ಜನ ತೇರಿಗೆ ಬಾಳೆಹಣ್ಣು, ಉತ್ತತ್ತಿ, ಬೆಲ್ಲ ಎಸೆಯುತ್ತಾರೆ. ರಥದಗಾಲಿಗಳಿಗೆ ಕಾಯಿಗಳನ್ನು ಹೊಡೆಯುತ್ತಾರೆ.

ಇಂತಹ ಸಂದರ್ಭದಲ್ಲಿ ಸಿಂಧೋಳ್ಳು ಸಮುದಾಯದ ಚಿಕ್ಕ ಚಿಕ್ಕ ಮಕ್ಕಳು ಬಾಳೆಹಣ್ಣು, ಕಾಯಿಗಳನ್ನು ಆರಿಸಿಕೊಂಡು ಮನೆಗೆ ತರುತ್ತಾರೆ.

ಗವಿಸಿದ್ದೇಶ್ವರ ಜಾತ್ರೆ ೧೫ ದಿನಗಳವರೆಗೆ ನಡೆಯುವುದು. ಅಂತಹ ಸಂದರ್ಭದಲ್ಲಿ ಪೋತರಾಜ ತನ್ನ ಬುಟ್ಟಿಯಲ್ಲಿ ದೇವಿ ಹೊತ್ತುಕೊಂಡು ಭಿಕ್ಷೆ ಬೇಡಲಿಕ್ಕೆ ಹೋಗುತ್ತಾನೆ. ಬುರ್ರ ಬುರ್ರ ವಾದ್ಯದೊಂದಿಗೆ ಕುಣಿಯುತ್ತಾ, ತನ್ನ ಮುಂಗೈ ಮೇಲೆ ಚೂಪಾದ ಕತ್ತಿಯಿಂದ ರಕ್ತ ಚಿಮ್ಮಿಸುತ್ತಾನೆ. ಇದನ್ನು ನೋಡಿ ಜಾತ್ರೆಯಲ್ಲಿ ನೆರೆದಿರುವ ಜನರು ಬೆರಗಾಗುತ್ತಾರೆ. ಈ ಜಾತ್ರೆಯು ತಮ್ಮ ಕುಟುಂಬಗಳಲ್ಲಿ ವೈಭವ, ಸಡಗರ, ಸಂಭ್ರಮದಿಂದ ಭಿಕ್ಷಟಾನೆಯನ್ನು ಆಚರಿಸಿ, ಸ್ವಾಗತಿಸುತ್ತಾರೆ.

**ದೊಡ್ಡಕೇರಮ್ಮ ಜಾತ್ರೆ :** ಕೆ.ಎ.ಆರ್. ಪೇಟೆಯ ಉತ್ತರಕ್ಕೆ ದೇವೀರಮ್ಮಣ್ಣಿ ಕೆರೆಯ ಹಿನ್ನೀರ ಪ್ರದೇಶದಲ್ಲಿ ದೊಡ್ಡಕೇರಮ್ಮ ದೇವಾಲಯ ಇದೆ. ಇದು ಕೃಷ್ಣರಾಜಪೇಟೆ ತಾಲ್ಲೂಕಿನ ಮೂಲ ಗ್ರಾಮ ದೇವತೆಯಲ್ಲ. ಅಗ್ರಹಾರ ಬಾಚಳ್ಳಿಯ ಬಾಚಳಮ್ಮ ದೊಡ್ಡಕೇರಮ್ಮ ದೇವತೆ ಇಲ್ಲಿ ನೆಲೆಯಾಗಿದ್ದಾಳೆ ಎಂಬುದು ವಕ್ತೃಗಳ ಅಭಿಪ್ರಾಯವಾಗಿದೆ. ಕಿಕ್ಕೇರಿ ಸಿಂಧೋಳ್ಳು ಸಮುದಾಯದವರು ದೊಡ್ಡಕೇರಮ್ಮ ಜಾತ್ರೆಯನ್ನು ಆಚರಿಸುತ್ತಾರೆ. ಅಂದು ಮನೆಯಲ್ಲಿ ಸಂಭ್ರಮ ತುಂಬಿರುತ್ತದೆ. ಹಿರಿಯರು, ಮಕ್ಕಳು, ಎಲ್ಲರು ಮುಡಿಯುಟ್ಟು ಮನೆಯನ್ನು ಮಾವಿನ ಎಲೆಯ ತಳಿರು ತೋರಣಗಳಿಂದ ಸಿಂಗರಿಸುತ್ತಾರೆ. ಮನೆಯಲ್ಲಿ ಪ್ರತಿಯೊಂದು ವಸ್ತುವಿಗೂ ಪೂಜೆ ಸಲ್ಲಿಸಿ, ದೊಡ್ಡಕೇರಮ್ಮ ದೇವಸ್ಥಾನದ ಹತ್ತಿರ ಹೊಗುತ್ತಾರೆ. ಉತ್ಸವ ಮೂರ್ತಿಯ ಉತ್ಸವವು ಊರಿನಲ್ಲೆಲ್ಲಾ ನಡೆಯುತ್ತದೆ. ಸಂಜೆ ಊರಿನಲ್ಲಿ ಈ ಉತ್ಸವ ನಡೆಯುವಷ್ಟರಲ್ಲಿ ರಥ ಅಲಂಕಾರಗೊಂಡು ಉತ್ಸವಕ್ಕಾಗಿ ಸಿದ್ಧವಾಗಿರುತ್ತದೆ. ವಾದ್ಯ ಸಮೇತ ದೊಡ್ಡಕೇರಮ್ಮನ ಉತ್ಸವ ಊರಿನಲ್ಲಿ ನಡೆದ ಮೇಲೆ ಉತ್ಸವ ಮೂರ್ತಿಯನ್ನು ರಥದಲ್ಲಿಡುತ್ತಾರೆ. ಅಷ್ಟರಲ್ಲಿ ಸಿಂಧೋಳ್ಳುರು ತಮ್ಮ ಬುಟ್ಟಿಯ ದೇವರನ್ನು ಹೊತ್ತುಕೊಂಡು, ಬುರ್ರ ಬುರ್ರ ವಾದ್ಯದೊಂದಿಗೆ ಕುಣಿಯುತ್ತಿರುತ್ತಾರೆ. ದೇವಿಯ ಉತ್ಸವ ಮೂರ್ತಿಯನ್ನು ತೇರಿನ ಮೇಲೆ ಕೂರಿಸಿದ ತಕ್ಷಣ ಆಡಿನ ಮರಿಯನ್ನು ಬಲಿಕೊಡುತ್ತಾರೆ. ಬಲಿ ಅನ್ನದ ಪ್ರಸಾದ ಹಂಚಿಕೆಯಾದ ನಂತರ ಬೀದಿಯಲ್ಲಿ ತೇರನ್ನು ಎಳೆಯುತ್ತಾರೆ. ರಥವನ್ನು ಎಳೆದ ಮೇಲೆ ರಥವನ್ನು ಈಶ್ವರ ದೇವಾಲಯದ ಎದುರು ನಿಲ್ಲಿಸುತ್ತಾರೆ. ರಥದಿಂದ ದೇವಿಯ ಉತ್ಸವಮೂರ್ತಿಯನ್ನು ಕೆಳಗಿಳಿಸಿ ಮತ್ತೆ ವಾದ್ಯ ಸಹಿತ ಊರಿನಲ್ಲಿ ಮೆರವಣಿಗೆ ಮಾಡುತ್ತಾರೆ. ಈ ಮೆರವಣಿಗೆಯಲ್ಲಿ ಸಿಂಧೋಳ್ಳು ಪೋತರಾಜ, ಮಹಿಳೆಯರು, ಮಕ್ಕಳು ಎಲ್ಲರು ಭಾಗವಹಿಸಿ, ಸಂಭ್ರಮದಿಂದ ಆಚರಣೆ ಮಾಡುತ್ತಾರೆ.

### ೪. ಹರಕೆಗಳು

ಸಿಂಧೋಳ್ಳುರು ತಮ್ಮ ಕುಲದೇವತೆಯನ್ನು ಒಲಿಸಿಕೊಳ್ಳಲು, ಬಗೆ ಬಗೆಯ ಸಮಸ್ಯೆಗಳು ನಿವಾರಣೆ ಯಾಗಲೆಂದು ತಂತ್ರಗಳನ್ನು ಹೂಡುತ್ತಾನೆ. ಮುಖ್ಯವಾಗಿ ಆಕೆ ಜನರಲ್ಲಿ ಬಗೆ ಬಗೆಯ ರೋಗ ರುಜಿನಿಗಳನ್ನು ಹಬ್ಬಿಸುತ್ತಾಳೆ. ಜನರ ಆಸೆಗಳು ಈಡೇರದಂತೆ ಮಾಡುತ್ತಾಳೆ. ಕೈಗೆತ್ತಿಕೊಂಡ ಕೆಲಸಗಳಿಗೆ ವಿಘ್ನ ಉಂಟುಮಾಡುತ್ತಾಳೆ. ಆಗ ಕೈಸೋತ ಸಿಂಧೋಳ್ಳುರು ತಮ್ಮ ಕಷ್ಟ ಪರಿಹಾರಕ್ಕಾಗಿ ಕುಲದೇವತೆಗಳಿಗೆ ವಿವಿಧ ಬಗೆಯ ಹರಕೆಗಳನ್ನು ಹೊತ್ತುಕೊಳ್ಳುತ್ತಾರೆ. ಇಷ್ಟಾರ್ಥ ಪೂರೈಸಲಿ, ಪೂರೈಸದಿರಲಿ, ಭಕ್ತರು ತಮ್ಮ ಮಾತಿನಂತೆ ದೈವಗಳಿಗೆ ಹರಕೆ ಒಪ್ಪಿಸುತ್ತಾರೆ. ಈ ಅರ್ಥದಲ್ಲಿ ದೈವವೇ ತನಗೆ ಭಕ್ತರಿಂದ ಹರಕೆ

ಬರುವಂತೆ ಮಾಡುತ್ತಾಳೆ ಎಂಬುದು ಸ್ಪಷ್ಟವಾಗುತ್ತದೆ. ಕುಲದೇವತೆಗಳಿಗೆ ಎರಡು ವಿಧವಾದ ಹರಕೆಗಳು ಸಂದಾಯವಾಗುತ್ತವೆ ಅವುಗಳೆಂದರೆ

೧. ವೈಯಕ್ತಿಕ ಹರಕೆಗಳು ೨. ಕೌಟುಂಬಿಕ ಹರಕೆಗಳು

**೧. ವೈಯಕ್ತಿಕ ಹರಕೆಗಳು :** ಸಿಂಧೋಳ್ಳು ಸಮುದಾಯದವರು ವೈಯಕ್ತಿಕವಾಗಿ ಕಷ್ಟದಲ್ಲಿ ಬಂದವರು. ಅಂತಹ ಕಷ್ಟ ತೀರುವುದಕ್ಕಾಗಿ ದೈವಗಳಿಗೆ ಹರಕೆ ಒಪ್ಪಿಸುತ್ತಾರೆ. ಕ್ಷೇತ್ರಕಾರ್ಯದಲ್ಲಿ ಲಭಿಸಿರು ಹರಕೆಗಳನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

೧. ಭಿಕ್ಷೆಯ ಮೊತ್ತ ಜಾಸ್ತಿ ಬಂದರೆ, ದೇವರಿಗೆ ಮೂರ್ತಿ ಮಾಡಿಸುವುದುಂಟು.

೨. ದೇವರಿಗೆ ಸೀರೆ ಕುಪ್ಪಸ ಕೊಡುವುದು

೩. ತೆಂಗಿನಕಾಯಿ ಒಡೆಸುವುದು

೪. ಉಪವಾಸ ಮಾಡುವುದು

೫. ಅರಿಷಿಣ ಕುಂಕುಮ ಹರಕೆ ಒಪ್ಪಿಸುವುದು

೬. ಉರುಳುಸೇವೆ ಮಾಡುವುದು

೭. ಹೊಸ ಬುಟ್ಟಿಗಳನ್ನು ತರುವುದು

೮. ಪ್ರತ್ಯೇಕ ಗುಡಾರ ನಿರ್ಮಾಣ ಮಾಡುವುದು

೯. ಬುರ್ರ ಬುರ್ರವಾದ್ಯ ಹೊಸದಾಗಿ ಮಾಡುವುದು

೧೦. ತನ್ನ ಮೈಯಿಗೆ ೨೧ ಬಾರಿ ಚಾಟಿ ಹೊಡೆದುಕೊಳ್ಳುವುದು

೧೧. ಜನರು ಕೊಟ್ಟಿರುವಂತಹ ಬೆಳ್ಳಿ ಒಡವೆಗಳಾದ ಮುಖ, ಕೈ, ಕಣ್ಣು, ಮೀಸೆ, ತ್ರಿಶೂಲ, ಪಾದರಕ್ಷೆ ಇತ್ಯಾದಿಗಳನ್ನು ದೇವರಿಗೆ ಹರಕೆ ರೂಪದಲ್ಲಿ ನೀಡುವುದು.

೧೨. ಆರೋಗ್ಯ ಸರಿ ಇಲ್ಲದ ಕಾರಣ, ಜಾತ್ರೆಗಳಿಗೂ ಭೇಟಿಕೊಡುವುದು.

**ಕೌಟುಂಬಿಕ ಹರಕೆಗಳು :** ಕೌಟುಂಬಿಕ ಹರಕೆಗಳು ಕುಟುಂಬವೊಂದರ ಸಾಮೂಹಿಕ ಕ್ಷೇಮ ಮತ್ತು ಆಗು ಹೋಗುಗಳಿಗೆ ಸಂಬಂಧಿಸಿರುತ್ತವೆ. ಅಂತಹ ಕೆಲವು ಹರಕೆಗಳನ್ನು ಕೆಳಗೆ ಕಾಣಿಸಿದೆ.

೧. ಕುಟುಂಬಕ್ಕೆ ಒಳ್ಳೆಯದಾದರೆ ದೇವಿಗೆ ಕುರಿ ಬಲಿ ಮಾಡಿ, ಹರಕೆಯಾಗಿ ಒಪ್ಪಿಸುತ್ತಾರೆ.

೨. ನ್ಯಾಯ ಪಂಚಾಯಿತಿ ಬಹು ಬೇಗನೆ ತೀರ್ಮಾನವಾದರೆ, ದೇವರಿಗೆ ಹೊಸ ಗುಡಿಯನ್ನು ನಿರ್ಮಾಣ ಮಾಡುವರು.

೩. ಮಕ್ಕಳು ಮತ್ತು ಹಿರಿಯರು ಭೂತ ಪ್ರೇತಗಳಿಗೆ ಹೆದರಿ ಮಂಕಾದರೆ, ತಮ್ಮ ಕುಲದೇವತೆಗಳಿಗೆ ತೆಂಗಿನ ಕಾಯಿ ಒಪ್ಪಿಸುವುದಾಗಿ ಹರಕೆ ಮಾಡಿಕೊಳ್ಳುತ್ತಾರೆ.

೪. ಮದುವೆಯಾದ ಮಡದಿಗೆ ಬಹಳ ಕಾಲದವರೆಗೆ ಮಕ್ಕಳು ಆಗದೇ ಇದ್ದಾಗ, ಮಡದಿಯು ಒಂಬತ್ತು ದಿನಗಳವರೆಗೆ ಉಪವಾಸ ವ್ರತ ಮಾಡಿದರೆ, ವರ್ಷದೊಳಗೆ ಮಕ್ಕಳು ಆಗುತ್ತವೆ

ಎಂಬ ನಂಬಿಕೆಯಿದೆ. ಮಕ್ಕಳಾದರೆ ಹುಟ್ಟಿದ ಮಗುವಿಗೆ ನಿನ್ನ ಹೆಸರಿಡುತ್ತೇನೆ ಎಂದು ಬೇಡಿಕೊಳ್ಳುತ್ತಾರೆ.

೫. ಕುಲದ ಮುಖ್ಯಸ್ಥನು ದೀರ್ಘಕಾಲ ಅನಾರೋಗಕ್ಕೆ ಒಳಗಾದರೆ, ತಮ್ಮ ಕುಲದೇವತೆಗಳಿಗೆ ಕೋಳಿ ಬಲಿಯನ್ನು ನೀಡುವುದಾಗಿ ಹರಕೆ ಮಾಡಿಕೊಳ್ಳುತ್ತಾರೆ.

೬. ಗಂಡ ಹೆಂಡತಿ ಜಗಳದಲ್ಲಿ ಹೆಂಡತಿ ತವರಮನೆಗೆ ಹೋದಾಗ, ಪತಿರಾಯ ಗುಡಾರ ದೇವತೆಗಳಿಗೆ ಕೈಮುಗಿದು ಬೇಡಿಕೊಳ್ಳುತ್ತಾನೆ. ನನ್ನ ಹೆಂಡತಿ ಬಹುಬೇಗನೆ ಬಂದರೆ, ದೀಪದ ಆರತಿ ಬೆಳಗಿಸುತ್ತೇನೆ ಎಂದು ಹರಕೆ ಮಾಡಿಕೊಳ್ಳುವುದು ರೂಢಿಯಲ್ಲಿದೆ.

### ೫ ಬಲಿ ಆಚರಣೆ

ನಾಡಿನ ಗ್ರಾಮದೇವತೆಗಳು ಮತ್ತುಕುಲದೇವತೆಗಳು ಸಮಾಜದ ಸಾಂಸ್ಕೃತಿಕ ಪರಂಪರೆಯ ಪ್ರತೀಕಗಳಾಗಿವೆ. ಜನರು ಭಯ ಮತ್ತು ಭಕ್ತಿಯಿಂದ ದೇವರನ್ನು ಒಲಿಸಿಕೊಳ್ಳಲು ಅನೇಕ ವಿಧಿ ಸಂಪ್ರದಾಯಗಳನ್ನು ಆಚರಿಸುತ್ತಾನೆ. ಮಾನವನಿಗೆ ಏನಾದರೂ ಸಮಸ್ಯೆ ಬಂದರೆ, ದೇವತೆಗಳ ಮುಂದೆ ಹೇಳಿಕೊಳ್ಳುವುದು, ಅದರ ರೂಪವಾಗಿ ಬಲಿಯನ್ನು ಕೊಡುವುದು, ಅಂದರೆ ಒಂದನ್ನು ಕೊಟ್ಟು, ಇನ್ನೊಂದನ್ನು ಪಡೆಯುವುದೇ ಆಗಿದೆ ಎಂದು ಫ್ರೇಜರ್ ಅಭಿಪ್ರಾಯ ಪಡುತ್ತಾರೆ. ಅವರು ಹೇಳುವಂತೆ-

> “From his own sensations he conceives of life as an Indestructible kind of energy. Which when it disapperar in one from must necessanily reapear in another, though in the new from it need not be immediately perceptible by us. in other words he infers that death does not destroy the vital principle not even the concious personality but it merely trans forms both of then into other shopes which are not the less real becouse they commonty elude the evidence of our senses”.[41]

ಅದರಲ್ಲಿ ಬಲಿ ಪೂಜೆಯು ಒಂದು. ಸಿಂಧೋಳ್ಳು ಸಮುದಾಯದಲ್ಲಿಯೂ ಬಲಿಪೂಜೆ ಕಂಡುಬರುತ್ತದೆ. ಬಲಿಯನ್ನು ಹೆಚ್ಚಾಗಿ ತಮ್ಮ ಗುಡಾರ ಕುಲದೇವತೆಗಳಿಗೆ ಮಾತ್ರ ಅರ್ಪಿಸುತ್ತಾರೆ. ಇದರಿಂದ ಕುಲದೇವತೆಗಳು ಬಲಿಕೊಟ್ಟಾಗ ತೃಪ್ತಿಯಾಗುತ್ತವೆ ಎಂದು ಭಾವಿಸುತ್ತಾರೆ.

ಬಲಿ ಎಂದರೆ ವಿಧಿ ಪೂರ್ವಕವಾಗಿ ದೈವಗಳಿಗೆ ಅರ್ಪಿಸುವುದು. ಪ್ರಾಣಿಗಳ ರಕ್ತವನ್ನು ದೈವಕ್ಕೆ ಸಮರ್ಪಿಸುವುದು. “ಗ್ರಾಮದ ಒಳತಿಗಾಗಿ, ರೋಗ ರುಜಿನಿಗಳಿಂದ ರಕ್ಷಣೆ ಪಡೆಯಲು, ಮಳೆ ಬಾರದಿದ್ದಾಗ, ಊರಿಗೆ ಯಾವುದೋ ಸಂಕಷ್ಟ ಬಂದಾಗ ದೇವತೆಯ ಪ್ರೀತಿಯನ್ನು ಪಡೆಯಲು ಬಲಿಯ ಪ್ರಾಣಿಗಳನ್ನು ಬಲಿಕೊಡಬಹುದೆಂದು”.[೪೨] ಇದರಿಂದ ದೈವಗಳನ್ನು ತೃಪ್ತಿಗೊಳಿಸುವುದು ಮತ್ತು ಒಲಿಸಿಕೊಳ್ಳಲು ಬಲಿಕೊಡುವುದರ ಮೂಲಕ ಪ್ರಯತ್ನಿಸುತ್ತಾರೆ. ಸಿಂಧೋಳ್ಳು ಸಮುದಾಯದ ಜನರು ಬಲಿ ನೀಡುವ ಆಚರಣೆ ತುಂಬಾ ಸರಳವಾದುದು. ಅವರು ಕುಲದೇವತೆಗೆ ಕುರಿ, ಕೋಳಿ, ಆಡು ಮಾತ್ರ ಬಲಿಕೊಡುತ್ತಾರೆ. ಕೋಣ ಕೊಡುವ ಪದ್ಧತಿ ಇಲ್ಲ. ಕುರಿ ಬಲಿ ಕೊಡುವಾಗ ಗುಡಾರದ ಮುಂದೆ ನೆಲ

ಸಾರಿಸಿರುವ ಅಂಗಳದಲ್ಲಿ ತಂದು ಕಟ್ಟಿರುತ್ತಾರೆ. ಕುರಿ ಕೊರಳಿಗೆ ಬೇವಿನ ಸೊಪ್ಪು ಹಾರ ಹಾಕಿರುತ್ತಾರೆ. ಮಹಿಳೆಯು ಬುರ್ರ ಬುರ್ರ ವಾದ್ಯವನ್ನು ತೀವ್ರವಾಗಿ ಬಾರಿಸಿಕೊಳ್ಳುತ್ತಾ ಗುಡಾರದ ಮುಂದೆ ಬರುತ್ತಾಳೆ. ಅದರಲ್ಲಿ ಕುರಿ ಕಡಿಯುವ ವ್ಯಕ್ತಿ ಇರುತ್ತಾನೆ. ಕುಲದ ಮುಖ್ಯಸ್ಥನು ಗುಡಾರ ದೇವತೆಯ ಎದುರು ನಿಲ್ಲಿಸಿ, ಕುರಿಯ ಮುಖಕ್ಕೆ ಅರಿಶಿಣ ಹಚ್ಚಿ, ನೀರು ಚಿಮ್ಮುತ್ತಾನೆ. ನಂತರ ಕುಲದ ಮುಖ್ಯಸ್ಥ ಪೂಜೆ ಮಾಡಿದ ಬಳಿಕ ಕುರಿ ಕಡಿಯುವುದಕ್ಕೆ ಅಪ್ಪಣೆ ಮಾಡುತ್ತಾನೆ. ಅಂತಹ ಸಂದರ್ಭದಲ್ಲಿ ಪೂಜಾರಿ ಕುರಿಯನ್ನು ಕಡಿಯುತ್ತಾನೆ. ರುಂಡ ಬೇರ್ಪಡಿಸಿ ನಂತರ ರುಂಡದ ಬಾಯಿಗೆ ಬಲಗಾಲನ್ನು ಕಡಿದು, ಬಾಯಿಯಲ್ಲಿ ಇಡುವರು. ಬಂದಿರುವ ರಕ್ತದಿಂದ ಗುಡಾರ ದೇವತೆಗಳಿಗೆ ಚಿಮ್ಮುಕಿಸುತ್ತಾನೆ. ಈ ರಕ್ತ ಸಮರ್ಪಣೆ ಮಾಡುವುದರಿಂದ ನಮ್ಮ ಸಮುದಾಯಗಳಿಗೆ ಕೇಡುಂಟಾಗುವುದಿಲ್ಲವೆಂದು ಹೇಳುತ್ತಾರೆ. ಹೀಗೆ ಭಿಕ್ಷಾರ್ಥಿ ಸಿಂಧೋಳ್ಳುರು ತಮ್ಮ ಹಬ್ಬ ಮತ್ತು ಜಾತ್ರೆಗಳ ಸಮಯದಲ್ಲಿ ಬಲಿಕೊಡುವ ಸಂಪ್ರದಾಯಗಳನ್ನು ಆಚರಣೆ ಮಾಡಿಕೊಂಡು ಬರುತ್ತಿರುವುದನ್ನು ಕಾಣಬಹುದಾಗಿದೆ.

### ಅಡಿ ಟಿಪ್ಪಣಿಗಳು

೧. Devi Prasad Chattopadhyaya L., Kayatha, P. 266

೨. ಸಿದ್ಧಲಿಂಗಯ್ಯ., ಗ್ರಾಮದೇವತೆಯ ಪರಿಕಲ್ಪನೆಯನ್ನು, ದಲಿತ ಚಿಂತನೆ (ಸಂ) ಡಾ. ಮೊಗ್ಗಳ್ಳಿ ಗಣೇಶ್, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೯೨

೩. ವಿರೂಪಾಕ್ಷಿ ಪೂಜಾರಹಳ್ಳಿ., ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೩೦

೪. ವಕ್ತೃ: ಸಿಂಗಾರೆಪ್ಪ (೬೦), ಗುಡಾರನಗರ, ಶ್ರೀಧರಗಡ್ಡೆ, ಬಳ್ಳಾರಿ ಜಿಲ್ಲೆ

೫. ಅವರೇ

೬. ವಕ್ತೃ: ರಾವುಲ್ ನಾಗಪ್ಪ (೪೦), ಸಿಂಧೋಳ್ಳು ಆಶ್ರಯ ಕಾಲೋನಿ ಕಂಪ್ಲಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.

೭. ವಕ್ತೃ: ದಿ. ವೆಂಕಟಪ್ಪ (೬೦), ದರ್ಗಾಹತ್ತಿರ, ಕೂಡ್ಲಿಗಿ ತಾ. ಬಳ್ಳಾರಿ ಜಿಲ್ಲೆ.

೮. ವಕ್ತೃ: ಡಿ. ನಾಗಪ್ಪ (೪೦), ಸಿಂಧೋಳ್ಳು ಆಶ್ರಯ ಕಾಲೋನಿ ಎಂ.ಡಿ.ಕ್ಯಾಂಪ್ ಕಂಪ್ಲಿ, ಹೊಸಪೇಟೆ ತಾ. ಬಳ್ಳಾರಿ ಜಿಲ್ಲೆ.

೯. ಅವರೇ

೧೦. ವಕ್ತೃ: ಬೀಚಪ್ಪ (೫೫), ತಂದೆ ಸಣ್ಣ ಪಟ್ಟೆಪ್ಪ, ಬಸವನಗರ ಗುಲ್ಬರ್ಗಾ, ಸಂದರ್ಶನ ದಿನಾಂಕ:೦೫.೦೫.೨೦೦೪

೧೧. ವಕ್ತೃ: ಅಡಿವೆಮ್ಮ ಗಂಡ ಬೀಚಪ್ಪ (೫೦), ಬಸವನಗರ ಗುಲ್ಬರ್ಗಾ, ಸಂದರ್ಶನ ದಿನಾಂಕ: ೦೫.೦೫.೨೦೦೪

೧೨. ಅವರೇ

೧೩. ಅವರೇ

೧೪. ವಕ್ತೃ: ಬುಡೆಪ್ಪ ತಂದೆ ಮಾರೆಪ್ಪ (೪೯), ಆತ್ಮಾನಂದನಗರ ಸುರೇಬಾನು ರಾಮದುರ್ಗ ತಾ. ಬೆಳಗಾವಿ ಸಂದರ್ಶನ ದಿನಾಂಕ: ೦೫.೦೫.೨೦೦೪

೧೫. ಅವರೇ

೧೬. ವಕ್ತೃ: ಕಾಟೈಪ್ಪ ಗಂಡ ಬುಡೆಪ್ಪ (೪೦), ಆತ್ಮಾನಂದನಗರ ಸುರೇಬಾನು ರಾಮದುರ್ಗ ತಾ. ಬೆಳಗಾವಿ ಸಂದರ್ಶನ ದಿನಾಂಕ: ೦೫.೦೫.೨೦೦೪

೧೭. ಅವರೇ

೧೮. ವಕ್ತೃ: ಪೋಕ್ಷಮ್ಮ ಗಂಡ ದೊಡ್ಡ ದಸ್ತಪ್ಪ (೫೦), ಎಲ್.ಬಿ.ಸಿ.ನಗರ ಚಂದ್ರಬಂಡಿ ರಸ್ತೆ, ರಾಯಚೂರು, ಸಂದರ್ಶನ ದಿನಾಂಕ: ೨೨.೧೧.೨೦೦೩

೧೯. ಅವರೇ

೨೦. ಹಲ್ಲೂರು ಶ್ರೀನಿವಾಸ ಜೋಯಿಸರ., ಸಂಶೋಧನಾ ಲೇಖನಗಳು, ಪು. ೩೭೦

೨೧. ವಕ್ತೃ: ಸಿಂಗಾರೆಪ್ಪ (೬೦), ಗುಡಾರನಗರ, ಶ್ರೀಧರಗಡ್ಡೆ, ಬಳ್ಳಾರಿ ಜಿಲ್ಲೆ, ಸಂದರ್ಶನ ದಿನಾಂಕ:

೨೨. ಮಹಾದೇವ ಸಿ., ಬಳ್ಳಾರಿ ಜಿಲ್ಲೆಯ ಂರದ ವಾಸ್ತು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ. ಪು. ೩೮

೨೩. ಲೋಕರಾಜ್ ಡಿ., ಬಳ್ಳಾರಿ ಜಿಲ್ಲೆಯ ದು ರುಗ ಮುರುಗಿಯರು : ಒಂದು ಸಮಾಜಶಾಸ್ತ್ರೀಯ ಅಧ್ಯಯನ, ಎಂ.ಫಿಲ್ ಅಪ್ರಕಟಿತ ಕಿರುಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೮

೨೪. ವಕ್ತೃ: ಶಂಕರಪ್ಪ (೪೦), ದರ್ಗಾಹತ್ತಿರ, ಕೂಡ್ಲಿಗಿ ತಾ. ಬಳ್ಳಾರಿ ಜಿಲ್ಲೆ.

೨೫. ಕರ್ನಾಟಕ ಬುಡಕಟ್ಟುಗಳು ಇದರಲ್ಲಿ 'ದುರುಗ ಮುರುಗಿ' ಲೇಖನ ಆಯ್ಕೆ ಮಾಡಿಕೊಳ್ಳಲಾಗಿದೆ, ಡಾ.ಕೆ.ಆರ್. ದುರ್ಗಾದಾಸ, Vol,2, (ಸಂ) ಲಕ್ಕಪ್ಪಗೌಡರು, ಪು. ೪೪೮

೨೬. ಕೃಷ್ಣಮೂರ್ತಿ., ಒಡಿಗ ಬುಡಕಟ್ಟು ಸಮುದಾಯ ಒಂದು ಅಧ್ಯಯನ, ಪಿಎಚ್.ಡಿ. ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೧೧೮

೨೭. ಮೈತ್ರಿ ಕೆ.ಎಂ., (ಲೇ) ಗಿರಿಜನ ಸಿರಿ, ಅಭಿನಂದನ ಸಂಪುಟ: ವಿಶ್ವಜನಾಂಗಗಳು ಮತ್ತು ಭಾರತ ಕರ್ನಾಟಕ ಬುಡಕಟ್ಟುಗಳ, ಖಂಡೋಬಾ ಪಿ.ಕೆ., ಅಭಿನಂದನ ಸಮಿತಿ, ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ಪು. ೨೨೧

೨೮. ಬೋರಲಿಂಗಯ್ಯ ಹಿ.ಚಿ., (ಲೇ) ಗಿರಿಜನ ಸಿರಿ, ಅಭಿನಂದನ ಸಂಪುಟ: ಅರಣ್ಯದೊಳಗಿನ ಬುಡಕಟ್ಟುಗಳ ಒಂದು ವಿವೇಚನೆ, ಖಂಡೋಬಾ ಪಿ.ಕೆ., ಅಭಿನಂದನ ಸಮಿತಿ, ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ಪು. ೨೩೫

೨೯. ದೇ. ಜವರೇಗೌಡ, ಜಾನಪದ ಅಧ್ಯಯನ, ಡಿ.ವಿ.ಕೆ.ಮೂರ್ತಿ, ಕೃಷ್ಣಮೂರ್ತಿಪುರಂ, ೧೯೭೭, ಮೈಸೂರು

೩೦. ವಕ್ತೃ: ಗಾಳೆಪ್ಪ (೪೦), ಗುಡಾರನಗರ ಶ್ರೀಧರಗಡ್ಡೆ, ಬಳ್ಳಾರಿ ಜಿಲ್ಲೆ

೩೧. ವಕ್ತೃ: ಸಿಂಗಾರೆಪ್ಪ (೬೦), ಗುಡಾರನಗರ, ಶ್ರೀಧರಗಡ್ಡೆ, ಬಳ್ಳಾರಿ ಜಿಲ್ಲೆ

೩೨. ಕಾಳೇಗೌಡನಾಗವಾರ, ಜನಪದ ಸಾಹಿತ್ಯ, ಯುಗಾದಿ ಪ್ರಕಾಶನ, ಬೆಂಗಳೂರು, ಪು.೯೭-೯೮.

೩೩. ಚೆನ್ನಣ್ಣವಾಲೀಕಾರ, ಸಮಗ್ರ ಜಾನಪದ ಸಂಪ್ರಬಂಧ ಸಂಪುಟ, ದಲಿತ ಬಂಡಾಯ ಸಾಹಿತ್ಯ ಪ್ರಕಾಶನ ಕೇಂದ್ರ, ಬಡೇಪೂರ ಕಾಲೋನಿ, ಗುಲ್ಬರ್ಗಾ

೩೪. ದಾಸೇಗೌಡರು ಜಿ.ವಿ., ಗ್ರಾಮ ಸಂಸ್ಕೃತಿಯ ಮಾಲೆ-೬, ಮಂಡ್ಯ ಜಿಲ್ಲೆಯ ಜಾತ್ರೆಗಳು ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು, ಪು. ೨

೩೫. ಅದೇ

೩೬. ಜವರೇಗೌಡ ದೇ., ಜಾತ್ರೆಗಳು, ಜಾನಪದ ವಾಹಿನಿ, ಡಿ.ವಿ.ಕೆ. ಕೃಷ್ಣಮೂರ್ತಿ, ಕೃಷ್ಣಮೂರ್ತಿಪುರಂ, ಮೈಸೂರು

೩೭. ಚೆಲುವರಾಜು, ಹಂಪಿಯ ಸ್ಮಾರಕಗಳಲಿ ಜಾಪದೀಯ ಅಂಶಗಳು, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಪು.೧

೩೮. ಗೋವಿಂದ, ಬಳ್ಳಾರಿ ಜಿಲ್ಲಾ ಜನಪದ ದೈವಗಳು, ಪಿಎಚ್.ಡಿ, ಸಂಪ್ರಬಂಧ ಅಪ್ರಕಟಿತ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ ಪು. ೨೧೩-೨೧೪

೩೯. ವಕ್ತೃ: ದಿ. ವೆಂಕಟಪ್ಪ, ದರ್ಗಾಹತ್ತಿರ, ಕೂಡ್ಲಿಗಿ ತಾ. ಬಳ್ಳಾರಿ ಜಿಲ್ಲೆ

೪೦. ಹಿರೇಮಠ ಎಸ್.ಎಸ್., ಕರ್ನಾಟಕ ದಲಿತ ಸಂಸ್ಕೃತಿ ಭಾಗ-೨, ಜಾತ್ರೆಗಳು, ೧೯೯೩, ಸಮತಾ ಪ್ರಕಾಶನ, ಹೊಸಪೇಟೆ, ಪು. ೧೧೧

೪೧. Frazer, Sir James G., 1911-15, The Golden Bough, Vol-8, The Sprits of the corn and the wild, P. 261

೪೨. ಕಲವೀರ ಮನ್ನಾಚಾರ, ಮಾತೃದೇವತಾರಾಧನೆ ಉಗಮ ಮತ್ತು ವಿಕಾಸ, ಪಿಎಚ್.ಡಿ. ಅಪ್ರಕಟಿತ ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು. ೭೮

ಅಧ್ಯಾಯ - ೬

# ಭಾಷೆ, ಸಾಹಿತ್ಯ ಮತ್ತು ಕಲೆ

೧. ಭಾಷೆ

೨. ಸಾಹಿತ್ಯ

೩. ಕಲೆ



# ಭಾಷೆ, ಸಾಹಿತ್ಯ ಮತ್ತು ಕಲೆ

ಸಿಂಧೋಳ್ಳು ಸಮುದಾಯವು ಭಾಷೆ, ಸಾಹಿತ್ಯ ಮತ್ತು ಕಲೆಗಳಲ್ಲಿ ತನ್ನದೇ ಆದ ವಿಶೇಷತೆಯನ್ನು ಪಡೆದಿದೆ. ಸಿಂಧೋಳ್ಳುರ ಮಾತೃ ಭಾಷೆ ತೆಲುಗು ಭಾಷೆಯಾಗಿದ್ದು, ಪ್ರಾದೇಶಿಕವಾಗಿ ಇವರ ಭಾಷೆಯಲ್ಲಿ ಕೆಲವು ಭಿನ್ನತೆಗಳಿವೆ. ಈ ಭಿನ್ನತೆ ವ್ಯವಹಾರಿಕವಾಗಿ ಮಾತನಾಡುವಾಗ ಮಾತ್ರವಲ್ಲದೆ ಅವರ ಸಾಹಿತ್ಯದಲ್ಲಿಯೂ ಕಾಣಬರುತ್ತದೆ. ಈ ಹಿನ್ನಲೆಯಲ್ಲಿ ಹಾಡುಗಳು, ಕಥೆಗಳು, ಗಾದೆಗಳು, ಒಗಟುಗಳು, ಒಡಪುಗಳು, ನುಡಿಗಟ್ಟುಗಳು ಮತ್ತು ದೇವರ ಪದಗಳನ್ನು ವಿವರಿಸಲಾಗಿದೆ. ಕಲೆಗಳಲ್ಲಿ ಕ್ರೀಡೆಗಳು, ಕಸೂತಿ, ವಾದ್ಯಗಳು ವಿವರವಾಗಿ ಚರ್ಚಿಸಲಾಗಿದೆ. ಪ್ರಸ್ತುತ ಅಧ್ಯಾಯದಲ್ಲಿ ಭಾಷೆ, ಸಾಹಿತ್ಯ ಮತ್ತು ಕಲೆಗಳನ್ನು ಕುರಿತು ಮೂರು ವಿಭಾಗಗಳನ್ನಾಗಿ ಮಾಡಲಾಗಿದೆ. ಅವುಗಳಲ್ಲಿ ಅ) ಭಾಷೆ ಆ) ಸಾಹಿತ್ಯ ಇ) ಕಲೆಗಳು ಎಂದು ವರ್ಗೀಕರಿಸಿ ಸಿಂಧೋಳ್ಳುರಿಗೆ ಸಂಬಂಧಿಸಿದ ಭಾಷೆ, ಸಾಹಿತ್ಯ ಮತ್ತು ಕಲೆಗಳ ಕುರಿತಂತೆ ಸಮಗ್ರವಾದ ವಿವರಣೆ ಮತ್ತು ಚರ್ಚೆಗಳನ್ನು ಪ್ರಸ್ತುತ ಅಧ್ಯಾಯದಲ್ಲಿ ಕೂಲಂಕುಷವಾಗಿ ವಿವರಿಸಲಾಗಿದೆ.

ಅ. ಭಾಷೆ

ಆ. ಸಾಹಿತ್ಯ

ಇ. ಕಲೆಗಳು

## ಅ. ಭಾಷೆ

ಭಾಷೆ ಒಂದು ಸಾಮಾಜಿಕ ಪ್ರಕ್ರಿಯೆ. ಸಾಮಾಜಿಕ ಶ್ರೇಣಿಗಳಲ್ಲಿ ಕಾಲ, ದೇಶ, ಪರಿಸರಕ್ಕನುಗುಣವಾಗಿ ಅಭಿವ್ಯಕ್ತಿ ಮಾಧ್ಯಮವಾಗಿ ನಿಲ್ಲಬಲ್ಲ ಸಮರ್ಥ ಸಾಧನ. ಜಗತ್ತಿನಾದ್ಯಂತ ಭಾಷೆ ಒಂದೇ ಬಗೆಯಾಗಿರದೇ ಆಯಾ ಭೌಗೋಳಿಕ ಪರಿಸರಕ್ಕೆ ತಕ್ಕಂತೆ ಭಿನ್ನತೆಯನ್ನು ಪಡೆದುಕೊಂಡಿದೆ. ಸಮಾಜದಲ್ಲಿ ಮಾನವನ ವೈಯಕ್ತಿಕ ಸಾಧನೆಗಳಲ್ಲಿ ಭಾಷೆ ವಿಶಿಷ್ಟ ಹಾಗೂ ಗುರುತರವಾದುದು. ಮನುಷ್ಯನ ದೈನಂದಿನ ವ್ಯವಹಾರದಲ್ಲೂ ಭಾಷೆಯ ಪಾತ್ರ ಮಹತ್ವದಾಗಿದೆ. ಭಾಷೆ ಉಸಿರಿನಷ್ಟೇ ಸಹಜ ಹಾಗೂ ಅನಿವಾರ್ಯ. ಅದು ವ್ಯಕ್ತಿಯ ಭೌತಿಕ ಚಟುವಟಿಕೆ, ಅನಿಸಿಕೆ, ಅಭಿಪ್ರಾಯ, ಅನುಭವ, ಭಾವನೆ ಪ್ರತಿಕ್ರಿಯೆಗಳನ್ನು ಆಯಾ ಭಾಷೆಯಲ್ಲಿ ರಚಿಸುವ ಮಾಧ್ಯಮವಾಗಿದೆ. ವ್ಯಕ್ತಿಯ ಸಾಮಾಜಿಕ, ಆರ್ಥಿಕ, ಧಾರ್ಮಿಕ, ಸಾಂಸ್ಕೃತಿಕ, ಔದ್ಯೋಗಿಕತೆ ಭಾಷೆಗಳನ್ನು ಗುರುತಿಸುವುದು ಆತನ ಮಾತಿನಿಂದಲೇ ಪದಪುಂಜಗಳು ಮತ್ತು ಅವುಗಳ ಉಚ್ಚಾರಣೆಯ ರೂಪಗಳ ಮೂಲಕ ಸಮಾಜದ ಬೆಳವಣಿಗೆಯಲ್ಲಿ ಅದ್ವಿತೀಯ ಪಾತ್ರ ಪಡೆದುಕೊಳ್ಳುವುದು.

ಭಾಷೆ ಸಂಸ್ಕೃತಿಯ ಅಂಗವಲ್ಲದೆ, ಸಮಾಜದ ಎಲ್ಲಾ ಜೀವಂತ ನೈಜ ಚಟುವಟಿಕೆಯ ಮೂಲ. ಸಮಾಜದಿಂದ ವ್ಯಕ್ತಿಯನ್ನು, ವ್ಯಕ್ತಿಯಿಂದ ಭಾಷೆಯನ್ನು, ಬೇರ್ಪಡಿಸಲಾಗದು. ಆಯಾ ಸಮುದಾಯಗಳ ಸಂಸ್ಕೃತಿ ಭಾಷೆಯೊಂದಿಗೆ ಬೆರೆತು ಅಲ್ಲಿನ ಭಾಷೆಯನ್ನು ಬೆಳಸುವಂತಿರುತ್ತದೆ. ವ್ಯಕ್ತಿಯ ಭಾವನೆಗಳನ್ನು ಸಮಾಜಿಕರೊಂದಿಗೆ ಹಂಚಿಕೊಳ್ಳುವುದರ ಜೊತೆಗೆ ಸಮಾಜಿಕ ಹಾಗೂ ಸಾಂಸ್ಕೃತಿಕ ಮೇಲ್ಮೆಯನ್ನು ಸಾಧಿಸುವ ಪ್ರಯತ್ನ ತೀವ್ರವಾಗಿರುವುದು. ಸಮಾಜದ ಬೆಳವಣಿಗೆಗೆ ಹಾಗೂ ಬದಲಾವಣೆಗೆ ಭಾಷೆ ಅನಿವಾರ್ಯ. ಅಲ್ಲದೆ ಅದು ಸಮಾಜದ ಎಲ್ಲಾ ಅಂಶಗಳೊಡನೆ ಸಮಪ್ರಮಾಣದಲ್ಲಿ ಮಿಳಿತಗೊಂಡು ಸಹಜವಾಗಿ ಪೀಳಿಗೆಯಿಂದ ಪೀಳಿಗೆಗೆ ವ್ಯಕ್ತಿಯ ಲೋಕರೂಢಿಗಳು, ನೈತಿಕನಿಯಮಗಳು, ಸಂಪ್ರದಾಯಗಳು ಇತ್ಯಾದಿ ಅಂಶಗಳು ಆಯಾ ಸಮುದಾಯಗಳಲ್ಲಿ ಉಳಸಿಕೊಂಡು ಬಂದಿದೆ. ಆದ್ದರಿಂದ ಭಾಷೆ ಮಾನವನ ಜ್ಞಾನಶಿಸ್ತನ್ನು ಸಂರಕ್ಷಿಸಿಕೊಂಡು ಬಂದಿರುತ್ತದೆಂಬುದನ್ನು ಗಮನಿಸಬಹುದು. ಈ ದೃಷ್ಟಿಯಿಂದ ಭಾಷೆಗೆ ಅತ್ಯಂತ ಮಹತ್ವವಿದೆ.

"ಜಗತ್ತಿನಲ್ಲಿ ಸಮಾಜವಿಲ್ಲದೆ ಭಾಷೆ ಇಲ್ಲ, ಭಾಷೆ ಇಲ್ಲದೆ ಸಮಾಜವಿಲ್ಲ."[7] ಇದರಂತೆ ಜಗತ್ತಿನಾದ್ಯಂತ ಇರುವ ಬುಡಕಟ್ಟು ಸಮುದಾಯಗಳಲ್ಲಿ ಭಾಷೆಯನ್ನು ಗುರುತಿಸಬಹುದು. ಮುಖ್ಯವಾಗಿ ಬುಡಕಟ್ಟು ಸಮುದಾಯಗಳು ಅರಣ್ಯದಲ್ಲಿ ವಾಸಿಸುವುದರಿಂದ ಅವರ ಭಾಷೆಯ ಮೂಲ ಯಥಾವತ್ತಾಗಿ ಕಾಪಾಡಿಕೊಂಡು ಬಂದಿರುತ್ತದೆ. ಇತರೆ ನಾಗರಿಕ ಸಮಾಜದಲ್ಲಿರುವ ಭಾಷೆಯಂತೆ ಎರವಲು, ಸ್ವೀಕರಣ ಮುಂತಾದ ಭಾಷಿಕ ಪ್ರಭಾವಕ್ಕೆ ಒಳಗಾಗಿರುವುದಿಲ್ಲ. ಈ ಕಾರಣದಿಂದಲೇ ಬುಡಕಟ್ಟು ಸಮುದಾಯಗಳು ತಮ್ಮ ಸಂಸ್ಕೃತಿ ಮತ್ತು ಭಾಷೆಯನ್ನು ಇದ್ದ ಹಾಗೆಯೇ ಉಳಿಸಿಕೊಂಡು ಬಂದಿವೆ. ಅನೇಕ ಬುಡಕಟ್ಟು ಸಮುದಾಯಗಳು ಮಾತನಾಡುವ ಭಾಷೆಗೆ ಲಿಪಿಯಿರುವುದಿಲ್ಲ. ಉದಾಹರಣೆಗೆ ಲಂಬಾಣಿ ಭಾಷೆ. ಇದು ಕೇವಲ ಮೌಖಿಕ ವಾಗ್ ರೂಪದಲ್ಲಿರುತ್ತದೆ. ಜೊತೆಗೆ ಯಾವುದೋ ಭಾಷೆಯ ಮೂಲಕ ಲಿಪಿಗೊಳ್ಳುತ್ತಿರುವ ಇವತ್ತಿನ ವಿದ್ಯಾಮಾನವೆನ್ನಬಹುದು.

ಅನಕ್ಷರಸ್ಥರು ಹಾಗೂ ಬುಡಕಟ್ಟು ಸಂಸ್ಕೃತಿಯನ್ನು ಮೈಗೂಡಿಸಿಕೊಂಡಿದ್ದ ಸಿಂಧೋಳ್ಳರು ಗುಡಾರದಲ್ಲಿ ತೆಲುಗು ಭಾಷೆಯನ್ನು ಬಳಸಿದರೆ, ಹೊರಗಡೆ ವ್ಯವಹಾರಿಕವಾಗಿ ಕನ್ನಡವನ್ನು ಮಾತನಾಡುತ್ತಾರೆ. ಅವರಾಡುವ ತೆಲುಗು ಭಾಷೆಯಲ್ಲಿ ಕನ್ನಡ ಪದಗಳು, ಕನ್ನಡ ಭಾಷೆಯಲ್ಲಿ ತೆಲುಗು ಪದಗಳು ಸೇರಿಕೊಂಡಿರುತ್ತವೆ. ಆದ್ದರಿಂದ ಕನ್ನಡ ಮತ್ತು ತೆಲಗು ಮಿಶ್ರಣವಾದ ಅಪಭ್ರಂಶ ಭಾಷೆಗೆ ಅವರದೇ ಆದಂತಹ ಶಬ್ದಾರ್ಥಗಳಿರುತ್ತವೆ. ಈ ಪ್ರಭಾವ ಅವರ ಸಾಹಿತ್ಯದ ಮೇಲೂ ಆಗಿದೆ. ತೆಲುಗು ಸಾಹಿತ್ಯ ಪ್ರಾರಂಭವಾಗುವ ವೇಳೆಗೆ ಕನ್ನಡ ಸಾಹಿತ್ಯದಲ್ಲಿ ಹಲವು ಕೃತಿಗಳ ರಚನೆಯಾಗಿದ್ದವು. ಅಲ್ಲದೇ ಹಲವು ಲಕ್ಷಣ ಗ್ರಂಥಗಳು ರಚನೆಯಾಗಿಗ್ದವು. ಶಬ್ದ ಭಂಡಾರವೂ ಬೆಳೆದಿತ್ತು. ಆದರಿಂದ ಕನ್ನಡ ಪ್ರಭಾವವೇ ತೆಲುಗು ಭಾಷೆಯ ಮೇಲೆ ಲಗಿರುವುದು ಸಹಜವೇ ಆಗಿದೆ.[8] ಹೀಗಾಗಿ ಕನ್ನಡ ಮತ್ತು ಆಂಧ್ರ ಪ್ರದೇಶದ ಜನರ ಸಾಮಾಜಿಕ ಮತ್ತು ಧಾರ್ಮಿಕ ಬಾಂಧವ್ಯಗಳಿಗೆ ಭಾಷೆ ಸಂಕಿರಣವೇ ಕಾರಣವಾಗಿದೆ.

ಈ ಬುಡಕಟ್ಟು ಸಮುದಾಯ ಭಿಕ್ಷಾಟನೆಯಿಂದ ಮಾಡಿದ ಹೆಗ್ಗುರುತುಗಳನ್ನು ಅವರಾಡುವ

'ಭಾಷೆ'ಯ ಮೂಲಕ ಗುರುತಿಸಬಹುದು. ಸಿಂಧೋಳ್ಳುರ ಮಾತೃಭಾಷೆ 'ತೆಲುಗು' ಆಗಿರುತ್ತದೆ. ಇವರ ಸಂಸ್ಕೃತಿ, ಸಂಪ್ರದಾಯ, ನಂಬಿಕೆಗಳು, ಆಚರಣೆ, ಜೀವನ ವಿಧಾನ, ಸಾಮಾಜಿಕ ವ್ಯವಸ್ಥೆ, ಕಲೆ ಸಾಹಿತ್ಯ ಮೊದಲಾದ ವಿಷಯಗಳಲ್ಲಿ ಪರಸ್ಪರ ಬೇರೆ ಬುಡಕಟ್ಟುಗಳೊಂದಿಗಿನ ಸಾಮ್ಯತೆಯನ್ನು ಕಾಣಬಹುದಾಗಿದೆ. ಆದರೆ ಪ್ರಸ್ತುತ ಈ ಬುಡಕಟ್ಟಿನ ಸಂಸ್ಕೃತಿಯ ಮೇಲೆ ಇತರ ಜಾತಿ, ಜನಾಂಗಗಳ ಪ್ರಭಾವದಿಂದ ಅವರಾಡುವ ಭಾಷೆಯ ಮೇಲೂ ಕೂಡ ನಾಗರೀಕತೆ ಮತ್ತು ನಗರೀಕರಣದ ಅಂಶಗಳು ಕಂಡು ಬರುತ್ತವೆ.

ಮೂಲ ತೆಲುಗು ಭಾಷೆಗೆ ಕನ್ನಡ ಪದಗಳು, ಕನ್ನಡ ಭಾಷೆಯಲ್ಲಿ ತೆಲುಗು ಪದಗಳು ಸಂವಾದಿಯಾಗಿವೆಯೆಂದು ಹೇಳಬಹುದು. ಏನೇ ಆಗಲಿ ಸಿಂಧೋಳ್ಳುರು ತೆಲುಗು ಮತ್ತು ಕನ್ನಡ ಭಾಷೆಯ ಅಧ್ಯಯನಕ್ಕೆ ಒಂದು ವಸ್ತುವಾಗಬಲ್ಲದೆಂಬುದು ಗಮನಾರ್ಹ ಸಂಗತಿ. ಕನ್ನಡ ಮತ್ತು ತೆಲುಗು ಮಿಶ್ರಣವಾದ ನಿದರ್ಶನಗಳೇ ಸಂಗ್ರಹಿಸಲಾಗಿದ್ದು. ನಿದರ್ಶನಕ್ಕೆ ಕೆಲವನ್ನು ಇಲ್ಲಿ ಗಮನಿಸಬಹುದು.

**ಸಿಂಧೋಳ್ಳುರ ಬಳಕೆಯ ಶಬ್ಧಗಳು**

**ಮನುಷ್ಯನ ಅಂಗಾಂಗಳು**

| ಸಂಖ್ಯೆ | ಕನ್ನಡ ಭಾಷೆ | ತೆಲುಗು ಭಾಷೆ | ಸಿಂಧೋಳ್ಳು ಭಾಷೆ |
|---|---|---|---|
| ೦೧ | ತಲೆ | ತಲ | ನೆತ್ತಿ |
| ೦೨ | ತಲೆಬುರುಡೆ | ಬುರ್ರ | ತಲಕಾಯಿ |
| ೦೩ | ತುಟಿ | ಪೆದವುಲು | ನೂಲು |
| ೦೪ | ತೊಡೆ | ತೂಡು | ತೂಡಮ |
| ೦೫ | ತೋಳು | ತೋಳು | ರೆಟ್ಟಲು |
| ೦೬ | ದವಡೆ | ದವಲು | ದವಡ |
| ೦೭ | ನಡು | ನಡಮು | ನಡುಮು |
| ೦೮ | ನರ | ನಲು | ನರಲು |
| ೦೯ | ನಾಲಿಗೆ | ನಾಲುಕ | ನಾಲಿಕ |
| ೧೦ | ಬಾಯಿ | ನೋರು | ನೋರು |
| ೧೧ | ಬೆನ್ನು | ವೀಪು | ಹೀಮ |
| ೧೨ | ಬೆರಳು | ವೇಲು | ಹೇಲು |
| ೧೩ | ಭುಜ | ಭುಜಂ | ಭುಜಂ |
| ೧೪ | ಎದೆ | ಚಾತಿ | ಎದಾ |
| ೧೫ | ಕಣ್ಣೀರು | ಕನ್ನೀಳು | ಕಣ್ಣೀರಲು |
| ೧೬ | ಕಣ್ಣು | ಕಳ್ಳು | ಕಂಠಿ |
| ೧೭ | ಕಣ್ಣುಗುಡ್ಡೆ | ಕನ್ನುಗುಡ್ಡ | ಕಣ್ಣುಗುಡ್ಡ |
| ೧೮ | ಕತ್ತಿನ ಶಿರ | ಶಿರಮು | ಮುಖಮ |
| ೧೯ | ಕರಳು | ಪೇಗಲು | ಬೇಗಲು |

| | | | |
|---|---|---|---|
| ೨೦ | ಕಾಲು | ಕಾಳ್ಳು | ಕಾಲು |
| ೨೧ | ಕಿವಿ | ಚೆವಿ | ಸೌವಲು |
| ೨೨ | ಕುಂಡಿ | ಗುದ್ದ | ಗುದ್ದ |
| ೨೩ | ಕೂದಲು | ವೆಂಟ್ರಕಲು | ವೆಂಟಾಕ್ರಾ |
| ೨೪ | ಕನ್ನೆ | ಚಂಪ | ಗಲ್ಲಮು |
| ೨೫ | ಚರ್ಮ | ತೋಲು | ಚರ್ಮಮು |
| ೨೬ | ಮಂಡಿ | ಮೊಕಾಲು | ಮೊಣಕಾಲುಮು |
| ೨೭ | ಮೀಸೆ | ಮೀಸಾಲು | ಮೀಸೆಂ |
| ೨೮ | ಮೂಗು | ಮೂಕ್ಕು | ಮುಕ್ಕು |
| ೨೯ | ಮೆದಳು | ಮೆದುಡು | ಮೆದುಡು |
| ೩೦ | ರಕ್ತ | ರಕ್ತಂ | ರಕ್ತಂ |
| ೩೧ | ರೆಪ್ಪೆ | ರೆಪ್ಪಲು | ರೆಪ್ಪ |
| ೩೨ | ಹಣೆ | ನುದುಟ | ಪೊನ |
| ೩೩ | ಹಲ್ಲು | ಪಳ್ಳು | ಪಳ್ಳ |
| ೩೪ | ಹೃದಯ | ಹೃದಯಂ | ಹೃದಯಂ |

ಸಿಂಧೋಳ್ಳುರು ಬಳಸುವ ಮನುಷ್ಯನ ಅಂಗಾಂಗಗಳಲ್ಲಿ ತೆಲುಗು ಮತ್ತು ಕನ್ನಡ ಪದಗಳೆರಡೂ ಅಡಕಗೊಂಡಿದೆ. ಕೆಲವು ಪದಗಳು ತಾವು ವಾಸಿಸುವ ಪರಿಸರದ ಪ್ರಭಾವದಿಂದ ಸ್ಥಿತ್ಯಂತರಗೊಂಡು ಎರಡೂ ಭಾಷೆಯ ಮಿಶ್ರಣ ಹೊಂದಿರುವುದನ್ನು ಮೇಲಿನ ಉದಾಹರಣೆಗಳಲ್ಲಿ ಗಮನಿಸಬಹುದಾಗಿದೆ.

**ಸಂಬಂಧಿಕರಿಗೆ ಕರೆಯುವ ಶಬ್ದಗಳು**

| ಸಂಖ್ಯೆ | ಕನ್ನಡ ಭಾಷೆ | ತೆಲುಗು ಭಾಷೆ | ಸಿಂಧೋಳ್ಳು ಭಾಷೆ |
|---|---|---|---|
| ೦೧ | ಅಪ್ಪ | ನಾಯನ | ನಾನ್ನ |
| ೦೨ | ಅಮ್ಮ | ಅಮ್ಮ | ಅಮ್ಮ |
| ೦೩ | ಅಜ್ಜ | ತಾತಯ್ಯ | ತಾತಯ್ಯ |
| ೦೪ | ಅಜ್ಜಿ | ನಾನಮ್ಮ | ಬಾಮ್ಮ |
| ೦೫ | ಅಣ್ಣ | ಅನಯ್ಯ | ಅನ್ನಯ್ಯ |
| ೦೬ | ಅತ್ತಿಗೆ | ವದಿನ | ವದಿನ |
| ೦೭ | ಅತ್ತೆ | ಅತ್ತಯ್ಯ | ಅತ್ತೆಯ್ಯ |
| ೦೮ | ತಂಗಿ | ಚೆಲ್ಲಿ | ಚಲ್ಲಿ |
| ೦೯ | ತಮ್ಮ | ತಮ್ಮುಡು | ತಮ್ಮುಡು |
| ೧೦ | ಗಂಡ | ಮೊಗುಡು/ಭರ್ತ | ಮುಗಡು |
| ೧೧ | ಮಗು | ಬಿಡ್ಡಾ | ಪಿಲ್ಲಳು |
| ೧೨ | ಮಾವ | ಮಾವಯ್ಯ | ಮಾವಯ್ಯ |

| | | | |
|---|---|---|---|
| ೧೩ | ಹುಡುಗ | ಅಬ್ಬಾಯಿ | ಪಿಲುಗಾಡು |
| ೧೪ | ಹುಡುಗಿ | ಅಮ್ಮಾಯಿ | ಪಿಲ್ಲಾ |
| ೧೫ | ಹೆಂಡತಿ | ಬಾರ್ಯೆ | ಪಿಳ್ಳಾಂ |

ಆಹಾರ ಮತ್ತು ಪಾತ್ರೆ ಪರಿಕರಗಳಿಗೆ ಬಳಸುವ ಪದಗಳು

| ಸಂಖ್ಯೆ | ಕನ್ನಡ ಭಾಷೆ | ತೆಲುಗು ಭಾಷೆ | ಸಿಂಧೋಳ್ಳ ಭಾಷೆ |
|---|---|---|---|
| ೦೧ | ಅನ್ನ | ಅನ್ನಮು | ಭೂವ |
| ೦೨ | ಸಾಂಬರು | ಚಾರು | ಸಾರು |
| ೦೩ | ರೊಟ್ಟಿ | ರೊಟ್ಟೆ | ರೊಟ್ಟ |
| ೦೪ | ಮುದ್ದೆ | ಮುದ್ದ | ಮುದ್ದೆ |
| ೦೫ | ಉಗ್ಗಿ | ಪಾಯಸಮು | ಪಸಿಮ್ |
| ೦೬ | ಹಾಲು | ಪಾಲು | ಪಾಲು |
| ೦೭ | ಉಪ್ಪು | ಉಪ್ಪು | ಉಪ್ಪು |
| ೦೮ | ಗೋಧಿ | ಗೋಧಮು | ಗೋದಂ |
| ೦೯ | ತುಪ್ಪ | ನೇಯಿ | ನ್ಯೆ |
| ೧೦ | ಬಕೆಟು | ಬಕೆಟು | ಬಕೆಟು |
| ೧೧ | ಬಟ್ಟಲು | ಗಿನ್ನ | ಗಿನ್ನೆ |
| ೧೨ | ಮಡಿಕೆ | ಕುಂಡ | ಮಡಿಕಾ |
| ೧೩ | ಮಜ್ಜಿಗೆ | ಚಲ್ಲ | ಮಖ |
| ೧೪ | ಮಾಂಸ | ಮಾಂಸಮು | ನಂಜುರ |
| ೧೫ | ಮೊಸರು | ಪೆರುಗು | ಪೆರುಗು |
| ೧೬ | ರಾಗಿ | ರಾಗಲು | ರಾಗಲು |
| ೧೭ | ಲೋಟ | ಲೋಟಲು | ಲೋಟ |
| ೧೮ | ಸೌಟು | ಗರಿಟ | ಗಂಟ್ಯ |
| ೧೯ | ಸೌದೆ | ಕಟ್ಟೆಲು | ಕಟ್ಟೆಲು |
| ೨೦ | ಮೆಣಸಿನಕಾಯಿ | ವಿರುಪಕಾಯಿ | ಮೆಕ್ಕಕಾಯಿಲು |
| ೨೧ | ಈರುಳ್ಳಿ | ಉಲ್ಲಿಪಾಯ | ಹುಳ್ಳಿಪಾಯಲು |
| ೨೨ | ಬದನೆಕಾಯಿ | ವಂಕಾಯ | ವಂಕಾಯಿ |
| ೨೩ | ಟೊಮೊಟೋ | ಟೊಮೋಟ | ಟಮೊಟೋಪಂಡಲು |
| ೨೪ | ಸೊಪ್ಪು | ಆಕುಕೂರ | ಪುಂಡಿಕಾ |

ಉಡುಪುಗಳು

| ಸಂಖ್ಯೆ | ಕನ್ನಡ ಭಾಷೆ | ತೆಲುಗು ಭಾಷೆ | ಸಿಂಧೋಳ್ಳು ಭಾಷೆ |
|---|---|---|---|
| ೦೧ | ಕಚ್ಚೆ | ಗೋಚಿ | ಕಚ್ಚಲು |
| ೦೨ | ಅಂಗಿ | ಚೊಕ್ಕ | ಚೊಕ್ಕ |
| ೦೩ | ಸೀರೆ | ಚೀರಾ | ಸೀರೆಂ |
| ೦೪ | ಕುಪ್ಪಸ | ರವಿಕ | ರವಿಕೆ |
| ೦೫ | ಚಡ್ಡಿ | ನಿಕ್ಕರು | ನಿಕ್ಕರು |
| ೦೬ | ಪಂಚೆ | ದೋತಿ | ಲುಂಗಿ |

ಭಿಕ್ಷೆಯ ಸಂಬಂಧಿಸಿದ ಪದಗಳು

| ಸಂಖ್ಯೆ | ಕನ್ನಡ ಭಾಷೆ | ತೆಲುಗು ಭಾಷೆ | ಸಿಂಧೋಳ್ಳು ಭಾಷೆ |
|---|---|---|---|
| ೦೧ | ದೇವರು | ದೈವಮು | ದೇವುಡು |
| ೦೨ | ಬುಟ್ಟಿ | ಗಂಪ | ದೇವರಗಂಪ |
| ೦೩ | ಚಾಟಿ | ಚರ್ನಕೋಲು | ಈರೋಗಲ್ |
| ೦೪ | ಪೆಟ್ಟಿಗೆ | ಪೆಟ್ಟೆ | ರಥಂ |
| ೦೫ | ಭಂಡಾರ | ಪಸುಪು | ಪಸಲು |
| ೦೬ | ಬುರ‍್ರ ಬುರ‍್ರವಾದ್ಯ | ನಾಮು | ಈರಂ |
| ೦೭ | ಬಳೆ | ಗಾಜುಲು | ಗಾಜು |
| ೦೮ | ಗಂಟೆ | ಗಂಟ | ಗಂಟಂ |
| ೦೯ | ಭಿಕ್ಷೆ | ತಿರುಪೆಮು | ಹಡಕಲು |

ಪ್ರಾಣಿ ಮತ್ತು ಪಕ್ಷಿ

| ಸಂಖ್ಯೆ | ಕನ್ನಡ ಭಾಷೆ | ತೆಲುಗು ಭಾಷೆ | ಸಿಂಧೋಳ್ಳು ಭಾಷೆ |
|---|---|---|---|
| ೦೧ | ಕೋಳಿ | ಕೋಡಿ | ಕೋಡಿ |
| ೦೨ | ಕುರಿ | ಗೋರ್ಯ | ಗೋರ್ಯ |
| ೦೩ | ಹಂದಿ | ಪಂದಿ | ಪಟ್ಟಲು |
| ೦೪ | ಹುಂಜ | ಕೋಡಿಪುಂಜ | ಕೋಡಿಪುಂಬ |
| ೦೫ | ಮೇಕೆ | ಮೆಕಾ | ಮೇಕಾಲು |
| ೦೬ | ಖವಜ | ಕವಜ | ಕವಜಂ |
| ೦೭ | ಅಡವಿಬೆಕ್ಕು | ಅಡವಿ ಪಿಲ್ಲಿ | ಜಗಾಸಿಮ್ |
| ೦೮ | ಆಮೆ | ತಾಬೇಲು | ತಾವೆಲೋ |
| ೦೯ | ನವಿಲು | ನಮಿಲು | ನವಿಲು |
| ೧೦ | ಏಡಿ | ಏಡಿಕಾಯಿಲು | ಏಡಿಕಾಯಿಲು |

| | | | |
|---|---|---|---|
| ೧೧ | ಗುಬ್ಬಿ | ಗುವ್ವ | ಉರುಲುಗವ್ವ |
| ೧೨ | ಪಾರಿವಾಳ | ಪಾವುರಮು | ಪಾಡಿವಾಳ |
| ೧೩ | ಬಾತುಕೋಳಿ | ಬಾತುಕೋಡಿ | ಬಾತಕ್ಕೊ |
| ೧೪ | ಕೊಕ್ಕರೆ | ಕೊಂಗ | ತಲೆಕೊಂಗ |

ದಿನನಿತ್ಯ ಬಳಸುವ ಪದಗಳು

| ಸಂಖ್ಯೆ | ಕನ್ನಡ ಭಾಷೆ | ತೆಲುಗು ಭಾಷೆ | ಸಿಂಧೊಳ್ಳು ಭಾಷೆ |
|---|---|---|---|
| ೦೧ | ದೀಪ | ದೀಪಂ/ದಿವ್ವೆಲು | ದೀಪಲು |
| ೦೨ | ಚಾಪೆ | ಚೇಪಲು | ಸಾಪಲು |
| ೦೩ | ಪೊರಕೆ | ಪೊರಕೆ | ಪರಕ್ಕಾ |
| ೦೪ | ಅಡಿಕೆ ಗಂಟು | ಒಕ್ಕಲಮಾಟ | ಸಂಟೇಲು |
| ೦೫ | ಬೇಟೆ | ವೇಟ | ಏಟೆಮಲಾಂ |
| ೦೬ | ಕೌದಿ | ಬೊಂತ | ಬಂತಲು |
| ೦೭ | ಗುಡಾರ | ಡೇರಾ | ಡೇರಾಂ |
| ೦೮ | ಎಲೆ | ಆಕು | ಆಕಲು |
| ೦೯ | ಕನ್ನಡಿ | ಅದ್ದಮು | ಹದಂ |
| ೧೦ | ಚಪ್ಪಲಿ | ಚೆಪ್ಪುಲು | ಚೆಪ್ಪು |
| ೧೧ | ಜಗಲಿ | ಅಟ್ಟಪೈನ | ಅಟ್ಟಡಿ |
| ೧೨ | ಜಡೆ | ಜಡ | ಜಡ |
| ೧೩ | ತರಕಾರಿ | ಕಾಯಗೂರಲು | ಕೊರಪಾಕಲು |
| ೧೪ | ದಾರಿ | ರಸ್ತ | ರಸ್ತೆಲು |
| ೧೫ | ನಕ್ಷತ್ರ | ಚುಕ್ಕಲು | ನಕ್ಷತ್ರಂ |
| ೧೬ | ಬಿಸಿಲು | ಏಂಡ | ಹೆಂಡ |
| ೧೭ | ಬೆಳಕು | ವೆಲುಗು | ಎಲುಗು |
| ೧೮ | ಹೂವು | ಪೂವು | ಪೂಲು |
| ೧೯ | ಯಾವಾಗ | ಎಪ್ಪುಡು | ಎಪ್ಪುಟ್ಟು |
| ೨೦ | ಹೊರಡು | ವೆಳ್ಳೂ | ಎಲ್ಲೂ |
| ೨೧ | ಬಾ | ರಾ | ರಾ |
| ೨೨ | ನೀರು | ನೀಳ್ಳು | ನೀಳ್ಳು |
| ೨೩ | ದುಡ್ಡು | ಡಬ್ಬುಲು | ಡಬ್ಬೂ |
| ೨೪ | ತೆಗೆದುಕೊಂಡು ಬಾ | ತೀಸುಕೋನಿ ರಾ | ತೀಸುಕೊವಿ ರಾ |
| ೨೫ | ಎಲ್ಲರು | ಅಂದರು | ಅಂದರು |
| ೨೬ | ಇಲ್ಲಾ | ಲೇದು | ಲೇದು |
| ೨೭ | ಮೀನಿನ ಬಲೆ | ಶಾಪಲು ವಲ | ಪಾಸಿಮಂ |

ಸಂಖ್ಯಾವಾಚಕಗಳು

| ಸಂಖ್ಯೆ | ಕನ್ನಡ ಭಾಷೆ | ತೆಲುಗು ಭಾಷೆ | ಸಿಂಧೋಳ್ಳು ಭಾಷೆ |
|---|---|---|---|
| ೦೧ | ಒಂದು | ಒಕ್ಕಟಿ | ಒಕ್ಕಟಿ |
| ೦೨ | ಎರಡು | ರೆಂಡು | ರೊಂಡು |
| ೦೩ | ಮೂರು | ಮೂಡು | ಮೂಡು |
| ೦೪ | ನಾಲ್ಕು | ನಾಲ್ಗು | ನಾಲ್ಗು |
| ೦೫ | ಐದು | ಐದು | ಐದು |
| ೦೬ | ಆರು | ಆರು | ಆರು |
| ೦೭ | ಏಳು | ಏಡು | ಏಡು |
| ೦೮ | ಎಂಟು | ಎನಿಮಿದಿ | ಎನಿಮಿದಿ |
| ೦೯ | ಒಂಬತ್ತು | ತೊಂಮ್ಮಿದಿ | ತೊಬಂದಿ |
| ೧೦ | ಹತ್ತು | ಪದಿ | ಪದಿ |
| ೧೧ | ಇಪ್ಪತ್ತು | ಇರವೈ | ಇರವೈ |
| ೧೨ | ನೂರು | ವಂದ | ನೂಡಾ |
| ೧೩ | ಐನೂರು | ಐದುವಂದಲು | ಐದುನೂಡಾ |
| ೧೪ | ಸಾವಿರ | ವೇಲು | ವೈಯಿ |
| ೧೫ | ಲಕ್ಷ | ಲಕ್ಷಲು | ಲಕ್ಷಲು |
| ೧೬ | ಕೋಟಿ | ಕೋಟಿಲು | ಕೋಟಿಲು |

ಸಿಂಧೋಳ್ಳರು ಮಾತನಾಡುವಾಗ ಅವರ ವಾಕ್ಯಗಳನ್ನು ಗಮನಿಸಿ

| ಸಂಖ್ಯೆ | ಕನ್ನಡ ಭಾಷೆ | ತೆಲುಗು ಭಾಷೆ | ಸಿಂಧೋಳ್ಳು ಭಾಷೆ |
|---|---|---|---|
| ೦೧ | ಭಿಕ್ಷೆಗೆ ಹೋಗಿ ಬಾ | | ಅಡಕಲು ತಿನ್ನಲು ಪೊಯಿರ |
| ೦೨ | ಊಟ ಮಾಡಿದಿಯಾ | | ಭೂವ ತಿಂಟಿವ |
| ೦೩ | ಎಲ್ಲಿಗೆ ಹೋಗ್ತೀಯಾ | | ಯಕ್ಕಡ್ ಪೋತವ್ |
| ೦೪ | ಮದುವೆ ಆಗಿದೀಯಾ | | ಪೆಂಡ್ಲಿ ಆಯಿಂದ್ಯೆ |
| ೦೫ | ಗುಡಾರದಲ್ಲಿ ಮುಖ್ಯಸ್ಥ ಚೆನ್ನಾಗಿ ಇದ್ದಾನೆ | | ಡೆರಾಂನಲ್ಲಿ ಮುಖ್ಯಸ್ಥುಡು ಬಾಗುಂನ್ನಡ |
| ೦೬ | ಹುಡುಗಿ ಮೈನೆರದಾಳೆ | | ಪಿಲ್ಲ ಋತುಮತಿ ಆಯಿಂದಾ |
| ೦೭ | ಹಂದಿಗಳು ಹೊಡೆದುಕೊಂಡು ಬಾ | | ಪಂದಿಲು ತೋಲುಕೆಂದು ದಾ |
| ೦೮ | ಬುರ್ರ ಬುರ್ರವಾದ್ಯ ಬಾರಿಸಮ್ಮ | | ಹುರುಮುಲು ವಾದ್ಯಂ ಕೊಟ್ಟಿಸಮ್ಮ |
| ೦೯ | ನೀನು ಶಾಲೆಗೆ ಹೋಗ್ತಿಯಾ | | ನುವ್ವು ಶಾಲೆಗೆ ಪೋತವ |
| ೧೦ | ಎಲ್ಲರಿಗೂ ಕಾಫಿ ಮಾಡಿಕೊಡು | | ಅಂದರಕಿ ಕಾಫೀ ಚೆಯಿಸಿ ಹೀ |

ಸಿಂಧೋಳ್ಳರು ಬಳಸುವ ಮೇಲಿನ ಪದ, ವಾಕ್ಯಗಳನ್ನು ಸೂಕ್ಷ್ಮವಾಗಿ ಗಮನಿಸಿದರೆ ಸಂಪೂರ್ಣವಾಗಿ

ತೆಲುಗು ಇವರ ಮಾತೃಭಾಷೆ ಎಂಬುದು ಸ್ಪಷ್ಟವಾಗುತ್ತದೆ. ಅಲ್ಲದೆ ಈ ಸಮುದಾಯಕ್ಕೆ ಸಂಬಂಧಿಸಿ ಎಲ್ಲಾ ಮಾಹಿತಿ ದೊರೆಯುವುದು ತೆಲುಗಿನಲ್ಲಿಯೇ ಎಂಬುದು ಗಮನಾರ್ಹ ಸಂಗತಿ. ಸಿಂಧೋಳ್ಳುರ ಭಾಷೆಯು ಪ್ರಾದೇಶಿಕ ಭಾಷೆಗಳ ಪ್ರಭಾವಕ್ಕೆ ಒಳಗಾಗಿದ್ದರೂ ತೆಲುಗಿನ ಮೂಲ ಸ್ವರೂಪವನ್ನು ಉಳಿಸಿಕೊಂಡು, ಕೆಲವೊಮ್ಮೆ ಕನ್ನಡ ಭಾಷೆಯನ್ನು ಬಳಸುತ್ತಾರೆ. ದ್ವಿಭಾಷಿಕ ಕಾರಣದಿಂದ ಈ ಎರಡು ಭಾಷೆಗಳು ಸೋದರ ಭಾಷೆಗಳಾಗಿವೆ. ಆದರೂ ಕನ್ನಡದ ಮಾತುಗಾರಿಕೆ, ಹಾಡು, ಸಿನಿಮಾ ಮತ್ತು ಧಾರವಾಹಿಗಳಂತೂ ಈ ಸಮುದಾಯದವರು ನೋಡುವುದು ಸರ್ವೆ ಸಾಮಾನ್ಯವಾಗಿದೆ. ಹೀಗಾಗಿ ಈ ಎರಡೂ ಭಾಷೆಗಳು ದ್ರಾವಿಡ ಪರಿವಾರದವರು ಕನ್ನಡ ಮತ್ತು ತೆಲುಗು ಬಗ್ಗೆ ವೈಶಿಷ್ಟ್ಯತೆಯಾಗಿದೆ. ಸಹಜವಾಗಿಯೆ ಸಿಂಧೋಳ್ಳುರ ಮಾತೃಭಾಷೆ ತೆಲುಗು ಮೇಲೆ ಕನ್ನಡ ಪ್ರಭಾವ ಬೀರಿದೆಯೆನ್ನಬಹುದು.

**ಆ. ಸಾಹಿತ್ಯ**

ಯಾವುದೇ ದೇಶದ ಸಾಹಿತ್ಯದಲ್ಲಿ ಸಾಮಾನ್ಯವಾಗಿ ಎರಡು ಬಗೆಗಳಿರುತ್ತವೆ. ಒಂದು ವಿದ್ಯಾವಂತರಿಂದ ರಚಿತವಾದ ಶಿಷ್ಟಸಾಹಿತ್ಯ. ಇನ್ನೊಂದು ಬರಹದ ಮೂಲಕ ಪ್ರಕಟವಾಗದ ಅಂದರೆ ಗ್ರಂಥಸ್ಥ ವಲ್ಲದ, ಕಲಿಯದವರಿಂದ ನಿರ್ಮಿತವಾದ, ಬಾಯಿಯಿಂದ ಬಾಯಿಗೆ ಹರಿದು ಬಂದ ಜಾನಪದ ಸಾಹಿತ್ಯ. ಈ ಸಾಹಿತ್ಯ ಗ್ರಾಮೀಣರ, ಕೃಷಿಕರ, ಕೂಲಿ-ಕಾರ್ಮಿಕರ, ದಿನ ದಿನದ ಬದುಕಿನ ನಿರ್ವಹಣೆಯಲ್ಲಿ ಮೂಡಿದ ಸಹಜ ಸಾಹಿತ್ಯ. ಅವರ ಬದುಕೇ ಹಾಡಾಗಿ ನಿಂತ ಸಹಜತೆ ಅಲ್ಲಿರುತ್ತದೆ. ಯಾವುದೇ ಭಾಷೆಯಲ್ಲಿ ಶಿಷ್ಟ ಸಾಹಿತ್ಯಕ್ಕಿಂತ ಮೊದಲು ಈ ಜಾನಪದ ಸಾಹಿತ್ಯ ನಿರ್ಮಾಣ ಆಗಿರುತ್ತದೆ.

"ಸಾಮಾಜಿಕ ಜೀವನದಲ್ಲಿ ಮಾನವ ತನ್ನ ಅಗತ್ಯಕ್ಕನುಗುಣವಾಗಿ ಭಾಷೆಯನ್ನು ಯಾವಾಗ ಬಳಕೆಗೆ ತಂದುಕೊಂಡನೋ, ಅಂದಿನಿಂದಲೇ ತನ್ನ ಭಾವನೆಗಳನ್ನು ಕಾವ್ಯಮಯವಾಗಿ ಅಭಿವ್ಯಕ್ತಿಸುವುದನ್ನು ಕಲಿತಿದ್ದಾನೆ. ಏಕೆಂದರೆ ಪ್ರಾರಂಭಿಕ ಹಂತದಲ್ಲಿ ಮಾನವ ಮಾತಾಡುತ್ತಿದ್ದ ಮಾತು ಕಾವ್ಯಮಯ ವಾಗಿತ್ತೆಂದು".[೩] ಈ ಸೃಷ್ಟಿಯು ಯಾವುದೇ ಪ್ರಜ್ಞೆಯಿಂದ ಬಂದದ್ದಲ್ಲ. ಬದಲಾಗಿ ಅದು ಅಪ್ರಜ್ಞಾ ಪೂರ್ವಕವಾಗಿ ಹೊರಹೊಮ್ಮಿದ್ದು, ಇದಕ್ಕೆ ಶಿಷ್ಟ ಪರಂಪರೆಯಂತೆ ಯಾವ ಪೂರ್ವಯೋಜನೆಯು ಇರಲಾರದು. ಆದರೂ ಇಂದಿಗೂ ಮೌಖಿಕ ಪರಂಪರೆಯ ಅಧ್ಯಯನ ಯೋಗ್ಯವಾಗಿ ಉಳಿದುಕೊಂಡು ಬಂದಿದೆ.

ಬಡತನ ಹಿನ್ನೆಲೆಯಲ್ಲಿ ಮನುಷ್ಯ ಇತ್ಯಾದಿ ಸಮಸ್ಯೆಗಳ ಒತ್ತಡಗಳಿಗೆ ಸಿಲುಕಿಕೊಂಡ ಸಂದರ್ಭದಲ್ಲಿ ವ್ಯಕ್ತಪಡಿಸುವ ಭಾವನೆಗಳು, ಒಳ ಅಂತರಾಳಗಳಲ್ಲಿ ಕಾವ್ಯದ ಸ್ಪರ್ಶ ಪಡೆದುಕೊಂಡೆ ಹೊರಬರುತ್ತದೆ. ಸಮಾಜದಲ್ಲಿ ಮಾನವನು ಉದ್ಭವಿಸಿದ ನಂತರ ಸುಖ-ದುಃಖ, ನೋವು-ನಲಿವು, ಹಾಡು-ಪಾಡು ಇತ್ಯಾದಿಗಳು. ಪ್ರಪಂಚದ ಮಾನವನ ಸೃಷ್ಟಿಯಲ್ಲಿ ಬದುಕುತ್ತಿರುವ ಸಮುದಾಯ ಕುಟುಂಬಗಳಾಗಿದ್ದರೂ, ಈ ತೆರನಾದ ಅನುಭವಗಳನ್ನು ಹಾಡಾಗಿ ಹೊರಹೊಮ್ಮಿಸಿರುವುದು ಕಂಡುಬರುತ್ತದೆ. ಬುಡಕಟ್ಟು ಅನಕ್ಷರಸ್ಥರು ತಮ್ಮ ಆಸ್ತಿಯಾಗಿರುವ "ಜನಪದ ಗೀತೆಗಳು" ಕಳೆದ ದಿನಗಳಿಂದಲು-ಇಂದಿನ ದಿನಗಳವರೆಗೆ ನೆನಪಿನ ತಳಹದಿಯಾಗಿ ಉಳಿದು ಬೆಳೆದು ಬಂದಿರುವ ಪೋಷಣೆಯೇ ಅತ್ಯಂತ ವಿಸ್ಮಯಕಾರಿಯಾಗಿದೆ. ಪ್ರತಿಭಾ ಸಂಪನ್ನವಾದ (ಪುರಸ್ಕಾರ) ಭಾವನೆ ತೀವ್ರತೆಯೇ ಜನಪದ ಗೀತೆಗಳ ಮೂಲಸತ್ವವಾಗಿದೆ.

ಸಿಂಧೋಳ್ಳುರು ತಮ್ಮ ಬಾಳಿನ ಬಗೆಬಗೆಯ ಅನುಭವಗಳನ್ನು ಅನೇಕ ರೀತಿಯಿಂದ ವ್ಯಕ್ತ ಪಡಿಸಿದ್ದಾರೆ. ಅವು ಜಾನಪದ ಗೀತೆ, ಕಥೆ, ಗಾದೆ, ಒಗಟು, ಒಡಪು, ನುಡಿಗಟ್ಟು, ಭಜನೆ ಮೊದಲಾದ ಜನಪದ ಸಾಹಿತ್ಯದ ರೂಪದಲ್ಲಿ - ಹೀಗೆ ಅವರ ವಿಭಿನ್ನ ಅನುಭವ, ವಿಸ್ತಾರವಾಗಿ ಮೂಡಿ ಬಂದಿತು. ಒಟ್ಟಾರೆ ತನ್ನ ಸಹಜತೆ ಮತ್ತು ಸರಳತೆಯಿಂದಾಗಿ ಸಿಂಧೋಳ್ಳು ಬುಡಕಟ್ಟು ಸಮುದಾಯ ಆಡಿದ ಮಾತೆಲ್ಲ ಸಾಹಿತ್ಯವೇ ಆಗಿ ಮೂಡಿರುವುದು ಕಂಡು ಬರುತ್ತದೆ. ಈ ಹಿನ್ನೆಲೆಯಲ್ಲಿ ಸಿಂಧೋಳ್ಳುರು ತಮ್ಮದೇ ಆದ ಜನಪದ ಸಾಹಿತ್ಯವನ್ನು ನಿರ್ಮಾಣ ಮಾಡಿದ್ದಾರೆ. ಅವುಗಳಲ್ಲಿ ಅತ್ಯಂತ ಮುಖ್ಯವಾದ ಹಾಡುಗಳು, ಗಾದೆಗಳು, ಒಗಟುಗಳು, ಒಡಪುಗಳು, ನುಡಿಗಟ್ಟುಗಳು ಮತ್ತು ದೇವರ ಪದಗಳನ್ನು ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಸಂಗ್ರಹಿಸಲಾಗಿದ್ದು. ಸ್ಪಷ್ಟನೆಗಾಗಿ ಕೆಲವನ್ನು ಇಲ್ಲಿ ವಿಶ್ಲೇಷಿಸಲಾಗಿದೆ.

ಸಾಮಾಜಿಕ ಜೀವನದಲ್ಲಿ ಸಿಂಧೋಳ್ಳು ಸಮುದಾಯ ಅನೇಕ ಸಾಹಿತ್ಯ ಅಂಶಗಳ ಕಡೆಗೆ ಗಮನ ನೀಡಿದೆ. ಇವರ ಸಾಹಿತ್ಯ ತೆಲುಗು ಭಾಷೆಯ ಮೂಲಕ ಅಭಿವ್ಯಕ್ತಗೊಳ್ಳುತ್ತದೆ. ಇನ್ನೊಂದೆಡೆಯಲ್ಲಿ ಕನ್ನಡ ಭಾಷೆಯ ಮೂಲಕ ಸಾಹಿತ್ಯ ಸಾಮ್ಯತೆಯನ್ನು ಪಡೆದಿರುತ್ತದೆ. ವಲಸೆ ಬಂದಂತಹ ಸಮುದಾಯ ಇಲ್ಲಿನ ಸ್ಥಳೀಯ ಪರಿಸರ ಪ್ರೇರಣೆಯಿಂದ ಕಲಿತುಕೊಂಡು, ಮತ್ತೊಂದು ಬಗೆಯ ಸಾಹಿತ್ಯದ ಸೃಷ್ಟಿಗೆ ಕಾರಣವಾಗಿರಬಹುದು. ಇದರಿಂದ ಸಂಸ್ಕೃತಿಯ ವಿಭಿನ್ನತೆಯನ್ನು ಅರ್ಥೈಸಬಹುದಾಗಿದೆ. ಆದರೂ ಸಿಂಧೋಳ್ಳುರ ಸಾಹಿತ್ಯದಲ್ಲಿ ಸೃಜನಶೀಲತೆ ಇದ್ದು, ವೈಶಿಷ್ಟ್ಯತೆಯಿದೆ. ಇವರು ಹೆಚ್ಚಾಗಿ ಭಿಕ್ಷಾಟನೆ ಹಾಡು ಮತ್ತು ದೇವರ ಕಲ್ಪನೆ ಮೇಲೆ ಹಾಡುವುದುಂಟು. ಕೌಟುಂಬಿಕ ಜೀವನದಲ್ಲಂತೂ ಹಾಡುಗಳು ಹೃದಯಂಗಮಯವಾಗಿದೆ. ಜಾತ್ರೆ, ಹಬ್ಬ ಮತ್ತು ಕೂಲಿಕೆಲಸಕ್ಕಾಗಿ ಹೋದಾಗ ತಾವು ಮಾಡುವ ಹಾಡಿನ ಹಾಸ್ಯ ಲೇಪಿತ ಶೃಂಗಾರ ಗೀತೆ, ದೃಷ್ಟಿಬೋಟ್ಟಾಗಿದೆ. ಸಿಂಧೋಳ್ಳುರಲ್ಲಿ ಅಭಿವ್ಯಕ್ತಗೊಂಡಿರುವ ಸಂಗತಿಗಳು ವೈಜ್ಞಾನಿಕ ಮನೋಭಾವನೆಯನ್ನು ಹೊಂದಿದ್ದು, ಇದು ಅವರಲ್ಲಿದ್ದ ವೈಚಾರಿಕ ಪ್ರಜ್ಞೆಯನ್ನು ಪ್ರತಿಬಿಂಬಿಸುತ್ತದೆ.

**ಸಿಂಧೋಳ್ಳು ಸಮುದಾಯುದ ಸಾಹಿತ್ಯ ಪ್ರಕಾರಗಳು**

ಜೋಗುಳ ಹಾಡು, ಋತುಮತಿ ಹಾಡು, ಮದುವೆಯ ಹಿತವಚನಗಳ ಹಾಡು, ಭಿಕ್ಷಾಟನೆಯ ಹಾಡುಗಳು, ಗಾದೆಗಳು, ಒಗಟುಗಳು, ದೇವರ ಪದಗಳು ಮುಂತಾದವು.

**ಜೋಗುಳ ಹಾಡು :** ಜನಪದ ಗೀತೆ ಪ್ರಕಾರಗಳಲ್ಲಿ ಶಿಶು ಗೀತೆಯೂ ಒಂದು. ಸಾಮಾಜಿಕ ಜೀವನ ಎಂಬುವುದು ಮಕ್ಕಳ ಭವ್ಯ ಭವಿಷ್ಯದ ರೂಪಕವಾಗಿದೆ. ದೇಶಿಯ ನೆಲೆಯಲ್ಲಿ ಎಲ್ಲಾ ಮಹಿಳೆಯರು ತಮ್ಮ ಪುಟಾಣಿ ಕಂದಮ್ಮಗಳ ಲಾಲನೆ ಪಾಲನೆ, ಪೋಷಣೆ, ನೀತಿ ಭೋದನೆ ಇತ್ಯಾದಿ ವಿಷಯಗಳ ಮೇಲೆ ಧಾರೆಯೆರೆದು ನೀಡುತ್ತಾಗೆ. ಜನಪದ ಗೀತೆಗಳಲ್ಲಿ ಜೋಗುಳ ಹಾಡು ಕೆಲವರಿಗೆ ಸಾಹಿತ್ಯ ರೂಪದಲ್ಲಿ ಬಂದರೆ, ನಗರದಲ್ಲಿ ವಾಸಿಸುವಂತಹ ಮಹಿಳೆಯರಿಗೂ ಜೋಗುಳ ಹಾಡು ಹೇಳುವುದು ತೀರಾ ವಿರಳ. ಅದಕಾರಣ ಜನಪದ ಗೀತೆಗಳಲ್ಲಿ ಲಾಲಿ ಹಾಡು ತಿರಸ್ಕರಿಸುವಂತಿಲ್ಲ. ಈ ಚಿಂತನೆಯಲ್ಲಿ ಸಿಂಧೋಳ್ಳು ಮಹಿಳೆಯರು ತಮ್ಮ ವೈಚಾರಿಕ ಸಮಸ್ಯೆಗಳು ಎಷ್ಟೇ ಇದ್ದರೂ ಮಕ್ಕಳ ಮೇಲಿನ ಪ್ರೀತಿ ಮಮತೆ, ವಾತ್ಸಲ್ಯ ಅನುರಾಗ, ಇತ್ಯಾದಿ ಅಮೂಲ್ಯವಾದ ಕಾಣಿಕೆಗಳನ್ನು ನೀಡುವಲ್ಲಿ

ಸಫಲರಾಗುತ್ತಾರೆ. ತಾಯಿಯೂ ತನ್ನ ಮನಸ್ಸಿನ ಆಳದ ಭಾವನೆಗಳಿಗೆ ರೂಪ ಕೊಡಲು ಸಾಧ್ಯವಾಗಿರುವಂತಹ ಸಂಗತಿಯೂ ತುಂಬಾ ಮಹತ್ವ ಪೂರ್ಣವಾಗಿದೆ. ಜನಪದ ಸಾಹಿತ್ಯದಲ್ಲಿ ಜೋಗುಳ ಹಾಡು ಬಹುಪಾಲು ಕೀರ್ತಿ ಈಕೆಯದು. ಮಗುವಿಗೆ ಆರೈಕೆ ಮಾಡುವಾಗ ಈಕೆಯೂ ತನ್ನ ಅನುಭವವನ್ನು ಸುಂದರವಾದ ಅನೇಕ ಪದಗಳ ಮೂಲಕ ತಮ್ಮ ಗುಡಾರದಲ್ಲಿ ಹಳೇ ಸೀರೆಯಲ್ಲಿ ಮಗುವನ್ನು ಮಲಗಿಸುತ್ತಾ ಜೋಗುಳ ಹಾಡುಗಳು ಹಾಡುತ್ತಾಳೆ.[೪]

"ಲಾ ಲಾ ಮ್ಮ ಲಾಲಿ ಕಂದಾಲಿ, ಸುವಾಲಿ
ಅಲಾಲಿ ಕುಲಾಲಿ ಚುವಾಡಿ ಲಾಲಿ, ಕುಲಾ ಲಾಡಿ
ಸಂದಮಾಮ ವಚ್ಚಾಡೆ
ಅಲಾಲಿ ಕುಲಾಲಿ ಚವಾಡೆ ಲಾಲಿ ಕಂಟಿ ಪಾಲಿ
ಸೆಕೆಯನಾ ಜೋಳಿಕಾನಾ ತೊಟ್ಟಲನಾ ಸಿನ್ನಿನಾನ್ಕ ಮುತ್ತವಾಲಮ್ಮ
ಅಲಾಲಿ ಕುಲಾಲಿ ಚವಾಡೆ ಲಾಲಿ ಕಂಟಿ ಪಾಲಿ
ಸಿಂದ್ಯಾಕೆ ಪೆಟ್ಟಲಿನು, ಬಾಳಕೆ ಪೆಟ್ಟಲಿನು
ಯವರೇನೇಲಪಟ್ಟರೇನಮ್ಮ ಮ್ಮ.........
ನಿನ್ನ ಏವರೇ ಏನೇ ಕೊಟ್ಟರೇ
ಸಿಂಧೆಯಮ್ಮ ಗಾಳಿಮ್ಮ ರವಾನೇ
ಅಲಾಲಿ ಕುಲಾಲಿ ಚವಾಡೆ ಲಾಲಿ, ಕುಲಾ ಲಾಲಿ
ಕಂದಾಲಿ ಜೊ ಜೊ ಜೊ...................... ಲಾಲಿ
ಕಂದಾಲಿ ಜೊ ಜೊ ಜೆ ಲಾ ಲಿ ಲೊ
ಅಲಾಲಿ ಕುಲಾಲಿ ರವಾಮ್ಮ ನಾ
ಅಲಾಲಿ ಕುಲಾಲಿ ರವಾ ್ಮ ನಾ
ಏಡೋರಾಕ ಚಂದ್ರ ಮಾಮಾಲ್ಲ"[೬]

**ಋತುಮತಿ ಹಾಡು :** ಸಿಂಧೋಳ್ಳುರು ಗಂಡಿನ ಯೌವನಕ್ಕಿಂತ, ಹೆಣ್ಣಿನ ಯೌವನಾವಸ್ಥೆ ಅತ್ಯಂತ ಮುಖ್ಯವಾಗಿರುತ್ತದೆ. ಹೆಣ್ಣು ಮೈನೆರೆಯುವುದನ್ನು ಅತ್ಯಂತ ಸರಳ ರೀತಿಯಲ್ಲಿ ಸ್ವೀಕರಿಸಿ, ವಿಶಿಷ್ಠ ಬಗೆಯಲ್ಲಿ ಆಚರಿಸುತ್ತಾರೆ. ಋತುಮತಿ ಹೆಣ್ಣಿನ ಹೆತ್ತವರು, ಕುಲದ ಬಂಧುಗಳು ಸೇರಿ ಆಕೆಯನ್ನು ಸಿಂಗರಿಸುತ್ತಾರೆ. ಕಾಣಿಕೆ ಕೊಟ್ಟು ನಂತರ ಆರತಿ ಬೆಳಗುವ ಸಂದರ್ಭದಲ್ಲಿ ಸಮುದಾಯದ ಹಿರಿಯ ಮಹಿಳೆಯರು ಹಾಡುಗಳನ್ನು ಹೇಳುವುದುಂಟು.[೭]

"ಯಾವಾಗ ಮೈನೆರೆದೆ ದುರುಗಮ್ಮ
ಅರಿಶಿನ ಮೈಯಿಗೆ ಯಾವಾಗ ಮೈನೆರೆದೆ ದುರುಗಮ್ಮ
ಜೋಗಳಿಗೆ ಒಂಬಾಳೆ ಒಡೆವಾ ತತವೀಗೆ ||

ಮಲ್ಲಿಗೆ ಗಿಡದಾಗೆ ರಂಬೆ ಮೈನೆರೆದಾಳೆ
ಮಲ್ಲಿಗೆ ಮರವೇ ಚಿಗಳೀಯಾ | ಬೆಲ್ಲದ ಪಾಕನುಂಡೆ

ದುರುಗಮ್ಮ ನಾಲೇಗೆ ಮುಡುಲು ಗಿಡುದಾವೆ ||

ಅಮ್ಮನ ಮಡಿಲಿಗೆ ಬಾಲೆ ಮೈನೆರೆದಾಳು
ಅಮ್ಮನ ಮರವೇ ಬೆಳೆದಾಳೂ | ಬೆಲ್ಲದ ಪಾಕನುಂಡೆ
ದುರುಗಮ್ಮ ಮಡಲು ಅಮ್ಮ ಐದಾಳೋ ||

ದುರುಗಮ್ಮ ಮೈನೆರೆದೂ ಬಾಗಿಲಾಚೆ ನಿಂತಿತಾಳೂ
ಸೋದರ ಮಾವ ಬಂದು ನೋಡಾನಾ | ಸೋದರ ಮಾವ
ದುರುಗಮ್ಮ ನೋಡಿ ಕರುಗಿ ನೀರಾದ ||

ಸೀರೆಯ ಬಟ್ಟೆಯ ಮತ್ತೆ ಹೂವಿನ ಹಾರವೂ
ಮಾವನ ಮಗನೇ ತರಬೇಕು | ತಂದ ಅಕ್ಕನಿಗೆ ಕೊಡಬೇಕು
ಸೊಸೆ ಮುಂದೆ ನಿಲ್ಲಬೇಕು ||

ನುಚ್ಚಕ್ಕಿ ಹುಗ್ಗಿ ಮಾಡಿ, ಬಾಳೆಹಣ್ಣು
ತಟ್ಟೆಲಿ ಅವೆ ಬಗೇ ಹಣ್ಣಮ್ಮ
ಹೆಣ್ಣಾದ ದುರುಗಮ್ಮ ಸೆರೆಲೊಡ್ನ ||

ದೀಪದ ಆರತಿ ಬೆಳಗಿ, ಚುಕ್ಕಿ ಇಟ್ಟು
ಸೃಷ್ಮಿ ತೆಗೆದು ನೋಡಾ ಅಕ್ಕ | ಬಾಲೆಯ
ಮುಖ ನೋಡುವನು ||"

**ಮದುವೆಯ ಹಿತವಚನದ ಹಾಡುಗಳು :** ಹೆಣ್ಣು-ಗಂಡಿನ ಪರಸ್ಪರ ಆಕರ್ಷಣೆ ತೀರಾ ಸಹಜವಾದದ್ದು. ತಾನು ಮದುವೆಯಾಗಬೇಕಾದ ಹುಡುಗಿ ತುಂಟಾಟದಿಂದ ಹುಡುಗನು ಸಂಕೋಚದ ಮುದ್ದೆಯಾಗಿದ್ದ, ಹುಡುಗಿ ನೋಡಲು ತೋರಿದ ಕಾತುರ. ಅದರಲ್ಲಿಯೂ ಒಲಿದ ಮನಸ್ಸುಗಳು ಒಂದಾಗಲು ನಿರಂತರವಾಗಿ ಹಾತೊರೆಯುತ್ತಿರುತ್ತವೆ. ಸಿಂಧೋಳ್ಳರಲ್ಲಿ ಬದುಕಿನ ಬಹುಪಾಲು ಜೀವನ ಸಂಗಾತಿಗಳನ್ನು ಕುಲದ ಮುಖ್ಯಸ್ಥರು ನಿರ್ಧರಿಸುವರು.[೬] ಗುಡಾರದಲ್ಲಿ ಗಂಡು-ಹೆಣ್ಣು ಸಾಯುವತನಕ ಒಟ್ಟಿಗೆ ಬದುಕಬೇಕಾದ ಕಡ್ಡಾಯನಿಯಮವಾಗಿದೆ. ಮದುವೆ ಆಚರಣೆಗಳಲ್ಲಿ ವರನು ವಧುವಿಗೆ ತಾಳಿಕಟ್ಟುವ ಸಂದರ್ಭದಲ್ಲಿ ಕುಲದ ಮುಖ್ಯಸ್ಥನು ಮದುವೆಯ ಹಿತನುಡಿಗಳನ್ನು ಪ್ರಾರಂಭಿಸುತ್ತಾನೆ.[೭] ಇದರ ಜೊತೆಯಲ್ಲಿ ತನ್ನ ಹೆಂಡತಿಯೂ ಬುರ್ರ ಬುರ್ರವಾದ್ಯದೊಂದಿಗೆ ಬಾರಿಸುತ್ತಾಳೆ.[೮] ಈ ಹಿತನುಡಿಗಳು ಶುಭವನ್ನು ಸೂಚಿಸುವಂಥದ್ದು. ಶುಭವನ್ನು ಸೂಚಿಸುವ ಹಾಡು ಮದುವೆ ಶೀರ್ಷಿಕೆಯಲ್ಲಿ ವಿವರಿಸಲಾಗಿದೆ.

**ಭಿಕ್ಷಾಟನೆಯ ಹಾಡು :** ಪೋತರಾಜ ಭಿಕ್ಷೆ ಬೇಡಲು ಮನೆ ಹತ್ತಿರ ಬಂದಾಗ ತನ್ನ ಮೈಯಿಗೆ ರಭಸವಾಗಿ 'ಚಾಟಿ' ಬಾರಿಸಿಕೊಳ್ಳುತ್ತಾನೆ. ತನ್ನ ಮಡದಿಯೊಂದಿಗೆ ಬುರ್ರ ಬುರ್ರವಾದ್ಯದೊಂದಿಗೆ ತಕ್ಕಂತೆ ಕುಣಿಯುವನು. ಈ ಸಂದರ್ಭದಲ್ಲಿ ಹಾಡು ನುಡಿಗಳ ಉತ್ತಮ ಅಭಿವ್ಯಕ್ತಿಯನ್ನು ಕಾಣಬಹುದಾಗಿದೆ. ಭಿಕ್ಷಾಟನೆ ಕಲಾವಿದರು ಎಲ್ಲಂದರಲ್ಲಿ ಭಿಕ್ಷೆಗೆ ಸಿದ್ಧರಾಗಿ ತಮ್ಮ ಆವೇಷಭರಿತ ಪ್ರದರ್ಶನವನ್ನು ಮಾಡುವನು. ಭಿಕ್ಷಾಟನೆ ಹಾಡಿನೊಂದಿಗೆ ಮೈಮರೆತು, ಕುಣಿಯುತ್ತಾ ನೃತ್ಯ ಮಾಡುತ್ತಾನೆ. ದೇವಿಯ ಗುಣಗಾನದ ಮೂಲಕ ಹಾಡು ಈ ರೀತಿಯಲ್ಲಿ ಹೇಳುತ್ತಾನೆ.[೯]

ಜಿರ್, ಬುರ್ರ್........................ ಏ ಬಹಳ ಉರುಮೆ ಬ್ಯಾಡಿಸಿಬೇಡಾ
ನಾನು ಏಕೆ ಬಂದನೆ? ಅಂದನೇ? ನಾ ಭಿಕ್ಷೆ ಬೇಡಕ್ಕೆ ಬಂದಿನಿ
ನನ್ನ ಕುಲದೇವರ್ರ ತೋರಿಸಿಲಿಕ್ಕೆ ಬಂದಿನಿ
ಈ ಊರು ಭಕ್ತಿ ಹ್ಯಾಂಗೈತಿ ನಾ ನೋಡಕಾ ಬಂದಿನಿ
ಅವರ ಧರ್ಮ ಹ್ಯಾಂಗೈತಿ ಕರ್ಮ ಹ್ಯಾಂಗೈತಿ ನ್ಯಾಯ ಹ್ಯಾಂಗೈತಿ
ಲಗ್ನ ಹ್ಯಾಂಗೈತಿ, ಕಂಟಕ ಹ್ಯಾಂಗೈತಿ, ಪೀಡೆ ಹ್ಯಾಂಗೈತಿ
ನಾ ಈರನಾಗಮ್ಮ ಕಂಟಕ ಹೇಳಕೆ ಬಂದಿನಿ
ನಾ ಇಕೇಡೆ ಪೂಜಾರಿಯಲ್ಲ ನನ್ನುಂದು ಗೂಂಟ್ಲೂರು
ಗುಂಟ್ಲೂರು ನಿಂದ ಭಿಕ್ಷೆ ಬೇಡಕ್ಕೆ ಬಂದಿನಿ
ನಿಮ್ಮ ಸಮಾಜದತ್ತ ಕಿವಿಗೊಟ್ಟು ಕೇಳಬೇಕು
ಕಣ್ಣು ತುಂಬಾ ನೋಡಬೇಕು, ನಾ ಮುತ್ತಿನಂತಹ ಮಾತು
ಹೇಳಿಕೊಂಡು ಹೋಗುತ್ತೇನೆ

ನಮ್ಮದು ಯಾವ ಸೀಮೆ ಎಂದರೆ ಗುಂಟೂರು ನಿಂದ
ಅನಂತಪುರ, ವಿಜಯವಾಡ, ತಾಡಪತ್ರಿ, ಕರೀಂನಗರ, ರಾಯಲ
ಸೀಮಾ ದಿಂದ ಪೂಜಾರಿ ಈರನಾಗಮ್ಮ, ಕೂಗಮ್ಮ, ಸುಂಕ್ಲಮ್ಮ
ನಿಮ್ಮ ಊರಿಗೆ ಬಂದಾಳ್ರೆ......

ಇಷ್ಟ ಬಂದೂ, ನಿಮ್ಮನ್ನು ಹರಕೆ ಹೊತ್ತವರು
ಹಣವನ್ನಾಗಲೀ, ಕಾಳಕಡಿಯಾಗಲಿ ಕೊಡಬೇಕು
ಇಲ್ಲದಿದ್ದರೆ ಬಹಳ ಹೊಗೆಯಾಗುವುದು
ಹರಕೆ ಮುಡುಪು ಹೊಂದಿದವರು
ನಿಮ್ಮ ಮುಡುಪು ಕೊಡಬೇಕು ಎಂದು ಬುರ್ರ ಬುರ್ರ
ವಾದ್ಯದೊಂದಿಗೆ ಕುಣಿಯುತ್ತಾ ಹೇಳುತ್ತಾನೆ

ಗಂಡು : ಹಾ ಹಾ ಹಾ ಹಾ ಹಾ ಹಾ ಹಾ

ಹೆಣ್ಣು : ಹಾ ಹಾ ಹಾ ಹಾ ಒಡೆಯ

ಗಂಡು : ಬಂದಂತಹ ಕಂಟಕ

ಹೆಣ್ಣು : ಹಾ ಹಾ ಹಾ ಹಾ ಒಡೆಯ

ಗಂಡು : ಈ ಊರನಲ್ಲಿ ಯಾರು ಕೊಟ್ಟರೆ ಅಂದರೆ ಕೂಡ್ಲಿಗಿನಲ್ಲಿ ಒಂದು ಸಾಮಾನು ಕೊಟ್ಟರೇ

ಹೆಣ್ಣು : ಯಾವುದು ಒಡೆಯ

ಗಂಡು : ಸೇರಣಿ ಗೆಜ್ಜೆ ಪೆಟ್ಟಿಗೆ ಕೊಟ್ಟಾರು ಅಪ್ಪ
ಯಾಕೆ ಕೊಟ್ಟಾರೆ ಅಪ್ಪ ಅಂದರೆ

ಅವರಿಗೆ ಮಕ್ಕಳಿಗೆ ಮೈಲಿ ಎದ್ದಿದ್ದವು
ಮಕ್ಕಳಿಗೆ ಬೇಡಿಕೊಡುವ ಸವಾಲು
ಅವಳು ಕಾಯಿಗೆ ನಡುವಿಗೆ ಪಟ್ಟಿ
ಮೂಗಿಗೆ ಮೂಕುತಿ
ಕೊರಳಲ್ಲಿ ತಾಳಿ
ಏಕೆ ಕೊಟ್ಟಳು ಅಪ್ಪ ಅಂದರೆ ಅವರ ಮಕ್ಕಳ ಮೈಲಿ ಕಂಟಕ ಬಂದಾನಿ ಈ ಗುಡಿಗೆ ನಮ್ಮಗೆ ಸಾಮಾನು ಕೊಟ್ಟರೆ ಅಪ್ಪ ಆ ಸಾಮಾನು ಸುದ್ದಿ ಹೇಳುತ್ತೇನೆ. ಕಿವಿಕೊಟ್ಟು ಕೇಳಿರಿ ತಂಗಿ

ಹೆಣ್ಣು : ಯಾವುದು

ಗಂಡು : ಕೇಳಿದ ಮೇಲೆ ನಿಮ್ಮ ಮನೆಗೆ ಇದ್ದಂತಹ ಸಾಮಾನುಗಳು ಏನೇ ಹರಕೆಯನ್ನು ಬೇಡಿಕೊಂಡಿರುವಿರಿ ಎಲ್ಲರು ಕೊಟ್ಟಬಿಡಬೇಕು ಕೊಡಲಿದ್ದರೆ ನಿಮ್ಮಗೆ ಬಹಳ ಹೊಗೆ ಬರುತ್ತದೆ ಎಂದು ಹೇಳುತ್ತೇನೆ.
ಅಂತಹ ಸಂದರ್ಭದಲ್ಲಿ ಹರಕೆ ಹೊತ್ತುವರು ಬೆಳ್ಳಿ ಸಾಮಾನುಗಳು, ದವಸಧಾನ್ಯಗಳು, ಚಿಲ್ಲರ ಹಣನೀಡಿ ಅಮ್ಮನ ಪೆಟ್ಟಿಗೆಯಿಂದ ಭಂಡಾರ ಪ್ರಸಾದ ಸ್ವೀಕರಿಸುತ್ತಾರೆ.
ಮುಂದೆ ಭೀಕ್ಷೆ ಬೇಡಲಿಕ್ಕೆ ಇದೇ ಹಾಡುಗಳನ್ನು ಹೇಳುತ್ತಾ, ತನ್ನ ಮೈಯಿಗೆ ಚಾಟಿಯಿಂದ ಹೊಡೆದುಕೊಳ್ಳುತ್ತಾ ಸಾಗುತ್ತಾನೆ.

**ಶ್ರಮ ಗೀತೆಗಳು :** ಜನಪದರು ತಮ್ಮ ನಿತ್ಯ ಜೀವನದಲ್ಲಿ ಸುಖ ದುಃಖಗಳನ್ನು ಹಾಡಿನ ಮೂಲಕ ತೋಡಿಕೊಳ್ಳುತ್ತಾರೆ. ಕೆಲಸದ ಜೊತೆಯಲ್ಲಿ ಹೃದಯ ಭಾರವನ್ನು ಹಗುರ ಮಾಡಿಕೊಳ್ಳುತ್ತಾರೆ. ಇವುಗಳು ಶ್ರಮ ಗೀತೆಗಳೆಂದು ಕರೆಯಬಹುದು. ಈ ಹಾಡುಗಳಿಗೆ ಇತಿಮಿತಿ ಎಂಬುದಿಲ್ಲ. ಬಾಳಿನ ಆಸರಿಕೆ ಬೇಸರಿಕೆಯನ್ನು ಈ ಗೀತೆಗಳ ಮುಖಾಂತರವಾಗಿ ಪರಿಹರಿಸಕೊಳ್ಳುವುದರಿಂದ ಈ ಹಾಡುಗಳು ತುಂಬಾ ವೈಶಿಷ್ಟ್ಯ ಪೂರ್ಣವಾಗಿವೆ. ಶ್ರಮ ಜೀವನದಲ್ಲಿ ಸಂತೃಪ್ತಿ ಕಂಡ ಸಿಂಧೋಳ್ಳು ಮಹಿಳೆಯರು ತುಂಬಾ ಕೃಷಿ ಜೀವಿಗಳಾಗಿದ್ದಾರೆ. ಮಳೆ, ಗಾಳಿ, ಬಿಸಿಲು ಎನ್ನದೆ, ಬೆವರು ಸುರಿಸಿ ಬದುಕನ್ನು ನೂಕುತ್ತಿರುವ ಮಹಿಳೆಯರು ಪರಿಸರದ ಶಿಶುಗಳಾಗಿದ್ದಾರೆ.

ಮಹಿಳೆಯರು ಬಿತ್ತನೆ ಮಾಡುವಾಗ, ನಾಟಿ ಮಾಡುವ ಸಂದರ್ಭದಲ್ಲಿ ಮತ್ತು ಕೂಲಿಯ ಸಂದರ್ಭದಲ್ಲಿ ನಾನಾ ಬಗೆಯ ಗೀತೆಗಳನ್ನು ಹಾಡುವುದುಂಟು. ಹಾಡುವರು ಮತ್ತು ಕೇಳುವವರಿಗೆ ತಾವು ಮಾಡುತ್ತಿರುವ ಕೆಲಸದ ಸಮಯ ಗೊತ್ತಾಗುವುದಿಲ್ಲವಂತೆ. ಹಾಡುಗಳು ಕೂಡ ಮುಗಿಯುವುದಿಲ್ಲ. ಇವರು ವಾಸ್ತವ ಸನ್ನಿವೇಶದ ಮೇಲೆ ಅನೇಕ ಹಾಡುಗಳು ಹೇಳುವುದುಂಟು.[೧೦] ಆದರೆ ನನ್ನ ಅಧ್ಯಯನದಲ್ಲಿ ಕೆಲವೊಂದು ಹಾಡುಗಳು ಈ ರೀತಿಯಲ್ಲಿ ಕಂಡುಬರುವುದು.

೧. **ಲಕ್ಷ್ಮಿ ಗಂಡ :** ಲಕ್ಷ್ಮಿ ಗಂಡನ ಮೇಲೆ, ಲಕ್ಷ್ಮಿ ಭತ್ತದ ಸಸಿ ಹಚ್ಚುವ ಸಮಯದಲ್ಲಿ ತನ್ನ ಪತಿರಾಯನನ್ನು ನೆನೆಪಿಸಿಕೊಂಡು, ಹಾಡುತ್ತಾಳೆ.

ಹೊಸ ಹೊಸ ಡಬ್ಬಿ
ಹನ್ನೆರಡು ಡಬ್ಬಿ
ಲಕ್ಷ್ಮಿಕ್ಕನ ಗಂಡ
ಕರಿಯಾಕ ಬಂದ
ಒಲ್ಲೆ ಒಲ್ಲೆಂದ
ಚೈನಾ ತಂದಾ
ಬುಗ್ ಬುಗ್ ಅಂದ
ಬುಗಡಿ ತಂದ
ಚಕ್... ಚಕ್.... ಅಂದಾ
ಮಣಿಸರ ತಂದಾ...
ಆಡೂರ ಕೋಳಿ ಕುಂತೈತಿ
ನಮ್ಮೂರಗ ಬುರ್ರ ಬುರ್ರ ಬಾರಿಸತ್ತೈತಿ
ನಮ್ಮ ಕೈಗೆ ಬಣ್ಣ
ಅವರ ಕೈಗೆ ಸುಣ್ಣ

೨. ನನ್ನ ಗಂಡ ಜಂಬಣ್ಣ

ಬಾರೆ ಬಾರೆ ಅಕ್ಕಾ
ನಿನ್ನ ಗಂಡ ಜಂಬಣ್ಣ ಪಕ್ಕಾ
ಬಳ್ಳಾರಿ ಪೇಟೆಗೆ ಹೋದನು
ನುಗ್ಗಿಕಾಯಿ ತಿಂದಾನೋ
ಸಂಜೆ ಹೊತ್ತಿನಲ್ಲಿ ಬುಡ ಬುಡಕ್ಕಾ ನನ್ನ ಮೇಲೆ ಬಿದ್ದಿನೋ
ಜೋಳದ ರೊಟ್ಟಿ ತಂದಿನಿ
ಅಡಕಲುದಾಗ ಇಂಜಿಗೆನಾ
ರೊಟ್ಟಿ ತಿನ್ನಲು ಬಾ ಗಂಡ
ಗುರ್ರ ಗುರ್ರ ಬಂದ ಬಿದ್ದಿನೋ
ಕೈ ನೋಡಿ ಹಿಜಿಗೇನಾ
ಸೊಂಟ ನೀಡಿ ಬೀಗಿದಾನ

೩. ಹೊಲದಾಗ ಬಾರೊ ತಮ್ಮ

ಒಂದು ಅಡಕಿ ಒಂದೆಲೆ
ತಗೊಂಡು ಹೊಲದಾಗ ಬಾರೋ ತಮ್ಮ
ಬಾರೋ ತಮ್ಮ ಹೋಲದಾಗ ಗಿಡನೋಡಾ
ಗಿಡ ನೋಡಾ, ಸಣ್ಣ ಎಲ್ಲೆ ನಮ್ಮ ತಮ್ಮ ಬಂದಾನಾ ಸಾಲಿಗೆ

ಬಂದನಾ ತಮ್ಮ ಗೋಧಿ ತೆನೆ ನೋಡಿ
ಗೋಧಿ ತೆನೆ ಸಣ್ಣ ನಮ್ಮ ಸಾಲಿಗೆ ಬಂದಾನೋ
ಬಂದಾನೋ ತಮ್ಮ..... ನನ್ನ ತಮ್ಮ ಬಂದಾನೋ.....

**ಗಾದೆಗಳು :** ಗಾದೆಗಳು ಸಮುದಾಯದ ಸಾಂಸ್ಕೃತಿಕ ಮೌಲ್ಯವನ್ನು ಬಿತ್ತರಿಸುವ ಮಾಧ್ಯಮವಾಗಿದೆ. ಜನಪದ ಬದುಕಿನ ಹೃದಯಾಂತರಾಳದಿಂದ ಬಂದಿರುವ, ಮಾತಿನ ಮುತ್ತಗಳಾಗಿವೆ. ಅಕ್ಷರ ಜ್ಞಾನವಿರದ ಶ್ರೀ ಸಾಮಾನ್ಯರ ನಾಲಿಗೆಯನ್ನು ಗ್ರಂಥವನ್ನಾಗಿ ಮಾಡಿಕೊಂಡಿದೆ. ಆದಕಾರಣ "ವೇದ ಸುಳ್ಳಾದರೂ ಗಾದೆ ಸುಳ್ಳಾಗುವುದಿಲ್ಲ".[೧೨] ಎಂಬ ಮಾತು ಅಕ್ಷರಶಃ ಸತ್ಯವಾಗಿದೆ. ಅಂತೆಯೆ ಜನಪದ ಸಂಸ್ಕೃತಿಯ ಅಕ್ಷಯನಿಧಿಗಳಾಗಿ ಅವರ ಬಾಳಿನಲ್ಲಿ ಬದುಕಿಕೊಂಡು ಬಂದಿವೆ. ಇವು ಜನಸಾಮಾನ್ಯರ ಬಾಳನ್ನು ರೂಪಿಸುತ್ತದೆ. ಸಮಾಜವನ್ನು ನಿಯಂತ್ರಿಸುತ್ತದೆ. ಮತ್ತು ಸಾಮಾಜಿಕ ಸಾಂಸ್ಕೃತಿಕ ಜೀವನವನ್ನು ರಕ್ಷಿಸುತ್ತದೆ. ಆದರೆ ಗಾದೆ ರೂಪ ಪಡೆಯಲು ನಿರ್ದಿಷ್ಟ ಕಾಲ ಮತ್ತು ಸಂದರ್ಭ ಇರುವುದಿಲ್ಲ. ಬದಲಾಗಿ ಇವರ ಬದುಕಿನ ಘಟನೆಗಳ ಹಿನ್ನೆಲೆಯ ಮೇರೆಗೆ ಬಂದಂತಹ ಉತ್ಪಾದನೆಗಳು. ಗಾದೆಗಳು ಸಾಮಾಜಿಕ ಜೀವನದ ದೋಷಗಳನ್ನು ತಿದ್ದುವುದು ಮತ್ತು ಇತರೆ ಸಮುದಾಯಗಳಂತೆ ಹರಡಿಕೊಂಡಿದೆ. ಸಂಸ್ಕೃತಿಯ ಬಿಂಬಕಗಳಾಗಿ ಮಾನವನ ಮೌಲಿಕ ಸ್ವರೂಪವನ್ನು ಗಾದೆಗಳು ಎತ್ತಿಹೇಳುತ್ತೇವೆ.

ಸಿಂಧೋಳ್ಳುರ ಗಾದೆಗಳು ಅವರ ವೃತ್ತಿ, ಸ್ವಭಾವ, ಸ್ವಾಭಿಮಾನ, ಸಾಮಾಜಿಕ ಮೌಲ್ಯ, ಆರ್ಥಿಕ ಸ್ಥಿತಿಗತಿ ಮತ್ತು ಆಡಳಿತ ಇತ್ಯಾದಿ ಮೌಲ್ಯಗಳನ್ನು ಎತ್ತಿ ಹಿಡಿಯುವಂತಹವುಗಳಾಗಿವೆ. ಯಾವುದೇ ಸಂದರ್ಭದಲ್ಲಿ ಮಾತನಾಡುವಾಗ ಪ್ರಾಸಂಗಿಕವಾಗಿ ಸಂಗ್ರಹಿಸಲಾಗಿದ್ದು, ಹಲವಾರು ಗಾದೆ ಮಾತುಗಳನ್ನು ಬಳಸುತ್ತಾರೆ. ಇವರ ಬಗ್ಗೆ ಇರುವ ಗಾದೆಗಳನ್ನು ಮುಖ್ಯವಾದ ಕೆಲವು ಗಾದೆಗಳನ್ನು ಮಾತ್ರ ವಿಶ್ಲೇಷಿಸಲಾಗಿದೆ.

೧. **ಕುಟುಂಬದಲ್ಲಿ ಬರುವಂತಹ ಗಾದೆಗಳು :** ಸಿಂಧೋಳ್ಳುರು ಕೂಡಿದ ಸಾಮಾಜಿಕ ಜೀವನ. ಅವರ ತಂದೆ-ತಾಯಿ, ಅಜ್ಜ-ಅಜ್ಜಿ, ಅಣ್ಣ-ತಮ್ಮ ಇತ್ಯಾದಿ ಸದಸ್ಯರೊಂದಿಗೆ ಸಹಜೀವನ ಮತ್ತು ವಾತ್ಸಲ್ಯ ಬಾಂಧವ್ಯಗಳ ಮೂಲಕ ಗುಡಾರಗಳನ್ನು ಕಾಣಬಹುದು. ಕುಟುಂಬದ ಯಜಮಾನನ್ನು ಅನುಸರಿಸ ಬೇಕಾಗುವುದು ಸದಸ್ಯರ ನಿಯಮ. ಹೀಗಾಗಿ ಗುಡಾರದಲ್ಲಿ ಏನಾದರೂ ಕಲಹಗಳು ಸಂಭವಿಸಿದಾಗ ಅಣ್ಣ-ತಮ್ಮಂದಿರು ಬೇರೆಯಾಗಲೇಬೇಕಾದ ವಿರಸ ಪ್ರಸಂಗಗಳೂ ಎದುರಾಗುತ್ತವೆ. ಅಂತಹ ಸಂದರ್ಭದಲ್ಲಿ ತಮ್ಮದೇ ಗಾದೆಗಳ ಮೂಲಕ ಪ್ರಾರಂಭವಾಗುತ್ತವೆ.

"ನೂರು ಮಂದಿ ಪಂಚಾಯಿತಿ ಕೂಡಬಹುದು
ಆದ್ರೆ ಮೂರು ಮೊಳಕಾಲ ಸೀರೆ ಎಂದಿಗೂ ಕೂಡಾದಿಲ್ಲ"

ಮನೆಯ ಹೆಂಡಿರರ ಸಲುವಾಗಿ ಒಡಕಾಗುವ ಕಹಿದಿನ ಒದಗಿ ಬರುತ್ತದೆ.

"ಭಿಕ್ಷೆ ಬೇಡಿ ಕೇಡದಾಕ್ಕಿಂತ ಬ್ಯಾರಿ ಇರಾದು ಛಲೋ" ಈ ಗಾದೆಯೂ ಭಿಕ್ಷೆಯನ್ನು ಕಾಡಿ ಬೇಡಿಕೊಂಡು ತನ್ನ ಜೀವನಕ್ಕೋಸ್ಕರ ಕಾಪಾಡಿಕೊಂಡು ಬಂದರೆ, ನಿರಂತರ ಭಿಕ್ಷೆ ಬೇಡಿ....... ಮನೆ

ಮಂದಿಗೆಲ್ಲಾ ಹೇಗೆ ಸಾಕಿಕೊಳ್ಳಬೇಕು ಎಂಬ ನಿರ್ಣಯ ಬಂದಾಗ, ತನ್ನ ಒಡೆಯರ ಸಮಕ್ಷಮದಲ್ಲಿ ಪಾಲು ಕೇಳುವುದುಂಟು. ಇದರಿಂದಾಗಿ ತನ್ನ ಮಡದಿಯೂ ಭಿಕ್ಷೆ ಬೇಡಿ ಕೆಡದಾಕ್ಕಿಂತ ಬ್ಯಾರಿ ಇರಾದು ಛಲೋ ಎಂದು ಸಲಹೆ ನೀಡುತ್ತಾಳೆ.[೨]

ಸಿಂಧೋಳ್ಳರಲ್ಲಿ ತಮ್ಮ ವೃತ್ತಿಗಳ ಆಧಾರದ ಮೇಲೆ ಗಾದೆಗಳು ದೊರೆಯುತ್ತದೆ. ಇವರಲ್ಲಿ ಸೋಮಾರಿ ವ್ಯಕ್ತಿಗಳು ಇದ್ದರೆ ಇವರನ್ನು ಕೈಲಾಗದವರು, ಜಿಪುಣರು, ಹೊಟ್ಟೆಬಡುಕರು ಮತ್ತು ಬೇಡಕಾಬರವನಲ್ಲ ಹೀಗೆ ತಮ್ಮ ದಾಟಿಗಳ ಮೂಲಕ ಹೇಳುತ್ತಾರೆ.

"ಕೈಲಾಗದವನ ಮೈಯೆಲ್ಲ ಪರಚುಕೊಂಡಾ
ಆಗಲಾರ್ದ ಮಿಂಡ ಸೂಳೆ ಮನೆಯಲ್ಲಿ ಕುಂತಾ"

ಎನ್ನುವ ಕೈಲಾಗದ ಗಂಡಸು ವಿಭಿನ್ನ ಮುಖಗಳ ಮೂಲಕ ಚಡಪಡಿಸುತ್ತಾರೆ. ಒಮ್ಮೊಮ್ಮೆ ಜಗಳಕ್ಕೆ ಬರುವುದುಂಟು. ಮತ್ತೆ ಸೂಳೆ ಮನೆಯಲ್ಲಿ ನಿರಂತರವಾಗಿ ಅಲ್ಲಿ ಇರುತ್ತಾನಂತೆ. ಇನ್ನು ಕೆಲವರು ಸಮಾಜದಲ್ಲಿ ಹೇಗೆ ನಟಿಸುತ್ತಾರೆಂದರೆ

"ಕುಂಡ್ಯಾಗ ಜಿಗಿಯಿಲ್ಲದವನು ಮನೆ ತುಂಬಾ ಹಾರ್ರ್ಯಾನನಂತೆ"

**ರಸಿಕತೆ :** ಸಿಂಧೋಳ್ಳುರು ತಮ್ಮಗೆ ಬೇಕಾದ್ದನ್ನು ಹಂಬಲಿಸಿ ಯಾವ ಸಂಕೋಚವಿಲ್ಲದೆ ಹೇಳಿ ಕೊಂಡಿರುವ ರಸಿಕತನದ ಅನೇಕ ಮಾತುಗಳು ಗಾದೆಗಳಲ್ಲಿ ವ್ಯಕ್ತವಾಗಿದೆ. ಅವರು ಗಂಡು-ಹೆಣ್ಣು ಸಂತೃಪ್ತಿ, ಶೃಂಗಾರ ಮಾತನ್ನಾಡಿದಾಗಲೇ ರಸಿಕತೆ ಕಾಣುವ ತತ್ವ ಇವರದಾಗಿದೆ.

"ಒಳಗೇನು ಮಾಡ್ತಿ ಅಂದ್ರ ಪೆಟ್ಟಿಗೆ ಮುಂದು
ಕುಂತು ಮಲಿ ನೋಡ್ಕೋತೀನಿ ಅಂದ್ನಂತೆ"

ಎಂದು ಸಂದರ್ಭನುಸಾರವಾಗಿ ಹೊಂದಿಸಿ ಮಾತಿನ ಮಾಧ್ಯದಲ್ಲಿ ಬಳಸುವ ಅರ್ಥದ ಸೊಗಡನ್ನು ಕಾಣುವರು. ಬಾಹ್ಯ ನೋಟದಲ್ಲಿ ರಸಿಕತೆಯೊಳಗೆ ಸೌಂದರ್ಯ ಅಡಗಿದ್ದರೂ ಒಳಅರ್ಥ ನೀಡುವ ಸೌಂದರ್ಯವಿದೆ. ಹೆಣ್ಣಿಗೆ ಮೊಲೆ ತಾಯ್ತನದ ಲಕ್ಷಣದ ಜೊತೆಗೆ ಸೌಂದರ್ಯದ ಸಂಕೇತವೂ ಆಗಿದೆ.

ಹೆಣ್ಣು ತನ್ನ ಬಯಕೆಗಳನ್ನು ಹತ್ತಿಕ್ಕಿ, ಗಂಡಸಿನ ಪ್ರಾಧಾನ್ಯತೆಯನ್ನು ಒಪ್ಪಿಕೊಂಡ ಸಮುದಾಯದಲ್ಲಿ ಅನುಭವಿಸಿರುವ ಯಾತನೆ ಅಷ್ಟಿಷ್ಟಲ್ಲ. ಆದರೆ ಆಕೆಯ ಮನಸ್ಸನ್ನು ಪೂರ್ಣವಾಗಿ ಕೊಂದುಹಾಕಲು ಸಾಧ್ಯವಿಲ್ಲ. ಸಂದಿಗ್ಧ ಪರಿಸ್ಥಿತಿಯಲ್ಲಿ ಸಿಕ್ಕಿದ ಹೆಣ್ಣೊಂದು ಹೊಸದನ್ನು ಆಲೋಚಿಸಿಯೂ ಆ ಕಡೆಗೆ ಹೋಗಲಾರದೆ, ಇದನ್ನು ಸಹಿಸಲಾರದೆ ಇಬ್ಬಂದಿಯಾಗಿ ನರಳಿದ ಜೀವನ, ಜೀವಂತವಾಗಿ ಕಂಡುಬರುವುದು.

"ಮಾಡೋ ಗಂಡ, ಸೋರೋ ಮನೆ
ಕಾಡೋ ಮಗ, ಕರಿಯೋ ಮಿಂಡ
ಹೋಗಲಾರೆ, ಇರಲಾರೆ!"

ಹೀಗೆ ನಾನಾ ಬಗೆಯ ವಿಚಾರಗಳನ್ನು ಹೇಳುವ ಗಾದೆಗಳು ಸಮುದಾಯಗಳ ಜೀವನ ಕ್ರಮವನ್ನು ಕಟ್ಟಿಕೊಡುವಲ್ಲಿ ಅತ್ಯಂತ ಮಹತ್ವದ ಪಾತ್ರವನ್ನು ವಹಿಸುತ್ತವೆ.

ಇನ್ನಿತರ ಗಾದೆಗಳು

"ಊರ ಸುಟ್ರು ಕಳ್ಳಿಗಿಡ ಊರ ಹೊರಗೆ ಅಂದ್ರೆ"

"ಕೋಣನ ಮುಂದೆ ಕಿನ್ನೋರಿ ಬಾರಿಸಿದ್ರೆ, ಹಾಂಗ"

"ಬ್ಯಾಸತ್ತು ಬ್ಯಾರಿಯಾದರೆ ಅತ್ತಿ ಪಾಲಿಗೆ ಸೊಸೆ ಬಂದಿದ್ದಳಂತೆ"

"ಭಿಕ್ಷೆಯ ದುಡ್ಡು ತಾಯಿ ಮಕ್ಕಳು ಅಗಲಿಸ್ತಂತೆ

"ಹೇಡಿ ಬೆನ್ನ ತಟ್ಟಬಾರ್ದು, ಸೋಮಾರಿ ಲಗ್ನಕ ಹೋಗಬಾರ್ದು"

"ಭಿಕ್ಷೆ ಕೂಳು ತಿಂದು ಊರು ಉಸಬಾರಿ ಮಾಡದ್ರಂತೆ"

"ಅಂಗಾಲಿಗೆ ಹೇಸಕಿಯಿಲ್ಲ, ಹೊಟ್ಟೆಗೆ ನಾಚಿಕೆಯಿಲ್ಲ

"ಆರಾಣೆದೊಂದು ಸೀರೆ, ಮೂರಾಣದೊಂದ ಕುಬ್ಸ;
ಹೋದಾಗ ಡಿಂಗ್ ಡಾಂಗ್! ಬರ್ರಾಗ ಚುಂಗ್ ಚಾಂಗ್"

"ಮಾತು ಬೆಳ್ಳಿ ಮೌನ ಬಂಗಾರ"

"ದುಡ್ಡ ದೊಡ್ಡಪ್ಪನ ಕೆಡಿಸ್ತು, ಭಿಕ್ಷೆ ದುಡ್ಡು ತಾಯಿ ಮಕ್ಕಳ್ನ ಅಗಲಿಸ್ತು"

"ಈರಣ್ಣ ಬಲು ಶೂರ, ಈರುಳ್ಳಿ ಬಲು ಬಾರ"

"ಕೊಡೋ ಶಿವ ಅಂದರೆ, ದುಡಿದು ಉಣ್ಣವರ ಎಂಜಲು ತಿನ್ನು ಅಂದ"

"ಪರ ಹೊಲ ಮಾಡಬೇಡ, ಪಟ್ಟಣದ ಹೆಣ್ಣು ಮದುವೆಯಾಗಬೇಡಾ"

"ಆಕಳು ಮೇಲೆ ಕುಂದ್ರ ಬ್ಯಾಡ, ಹಂದಿ ಮ್ಯಾಲೆ ಕುಂತು ಬೀಳ ಬ್ಯಾಡ"

"ಭಿಕ್ಷುಕ ಮೂರು ಕಾಸು ಸಂಪಾದನೆ ಮಾಡಿ ಮಾದಿಗನಿಗೆ ಸಾಲ ಕೊಟ್ಟಂತೆ"

ಹೀಗೆ ಗಾದೆಗಳು ಸಂಸ್ಕೃತಿಯ ಮೇಲೆ ಬೆಳಕು ಬೀರುವಲ್ಲಿ ಮತ್ತು ಅವರ ಬಾಳಿನ ವಾಸ್ತವ ಚಿತ್ರಣ ತೋರಿಸುವ ದಿಕ್ಸೂಚಿಗಳಂತಿವೆ.

ಒಗಟುಗಳು : ಮೌಖಿಕ ಪರಂಪರೆಯ ಸಾಹಿತ್ಯದಲ್ಲಿ ಒಗಟುಗಳು ವಿಶಿಷ್ಟ ಸ್ಥಾನವನ್ನು ಪಡೆದುಕೊಂಡಿದೆ. ಆದರೂ ಗಾದೆ ಮತ್ತು ಒಗಟುಗಳು "ಒಂದೇ ನಾಣ್ಯದ ಎರಡು ಮುಖಗಳು."[೧೩] ಜೀವನಾನುಭವ ಗಾದೆಗಳು ಜೀವಾಳವಾದರೆ, ಬುದ್ಧಿ ಚತುರತೆ ಮತ್ತು ಪಾಂಡಿತ್ಯ ಪೂರ್ಣತೆ ಒಗಟುಗಳ ವೈಖರಿಯಾಗಿದೆ. ಒಗಟುಗಳು ಗಾದೆಗಳಂತೆ ಎಲ್ಲರಿಗೂ ನಿಲುಕದ ಅಪೂರ್ವ ಸಂಪತ್ತು. ಒಗಟುಗಳು ನಮ್ಮ ಜನ ಜೀವನದ ಬಾಳಿನ ಕೌಶಲ್ಯದೊಂದಿಗೆ ತಮ್ಮೊಂದಿಗೆ ಹುಟ್ಟಿಕೊಂಡಿವೆ. ಸಮಾಜದ ಹಲವಾರು ಸಂಗತಿಗಳನ್ನು ಮತ್ತು ವಸ್ತುಗಳನ್ನು ರಹಸ್ಯವೆಂಬಂತೆ ರಕ್ಷಿಸುತ್ತದೆ. ಜೀವನದ ವೈವಿಧ್ಯತೆಯನ್ನು ಪ್ರಶ್ನೆಯ ಮೂಲಕ, ರಹಸ್ಯದ ಮೂಲಕ ಹಿಡಿದಿಟ್ಟಿರುತ್ತದೆ. ಸಾಮಾಜಿಕ ರಹಸ್ಯ, ವಿನೋದ ಮತ್ತು ಗಂಭೀರ

ಅಂಶಗಳು ಒಗಟುಗಳಲ್ಲಿ ಅಡಗಿಕೊಂಡಿರುತ್ತವೆ. ಆದಕಾರಣ ಗಾದೆ ಮತ್ತು ಒಗಟುಗಳು ಇವು ಪರಸ್ಪರ ಪೂರಕವಾದವುಗಳು. ತಮ್ಮ ಮಾತಿನ ಶಿಲ್ಪದಲ್ಲಿ ತಮ್ಮದೇ ಲಕ್ಷಣಗಳನ್ನು ಹೊಂದಿದ್ದರು. ಗಾದೆ ಒಗಟಿನಂತೆ ಒಗಟು ಗಾದೆಯಂತೆ ಕಾಣುವುದು ಸಹಜ.

ಒಗಟುಗಳು ಸರಳವಾದ ಪ್ರಶ್ನೋತ್ತರ ರೂಪದಲ್ಲಿರುತ್ತದೆ. ವೈಚಾರಿಕ ದೃಷ್ಟಿಯಿಂದಲೂ ಸ್ವಾದಭರಿತವಾದ ಪದಪುಂಜಗಳು ಕುರಿತು ವಿಚಾರ ಮಾಡುವುದು ಗಮನಾರ್ಹ. ಪದಪುಂಜಗಳು ಅರ್ಥವಾಗಿಲ್ಲವೆಂದರೆ, ಆತನಿಗೆ ಒಗಟು ಇನ್ನು ಅರ್ಥವಾಗಿಲ್ಲ ಮತ್ತೊಮ್ಮೆ ಹೇಳಿ, ಪ್ರಶ್ನೆಯ ಒಗಟು ಬಿಡಿಸುವ ಕ್ರಿಯೆಯಲ್ಲಿ ಅದರ ಉತ್ತರ ಅನಾವರಣಗೊಳಿಸುವುದು ಕಂಡುಕೊಳ್ಳಬೇಕು. ಇದೊಂದು ಕಲಾತ್ಮಕ ರಸಿಕ ಸಂವಾದವಾಗಿ, ಜನಸಾಮಾನ್ಯರ ಬುದ್ಧಿವಂತಿಕೆಯ ಮತ್ತು ಶಬ್ದ ಚಮತ್ಕಾರದ ವಿನೋದ ವಿಡಂಬನೆಗಳನ್ನು ಎತ್ತಿ ಹಿಡಿಯುತ್ತವೆ. ಒಗಟಿನ ಉತ್ತರ ನೇರವಾಗಿರದೆ ಪರೋಕ್ಷವಾಗಿ ಗೌಪ್ಯವಾಗಿ ರುವುದು ಇದರ ಗುಣಲಕ್ಷಣ. ಎಸೆದ ಒಗಟಿಗೆ ತಕ್ಷಣ ಉತ್ತರ ಸಿಗುವಂತಿದ್ದರೆ ಅದರ ಸ್ವಭಾವಕ್ಕೆ ಸೋತೆ ಎಂದೇ ಹೇಳಬೇಕು. ಒಗಟು ಕೇಳಿಸಿಕೊಂಡವನು ಅದಕ್ಕೆ ಉತ್ತರ ನೀಡಲು ಎರಡು ನಿಮಿಷದಲ್ಲಾದರೂ ತಲೆಕೆಡಿಸಿಕೊಂಡು ಅದರ ರಚನೆಯ ಕುರಿತು ಯೋಚಿಸಿವಂತಾಗಬೇಕು. ಪರಸ್ಪರ ಅವುಗಳಿಗೆ ಜೀವನದಲ್ಲಿ ಪ್ರಕೃತಿಯಲ್ಲಿ, ಕೌಟುಂಬಿಕ ಪರಿಸರದಲ್ಲಿ ತಮ್ಮ ಜೀವನೋಪಾಯದ ವೃತ್ತಿಗಳಲ್ಲಿ ಇತ್ಯಾದಿಗಳ ಮೂಲಕ ಗುರುತಿಸಿ, ಸರಿಯುತ್ತರವನ್ನು ಕಂಡುಕೊಳ್ಳಬೇಕು. ಆದ್ದರಿಂದಲೇ ಇದೊಂದು ಭಾದಿಕ ಚಮತ್ಕಾರವೆನ್ನುವುದು ಮನುಷ್ಯನ ಬುದ್ಧಿಯ ಚಾಣಕ್ಷತೆಗೆ ಒಗಟು ಒಂದು ಸವಾಲ್.

ಸಿಂಧೋಳ್ಳು ಸಮುದಾಯದಲ್ಲಿ ಒಗಟುಗಳು ಕಂಡುಬರುತ್ತವೆ. ಅವರು ರಾತ್ರಿ ಬೆಳದಿಂಗಳಲ್ಲಿ ಕಾಲಕಳೆಯುವಾಗ ಕುಳಿತು ಒಬ್ಬ ಹೇಳುವುದು ಬೇರೆಯರು ಕೇಳಿ ಅದರ ಅರ್ಥಗೊತ್ತಾದೊಡನೆ ನಕ್ಕು ಆನಂದಿಸುವರು. ಅಲ್ಲಿ ಭಾಗವಹಿಸುವ ಇತರರಿಗೂ ಮನರಂಜನೆಯ ಲಾಭ ಇದ್ದೇ ಇರುತ್ತದೆ. ತಾವು ಒಗಟು ಹೇಳುವ ಪ್ರಕೃತಿ, ಸಾಮಾಜಿಕ ಮತ್ತು ಸಾಂಸ್ಕೃತಿಕ ಅಂಶಗಳು ಅನುಭವದಲ್ಲಿ ಪರಿಪಕ್ವಗೊಂಡಂತವು. ಆ ಮೂಲಕ ಸಿಂಧೋಳ್ಳುರು ಒಗಟಿನ ಸೃಷ್ಟಿಯ ಸಾಮಾರ್ಥ್ಯವನ್ನು ಗುರುತಿಸಲು ಸಾಧ್ಯ. ಸಿಂಧೋಳ್ಳು ಸಮುದಾಯದ ಕೆಲವು ಒಗಟುಗಳನ್ನು ಕೆಳಗೆ ನೀಡಲಾಗಿದೆ.

ಮುತ್ತಿಕ್ಕಿದರೆ ಮೂಗು ಕಚ್ಚಿದಳು (ಹಲಸಿನ ಹಣ್ಣು)

ಗುಡಿ ಹಿಂದೆ ಗುಂಡಗಲ್ಲ ಬಿದ್ದಾದ (ತುರುಬು)

ಹಳ್ಳ ತುಂಬ ಕುರಿ ಹೆಜ್ಜೆ (ಚುಕ್ಕೆಗಳು)

ಮುತ್ತಿನಂಥ ಕೋಳಿ ಮುಳ್ಳಾಗೆ ಮೊಟ್ಟೆ ಇಕ್ಕದೆ (ನಿಂಬೆಹಣ್ಣು)

ಕಂಬ ಕಂಬದ ಮೇಲೆ ಗುಂಬ (ಹೊಟ್ಟೆ)

ಗುಂಬದ ಮೇಲೆ ಬಾಗೂರು (ಬಾಯಿ)

ಬಾಗೂರಿನ ಮೇಲೆ ಮೂಗುರು (ಮೂಗು)

ಮೂಗೂರಿನ ಮೇಲೆ ಕಣ್ಣೆಗಾಲ (ಕಣ್ಣು)

ಕಣ್ಣೇಗಾಲದ ಮೇಲೆ ಕರಿಯ ಪಟ (ಕೂದಲು)

ಅವ್ವನ ಸೀರಿ ಮಡಿಸಾಕ ಬರಾಲ್ಲ, ಅಪ್ಪನ ರೊಕ್ಕ ಎಣಿಸಾಕ ಬರಾಲ್ಲ (ಆಕಾಶ ಮತ್ತು ನಕ್ಷತ್ರ)

ಕಾಲುಂಗರ ತೊಟ್ಟವಳು ಮೇಲೂ ಹೋಗ್ತಾಳೆ, ಕೆಳಗೂ ಬರ್‍ತಾಳೆ ಏನು? (ಒನಕೆ)

ಹೆಂಡತಿ ಹತ್ರ ಕೆಂಪು, ಗಂಡಸು ಹತ್ರ ಬಿಳಿ (ಕುಂಕುಮ ಮತ್ತು ವಿಭೂತಿ)

ಒಂದು ಕೋಡಿನ ಎತ್ತು ಅದೇ ಊರು ಸುತ್ತೈತಿ (ಬೀಸುವ ಕಲ್ಲು)

ನಿಂತರೆ ಕೈ ಮುಗಿಯುತ್ತದೆ, ಕುಂತರೆ ನಗಾಡ್ತದೆ (ಶಿಶ್ನ)

ಬಾಯ್ನೇ ಉಂಡು ಬಾಯ್ನೆ ಹೇಲ್ತಾದ (ಬಾವುಲಿ)

ಸುತ್ತಿ ಸುತ್ತಿ ಬರಬ್ಯಾಡ ನನಗಾಗಿ ಮ್ಯಾಲೊಬ್ಬ ಕುಂತಾನ ನಿನಗಾಗಿ (ಮೀನು, ಮೀನುಗಾರ)

ಕತ್ತಲ ಆದ ಮ್ಯಾಲೆ ಮೂಲೆಗೋಗಿ ಕರೆಪ್ಪ ಕುಂತಾನ (ರೊಟ್ಟಿ ಹಂಚು)

ಕರಿಸೀರೆ ಉಟ್ಟು ಕಾಲುಂಗರಿಟ್ಟು ಸರ್‍ರನೆ ಹೋಗಿ ಭರ್‍ರನೆ ಬರ್‍ತಾದ (ಒನಕೆ)

ರಪ್ಪಂತ ಬಿತ್ತು ಕುಬಸ ಹರಿತು ಮಲಿ ತೆರಿತು (ಹುಣಸಿ ಹಣ್ಣು)

ಎರಡು ಗುಡಾರದ ಮ್ಯಾಲೆ ಸಂಪನಿದ್ದಿ (ಮೊಲೆ)

ಏರಿ ಹಿಂದೆ ಕೆಂದಿತ್ತು ಬಾಲ ಬೀಸುತ್ತದೆ (ಛತ್ರಿ)

ಅಟ್ಟಾದ ಮೇಲೆ ಪುಟ್ಟಕ್ಕವಳೆ, ಮುಟ್ಟಿದ್ರೆ ಗಾಯ ಅಂತಾಳೆ (ಕಡಜ)

ಬೆಳ್ಳಿ ಹಕ್ಕಿ ಬಾಲದಲ್ಲಿ ನೀರು ಕುಡಿತದೆ (ದೀಪ)

ಜುಟ್ಟು ಹಿಡಿದು ನೆಲಕೆ ಬಡಿ ನೀರು ಕುಡಿ (ಎಳೆನೀರು)

ಮಡಿಕೆಯಲ್ಲಿ ಕುಡಿಕೆ, ಕುಡಿಕೆಯಲ್ಲಿ ಶಂಖ ಶಂಖದಲ್ಲಿ ಸಮುದ್ರ (ತೆಂಗಿನಕಾಯಿ)

ಸರಸರನೆ ಬರುವ್ಹೋಳ, ಜಿಲ್ಲೆ ಸರದವಳೆ ನಿಂತ ಮಾತಾಡೆ ನಂತುಕಾರದ ಹುಡುಗಿ (ನಾಗರಹಾವು)

ನೀ ಜಾಣ ಬಲು ಜಾಣ ಕುಬುಸದ ಗಳಿಗಿ ಮಂಗಾ ಜಾಣ (ಹೋಳಗಿ)

ಕೆಂಪೆತ್ತ ಕೆರ್‍ಯಾಗ ಈಸತಾದ (ಕರಚಿಕಾಯಿ)

ನಿನ್ನ ಹಿಡ್ಡು ನೋಡು ನಿನ್ನ ತಿಂದ ನೋಡು (ಪುಂಡಿಪುಲ್ಯೆ)

ಉದ್ದನಕಿ ಮಾತ್ರ ಸೈ (ಕಬ್ಬು)

ಬಣ್ಣದ ಸೀರೆ ಉಟ್ಟು ಮಣ್ಣಾಗ ಕುತಾಳ (ಗೆಣಸು-ಗಜ್ಜರಿ)

ಸುತ್ತ ಬೇಲಿ ನಡುವ ಕೀಲಿ (ಡಾಬು)

ಜಂಬಲಮ್ಮ ಮುಖಕ್ಕೆ ಚಿನ್ನದ ಬೀಗ (ನತ್ತು)

ಜಯಣ್ಣ ಮಗಳು ಎಂಥಾ ಚೆಲುವಿ ತೊಗಲ ತೊಟ್ಟಾಗ ತೂಗಾಡುವಾಕಿ (ಬೆಂಡೋಲಿ)

ಗಲ್, ಗಲ್, ಗಲ್ಲಾಸಿ ನೋಡ್ತಾರ ಮೆತ್ತಾನ ಪೋರಿಗಿ ಒತ್ತಿ ನೋಡ್ತಾರ (ಬೆಣ್ಣೆ)

ನಿಲಗಿ ಎತ್ತು ನಿಗರಿಸಿದು (ಛತ್ರಿ)

ಉಡದಾರ ಕೆಳಗೆ ಉದ್ದಂದು ಜೋತಡ್ಯಾದ (ಕೀಲಿ ಕೈ)

ಮುತ್ಯಾನ ತುಣ್ಣಗೆ ಮುತ್ತ ಪೋಣಿಸಾರ (ಮೆಕ್ಕಿತನಿ)

**ದೇವರ ಮೇಲಿನ ಪದಗಳು :** ಸಿಂಧೋಳ್ಳುರ ಬದುಕಿನಲ್ಲಿ ತಮಗೆ ನಿತ್ಯವೂ ನೆರವಾಗುವುದರ ಬಗ್ಗೆ ಕೃತಜ್ಞತೆಯ ಭಾವನೆಯಿದ್ದು, ಅದರಲ್ಲಿ ದೈವತ್ವವನ್ನು ಕಾಣುತ್ತಾರೆ. ನಮ್ಮನ್ನು ಭೂಮಿ ಮೇಲೆ ತಂದ, ಕೊನೆಗೆ ತನ್ನ ಒಡಲಿನಲ್ಲೆ ಸೇರಿಸಿದ್ದಾಳೆ.[೧೯] ತಾಯಿ ನಮಗೆ ಭಿಕ್ಷೆಯನ್ನು ಉಣ್ಣಲು, ಉಡಲು ನೀಡುವ ತಾಯಿ ಕುಲದೇವತೆಗಳೆ ಎಂದು ಕರೆಯಲಾಗಿದೆ. ಹಾಗೆಯೇ ಭಿಕ್ಷೆಯಲ್ಲಿ ಕುಲದೇವತೆಗಳಾದ ಈರನಾಗಮ್ಮ, ದುರ್ಗಮ್ಮ ಮೈಲಮ್ಮ ಇವರುಗಳ ಮೇಲಿನ ಹಾಡುಗಳು ಹೇಳುವುದುಂಟು. (ಹಾಡುಗಳು ಅನುಬಂಧದಲ್ಲಿ ನೋಡಿರಿ).

**೯. ಕಲೆ**

ಮಾನವ ತನ್ನ ಬುದ್ಧಿ ಶಕ್ತಿಗೆ ತೋಚಿದಂತೆ, ಕಲೆಗೆ ಒಂದು ರೂಪನೀಡಿ ಅದರಿಂದ ಉಂಟಾಗುವ ಸೌಂದರ್ಯಾನುಭವವನ್ನು ತಾನೇ ನೋಡಿ ಆನಂದಿಸುತ್ತಿದ್ದಿರಬೇಕು. ಇತರರಿಗೆ ತೋರಿಸಿದಾಗ ಅವುಗಳ ಬಗೆಗೆ ಮೆಚ್ಚುಗೆ ವ್ಯಕ್ತಪಡಿಸಿದಾಗ, ಅಭಿಮಾನ ಪಡುತ್ತಾರೆ. ಸೌಂದರ್ಯ ಸೃಷ್ಟಿಸುವ, ಸೃಷ್ಟಿಗೊಂಡಿದ್ದನ್ನು ಕಂಡು ಆನಂದಿಸುವ ಗುಣ ಮಾನವರಲ್ಲಿ ಎಂದಿನಿಂದಲೋ ಸಂಸ್ಕಾರ ರೂಪವಾಗಿ ಬಂದಿದೆ. ನಿಜವಾದ ಸೌಂದರ್ಯ ಸೃಷ್ಟಿಯಲ್ಲಿರುವುದಿಲ್ಲ ದೃಷ್ಟಿಯಲ್ಲಿರುತ್ತದೆ. ಈ ಹಿನ್ನೆಲೆಯ ಮೇರೆಗೆ ಆದಿ ಮಾನವರ ಸೌಂದರ್ಯ ದೃಷ್ಟಿಗನುಗುಣವಾಗಿ ಕಲೆಗಳು ರೂಪಗೊಂಡವು. ಆಯಾ ಸಮುದಾಯದ ಮಾನವರ ಸೌಂದರ್ಯ ದೃಷ್ಟಿ ಆಯಾ ಕಲೆಗಳಾದವು. ಉದಾಹರಣೆಯಾಗಿ ಬುಡುಕಟ್ಟು ಸಮುದಾಯಗಳ ಬೇಟೆಯನ್ನು ಹೇಗೆ ಯಶಸ್ವಿಗೊಳಿಸಬೇಕು ಎಂಬುದನ್ನು ಬೇಟೆಯ ಚಿತ್ರಗಳನ್ನು ಬಿಡಿಸಿದರು. ಮಾನವನು ಯಾವ ದಿಕ್ಕಿನಿಂದ ನುಗ್ಗಬೇಕು, ಹಿಂಬಾಲಿಸಬೇಕು, ಎಲ್ಲೆಲ್ಲಿಂದ ಓಡಿ ಬರಬೇಕು. ಯಾವ ಮರೆಯಲ್ಲಿ ಯಾವ ಪ್ರಯೋಗ ಮಾಡಬೇಕು ಮತ್ತು ಪ್ರಾಣಿಗಳ ಯಾವ ಭಾಗಗಳ ಮೇಲೆ ದಾಳಿ ಮಾಡಬೇಕು ಇತ್ಯಾದಿ ವಿವರಗಳನ್ನು ಬಿಡಿಸಿ ಅದರ ಮೂಲಕ ಬೇಟೆಯ ಕ್ರಮವನ್ನರಿತು ಬೇಟೆಗೆ ಹೊರಡುತ್ತಿದ್ದರು. ಕಲೆ ಇಲ್ಲಿ ಬದುಕಿಗಾಗಿ ಪಾಠವಾಗಿ ಪರಿವರ್ತನೆಯಾಗಿರುವುದನ್ನು ಕಾಣಬಹುದು.[೨೦] ಈ ಕಲೆಗಳು ಅಂದಿನ ಜನಗಳ ಮನೋಧರ್ಮವನ್ನು, ವ್ಯಕ್ತಿತ್ವವನ್ನು ಪ್ರತಿಬಿಂಬಿಸುತ್ತದೆ. ಹೀಗೆ ಯಾವುದೇ ಕಲೆಯ ಆವಿಷ್ಕಾರಕ್ಕೆ ಮಾನವರ ಬಯಕೆ, ಅನಿಸಿಕೆ ಮತ್ತು ಜೀವನಾಭವಗಳೆ ಆಕರ ಪ್ರೇರಕ.

ಬುಡಕಟ್ಟು ಸಮುದಾಯಗಳು ಆಧುನಿಕತೆಯ ಪ್ರಭಾವಕ್ಕೆ ಒಳಗಾಗದೇ ಇರದಿದ್ದರೂ ತಮ್ಮದೇ ಆದ ಕಲೆಗಳನ್ನು ಕಟ್ಟುನಿಟ್ಟಿನಿಂದ ತಲೆಮಾರಿನಿಂದ ತಲೆಮಾರಿಗೆ ಸಾಗಿಸುತ್ತಲೇ ಬಂದಿದ್ದಾರೆ. ಅದಕ್ಕೆ ಇತಿಹಾಸವಿದೆ. ಹಳೆಯ ಕಲೆಗಳು ಪರಿವರ್ತಿಸಿಕೊಂಡಿರುವ ಮತ್ತು ಆಧುನಿಕತೆಯ ಸಂಪ್ರದಾಯದ ಕಲೆಗಳು ಎಂದಿಗೂ ಗುರುತಿಸುತ್ತವೆ. ಕಾಂಕ್ರೀಟ್ ಸಂಸ್ಕೃತಿಯು ನಾಡುಗಳನ್ನೆಲ್ಲಾ ಆವರಿಸಿಕೊಳ್ಳತೊಡಗಿದಂತೆ ಬುಡಕಟ್ಟಿನ ಕಲೆಗಳು ನೈಸರ್ಗಿಕ ನಿಯಮದಂತೆ ಅನೇಕ ವಸ್ತುಗಳ ಮೇಲೆ ಚಿತ್ರಗಳನ್ನು ಬಿಡಿಸಿದ್ದಾರೆ.

ತಮ್ಮ ಸುತ್ತ ಕಂಡು ಬರುವ ಪ್ರಕೃತಿಯಲ್ಲಿನ ಮರ, ಗಿಡ, ಪಶು, ಪಕ್ಷಿ ಅಲ್ಲದೇ ಮನುಷ್ಯನ ವಿವಿಧ ಬಗೆಯ ಚಿತ್ರಗಳನ್ನು ಬಿಡಿಸಿದ್ದಾರೆ. ನಿಸರ್ಗದತ್ತವಾದಂತಹ ಬಣ್ಣಗಳು ದೊರೆಯುವುದರಿಂದ ಹಲಿಗೆ ಮೇಲೆ, ಕಟ್ಟಿಗೆ ಮೇಲೆ, ಮಣ್ಣಿನ ಗೋಡೆ, ಕೌದಿ ಬಟ್ಟೆ ಇತ್ಯಾದಿ ವಸ್ತುಗಳ ಮೇಲೆ ಚಿತ್ರಗಳನ್ನು ಬಿಡಿಸಿದ್ದಾರೆ. ಅದು ಸಾಮಾಜಿಕ, ಧಾರ್ಮಿಕ ಮತ್ತು ಮನರಂಜನೆ ಅಲ್ಲದೇ ಜೀವನೋಪಾಯದ ಹಿನ್ನಲೆಯಲ್ಲಿ ಹುಟ್ಟಿಕೊಂಡು ಬಂದಿವೆ.

ಆಧುನಿಕ ದಿನಗಳಲ್ಲಿ ಸಿಂಧೋಳ್ಳರಿಗೂ ಕಲೆಯ ಪ್ರಜ್ಞೆಗೂ ಇರುವ ಸಂಬಂಧ ನಿಕಟವಾದದು. ಅವರ ದೃಷ್ಟಿಯಲ್ಲಿ "ಕಲೆಯೂ ಕುಲದೇವತೆಗಳ ಪೆಟ್ಟಿಗೆಯ ಸೃಷ್ಟಿಯ ಮೂಲಕಾರಣವಂತೆ." ಇದರ ಪ್ರೇರಣೆ ಅವರ ಕಲೆಗಳಲ್ಲಿ ತೋರುತ್ತದೆ. ತಾವು ವಾಸಿಸುವ ಕಡೆಯಲ್ಲಿ ವೈವಿಧ್ಯಮಯವಾದ ಕಲೆಯ ರೂಪಕಗಳು ಇರುತ್ತವೆ. ತಾವು ಸೃಷ್ಟಿಸುವ ಕಲೆಯೂ ಅದು ಹೀಗೆಯೇ ಇರಬೇಕು ಎಂದು ಆಶಿಸಿದರು. ಅದರಂತೆ ಅದನ್ನು ಪಡೆಯಲು ಇಂದಿಗೂ ಇಚ್ಛಿಸಿದವರು. ಕಲೆಯ ಸೃಷ್ಟಿ ವಸ್ತುವಿನಲ್ಲಿಯೂ ಆ ದೃಷ್ಟಿಯನ್ನು ಬೆಳಸಿಕೊಂಡವರು. ಅವರು ಪೆಟ್ಟಿಗೆಯ ಚಿತ್ರ, ದೇವರ ಬಾಗಿಲು, ಗುಡಿಸಲಿನ ಗೋಡೆಯಾಗಲಿ, ಮಣ್ಣಿನ ಮಡಕೆಯಾಗಲಿ ಮತ್ತು ಕೌದಿ ಇತ್ಯಾದಿಗಳ ಮೇಲೆ ಸುಂದರವಾದ ಚಿತ್ರಗಳನ್ನು ಸೊಗಸಾಗಿ ಬಿಡಿಸುತ್ತ ಬಂದಿದ್ದಾರೆ. ತಮ್ಮದೇ ಆದ ಚಿತ್ರ ಜಗತ್ತನ್ನು ಈ ಅಧ್ಯಯದಲ್ಲಿ ತೋರಿಸಿದ್ದಾರೆ.

**೧. ಗೋಡೆಯ ಮೇಲೆ ಬಣ್ಣದಿಂದ ಬರೆದ ಚಿತ್ರಗಳು :** ಸಿಂಧೋಳ್ಳರ ಆಶ್ರಯ ಮನೆಗಳು ಇದ್ದಡೆಯಲ್ಲೆಲ್ಲಾ ಸಾಮಾನ್ಯವಾಗಿ ಬಣ್ಣದ ಚಿತ್ರಗಳು ಗೋಚರಿಸುತ್ತವೆ. ಇದು ಕಲೆಗೂ ಇವರಿಗೂ ಇರುವ ಸಂಬಂಧವನ್ನು ತೋರಿಸುತ್ತದೆ. ಅವರ ಸೌಂದರ್ಯ ಪ್ರಿಯತೆಗೆ ಇಂದಿಗೂ ಸಾಕ್ಷಿಯಾಗಿದೆ. ತಾವು ಇನ್ನೊಬ್ಬರಂತೆ ಮನೆಯ ಕಲಾತ್ಮಕವಾಗಿ ಇಟ್ಟುಕೊಳ್ಳಬೇಕೆಂಬ ಅರಿವು ಮೂಡಿರುವುದು ಗಮನಾರ್ಹ. ಬಹುತೇಕ ಸಿಂಧೋಳ್ಳರು ತಮ್ಮ ಮನೆಯ ಗೋಡೆಗಳ ಮೇಲೆ ವಿವಿಧ ಬಗೆಯ ಬಣ್ಣ ಬಣ್ಣದ ಚಿತ್ರಗಳನ್ನು ಆಕರ್ಷಕವಾಗಿ ಬರೆದಿರುತ್ತಾರೆ. ಅವುಗಳಾದ 'X', 'O' ಕಂಡು ಬಂದರೆ ಹುಲಿ, ಸಿಂಹ, ಪಕ್ಷಿ ಮುಂತಾದ ಪ್ರಾಣಿಗಳ ಚಿತ್ರಗಳು ಕಂಡು ಬರುವುದು. ಹೂವಿನ ಬಳ್ಳಿ, ಮರ ಗಿಡಗಳಂತಹ ಸುಂದರ ಚಿತ್ರಗಳು ಅಲ್ಲಿ ಕಾಣಸಿಗುತ್ತವೆ. ಇವುಗಳಲ್ಲದೇ ದೇವಸ್ಥಾನಗಳಲ್ಲಿ ಬಿಲ್ಲು, ಬಾಣ, ತ್ರಿಶೂಲ, ಬುರ್ರ ಬುರ್ರವಾದ್ಯ ಮತ್ತು ಬುಟ್ಟಿ ಚಿತ್ರ ಬಿಡುಸುತ್ತಾರೆ. ತಮ್ಮ ಭಿಕ್ಷಾಟನೆಯಿಂದ ಇಲ್ಲಿನ ಚಿತ್ರಗಳು ಪ್ರತೀಕವಾಗಿ ಇವರನ್ನು ಗುರುತಿಸಬಹುದು.

**೨. ಪೆಟ್ಟಿಗೆಯ ಮೇಲೆ ಬಿಡಿಸಿದ ಚಿತ್ರಗಳು :** ಬಹುಶಃ ಇದು ಅತ್ಯಂತ ಪ್ರಾಚೀನ ಚಿತ್ರಕಲಾ ಮಾಧ್ಯಮ ಎಂದು ತೋರುತ್ತದೆ. ಪ್ರಾಚೀನ ಕಾಲದ ಪೋತರಾಜ ಗರಗಸ ಹಿಡಿದಿರುವ ಚಿತ್ರಗಳು ಅಮ್ಮನ ಪೆಟ್ಟಿಗೆಗಳ ಮೇಲೆ ರಾರಾಜಿಸುತ್ತಿವೆ. ಹಾಗೂ ಜನಗಳಿಗೆ ತೋರಿಸಿಕೊಳ್ಳುತ್ತಾ ಬಂದಿದ್ದಾರೆ. ಇದಕ್ಕೆ ಪೆಟ್ಟಿಗೆ ಚಿತ್ರ ಕಲೆಯೂ ಸಾಕ್ಷಿಯಾಗಿ ನಿಲ್ಲುತ್ತದೆ. ಇವರು ಪ್ರಕೃತಿಯ ನಡುವೆಯೇ ಚಿತ್ರಣಗಳಾದ. ಈಚಲಮರ, ಪ್ರಾಣಿಗಳಾದ ಒಂಟೆ ಮತ್ತು ಮಾಂಸ ಮಾರುವ ವ್ಯಕ್ತಿ ಜೊತೆಯಲ್ಲಿ ಕಾಲ ಕಳೆಯುತ್ತಿರುವ ದೃಶ್ಯಗಳು ಅಂದಿನ ಕೃತಿಗಳನ್ನು ತನ್ನ ಪೆಟ್ಟಿಗೆಯ ಹೊರ ಭಾಗದ ಮೇಲೆ ಬಿಡಿಸುತ್ತ ಬಂದಿದ್ದಾನೆ. ಬಹುತೇಕ ಇಂತಹ ಕಲಾ ಮಾಧ್ಯಮದಲ್ಲಿ ತಮ್ಮ ಪ್ರಕೃತಿಯ ಪ್ರತಿಬಿಂಬ ಮೇಲುಗೈಯಾಗಿ ಕಾಣಿಸುತ್ತದೆ.

ಹೆಚ್ಚಾಗಿ ಧಾರ್ಮಿಕ ಮತ್ತು ಸಾಂಪ್ರದಾಯಿಕ ಆಚರಣೆಗಳೂ ಮೇಳೈಸಿರುವುದು ಗಮನೀಯ. ಇಂತಹ ಎರಡು ವಿಭಿನ್ನ ಛಾಯಾಚಿತ್ರಗಳಲ್ಲಿ ಪೆಟ್ಟಿಗೆಗಳು ಕರ್ನಾಟಕದ ಪ್ರತಿಯೊಂದು ಸಿಂಧೋಳ್ಳರ ಮನೆಯಲ್ಲಿ ಕಂಡುಬರುತ್ತದೆ.

**೩. ಮಣ್ಣಿನ ಮಡಕೆ ಮತ್ತು ಕುಡಿಕೆಗಳ ಮೇಲಿನ ಚಿತ್ರಗಳು :** ಸಿಂಧೋಳ್ಳರು ತಾವು ವಾಸಿಸುವ ಕಡೆಗಳಲ್ಲೂ ಮಣ್ಣಿನ ಮಡಕೆಗಳು ಸಿಗುವುದುಂಟು ಮತ್ತು ಸೂಕ್ಷ್ಮ ರೀತಿಯಲ್ಲಿ ಬಳಸುವುದುಂಟು. ಇವರು ದಿನ ಬಳಕೆಯ ವಸ್ತುಗಳನ್ನು ಸಾಮಾನ್ಯ ವಾಗಿ ಅಲಂಕರಿಸಿದರೆ, ವಿಶೇಷ ಸಂದರ್ಭದಲ್ಲಿ ಮಡಕೆಗಳು ವಿಶೇಷ ರೀತಿಯಲ್ಲಿ ಚಿತ್ರಿಸಿರುವುದನ್ನು ಕಾಣಬಹುದು. ಇವುಗಳಿಗೆ ಮೊದಲು ಬಿಳಿಯ ಬಣ್ಣವನ್ನು ಪೂರ್ತಿ ಬಳಿದು, ಅದರ ಮೇಲೆ ಕೆಂಪು, ಹಳದಿ ಬಣ್ಣಗಳಿಂದ ವಿಶಿಷ್ಟ ರೀತಿಯಲ್ಲಿ ಚಿತ್ರಗಳನ್ನು ಬರೆಯುತ್ತಾರೆ. ಮದುವೆಯ ಸಂದರ್ಭದಲ್ಲಿ ಸುರಿಗೆ ನೀರು ಬಳಸುವ ಹೆಚ್ಚಾಗಿ ಮಡಕೆಗಳು ಕಂಡುಬರುತ್ತದೆ. ಇವರ ಕಲಾತ್ಮಕ ದೃಷ್ಟಿಯಿಂದ ಹೆಚ್ಚು ಆಕರ್ಷಕವಾಗಿ ಕಣ್ಮನ ಸೆಳೆಯುತ್ತವೆ. ಇವು ಆ ಸಂದರ್ಭಕ್ಕೆ ಶೋಭೆಯನ್ನು ತರುವುದರ ಜೊತೆಗೆ ಅಲ್ಲಿಯ ಸಾಂಸ್ಕೃತಿಕ ಮಹತ್ವವನ್ನು ಪಡೆದು ಕೊಂಡಿರುತ್ತದೆ.

**ಕೌದಿ ತಯಾರಿಕೆ :** ಸಿಂಧೋಳ್ಳರು ಪರಂಪರೆಯ ಸಾಂಸ್ಕೃತಿಕ, ನವೀನ ಪ್ರಾವೀಣ್ಯದ ಸಂಗಮದ ಕಲಾತ್ಮಕ ಕೌದಿ ಕಲೆ. ವಿಶಿಷ್ಟ ಹಳೆ ಸೀರೆ ಮತ್ತು ರವಿಕೆಗಳ ಬಳಕೆಯ ಮೂಲಕ ಸೂಜಿದಾರದಿಂದ ಪೋಣಿಸಿ ಜೋಡಿಸುತ್ತಾರೆ. ತುಂಡಾಗದೆ ಗಟ್ಟಿತನ ಹೊಲಿಗೆ ಅಂದದ ಚಿತ್ತಾರ, ನೂರಾರು ವರ್ಷಗಳ ಬಾಳಿಕೆ, ನಯನ ಮನೋಹರ ಹೊಳಪು ಹೀಗೆ ಅನೇಕ ವಿಶಿಷ್ಟ ತುಣಕು ಬಟ್ಟೆಗಳಿಂದ ಕಲಾಕೃತಿಯನ್ನು ಮಾಡುತ್ತಾರೆ. ಈ ಅಮೋಘ ಹೊಲಿಗೆ ಪುರಾತನ ಕಾಲದಿಂದ ಬೆಳೆದು ಇಂದಿನವರೆಗೆ ಉಳಿದು ಬಂದಿರುವುದು ತಂತ್ರಗಾರಿಕೆಯಾಗಿದೆ. ಹೆಚ್ಚಾಗಿ ಸ್ತ್ರೀಯರಿಗೆ ಕೌದಿ ಹೊಲಿಯುವುದು ಎಂದರೆ ಅಚ್ಚುಮೆಚ್ಚಿನದಾಗಿದೆ. ಭಿಕ್ಷಾಟನೆ ಮುಗಿಸಿದ ನಂತರ ತಮ್ಮ ಬಿಡುವಿನ ವೇಳೆಯಲ್ಲಿ ಅವರು ಗುಡಾರದ ಮುಂದೆ ಕೌದಿ ಹೊಲಿಯುವುದರಲ್ಲಿ ಮಗ್ನರಾಗಿರುತ್ತಾರೆ.

**ಕೌದಿ ತಯಾರಿಕೆ ವಿಧಾನಗಳು :** ಸಿಂಧೋಳ್ಳರು ತಮಗೆ ಬೇಕಾದ ಅಳತೆಯಲ್ಲಿ ಸೀರೆ, ದೋತ್ರ ಮೊದಲಾದ ಯಾವುದಾದರೂ ಹಳೆಯ ಅರಿವೆಗಳನ್ನು ಕತ್ತರಿಸಿ ಸಿದ್ಧ ಮಾಡಿಕೊಳ್ಳುತ್ತಾರೆ. ಎರಡು ಅಥವಾ ಮೂರು ಪದರು ಮಾಡಿ, ಆರು ಅಥವಾ ಎಂಟು ಇಂಚುಗಳಿಗೆ ಒಂದರಂತೆ ಹೊಲಿಗೆ ಹಾಕುತ್ತಾರೆ. ಇದು ಕೌದಿ ಹೊಲಿಯುವ ಪೂರ್ವಭಾವಿ ಸಿದ್ಧತೆ. ಸೂಜಿ ಪೋಣಿಸಿ ಒಂದು ಕಡೆಯಲ್ಲಿ ಇಟ್ಟಿರುವುದುಂಟು. ತದನಂತರ ಅರಿವೆ ಸಮನಾಗಿ ಹಾಕಿಕೊಂಡು, ಕೌದಿ ಹೊಲಿಗೆ ಪ್ರಾರಂಭಿಸುತ್ತಾರೆ. ಹೀಗೆ ಕೌದಿಯ ಮೇಲೆ ವಿವಿಧ ಬಣ್ಣಗಳ ಅರಿವೆಯ ತುಕಡಿಗಳನ್ನು ಕ್ರಮವಾಗಿ ಜೋಡಿಸುತ್ತಾ, ಹೊಲಿಯುವರು. ಕೌದಿಯ ಅಂಚುಗಳಿಗೆ ಸೀರೆಯ ದಡಿಯನ್ನೆ ಹಚ್ಚುತ್ತಾರೆ. ಅದು ಒಂದೇ ಬಣ್ಣದ ಹೆಚ್ಚಾಗಿ ಒಂದೇ ಅಳತೆಯುಳ್ಳದ್ದಾಗಿರುತ್ತದೆ. ಒಂದೊಂದು ಸಲ ಕೇವಲ ಸೀರೆಯ ದಡಿಗಳಿಂದಲೇ ಇಡೀ ಕೌದಿಯನ್ನು ಮುಗಿಸುತ್ತಾರೆ. ಒಬ್ಬರು ಪ್ರತಿದಿನ ನಾಲ್ಕರಿಂದ ಐದು ತಾಸು ಕುಳಿತು ಹೊಲಿದರೆ, ಸುಮಾರು ಹದಿನೈದು ದಿನಗಳಲ್ಲಿ ಕೌದಿ ಮುಗಿಯಬಹುದು. ನಿರಂತರವಾಗಿ ಹೊಲಿಯುವ ಕೌದಿಯಲ್ಲಿ ವೈವಿಧ್ಯತೆಯನ್ನು ಬಯಸಿ

ಚಿತ್ತಾರಗಳನ್ನು ಸೃಷ್ಟಿಸುತ್ತಾರೆ. ತಮ್ಮ ಭಾವನೆಗಳಿಂದ ಹೊಮ್ಮುವ ಕಲಾತ್ಮಕತೆ ಈ ಚಿತ್ತಾರಗಳಲ್ಲಿ ಎದ್ದು ತೋರುತ್ತದೆ. ಹೀಗೆ ಭಿಕ್ಷಾಟನೆಯ ಬಿಡುವಿನ ವೇಳೆಯನ್ನು ಸದುಪಯೋಗವಾಗಿ ಮಾಡಿರುವ ಸ್ತ್ರೀಯರು ಸೌಂದರ್ಯ ಪ್ರಜ್ಞೆಯಿಂದ ಕೌದಿಯನ್ನು ಕಲಾತ್ಮಕವಾಗಿ ರಚಿಸುತ್ತಾರೆ. ಹಾಗೆಯೇ ಪೂರ್ಣ ತಯಾರಾಗುವ ಮುನ್ನ ಕುಲದೇವತೆಗಳು ಭಂಡಾರ ಮತ್ತು ಭಿಕ್ಷೆಗೆ ಬಂದಿರುವ ಆಹಾರ ಇಲ್ಲವೆ ಕಾಳುಗಳು ಇಟ್ಟು ಕೌದಿಯ ಮೇಲೆ ಹಾಕಿ, ಪೂಜಿಸುತ್ತಾರೆ.

**ಜೋಳಿಗೆ ಹೊಲಿಯುವುದು :** ಭಿಕ್ಷಾಟನೆ ಸಂದರ್ಭದಲ್ಲಿ ಸಿಂಧೋಳ್ಳುರು ವಿಶೇಷವಾಗಿ ಮಹಿಳೆಯರು ತಮ್ಮ ಹೆಗಲಿನ ಮೇಲೆ ಜೋಳಿಗೆ ಹಾಕಿಕೊಂಡಿರುವುದುಂಟು. ಜೋಳಿಗೆಯ ಒಳಪದರುಗಳಲ್ಲಿ ಧಾನ್ಯಗಳು, ಸಣ್ಣ ಪಾತ್ರೆಗಳು ಮತ್ತು ಭಿಕ್ಷೆಗೆ ಬಂದಿರುವ ಆಹಾರ ಹಾಕಿಕೊಳ್ಳುವಷ್ಟು ದೊಡ್ಡದಾಗಿರುತ್ತದೆ. ಇವರು ಜೋಳಿಗೆ ಇಲ್ಲದೆ ಎಲ್ಲಿ ಹೋಗುವಂತಿಲ್ಲ. ಆದಕಾರಣ ಭಿಕ್ಷೆಗೆ ಹೋದಾಗ ಜೋಳಿಗೆ ಇರುವುದು ಸಹಜ. ಸಿಂಧೋಳ್ಳು ಪುರುಷನು ಜೋಳಿಗೆ ಹೊಲಿಯುತ್ತಾನೆ. ಜೋಳಿಗೆ ಹೊಲಿಯುವ ಸಂದರ್ಭದಲ್ಲಿ ಹಳೆ ರವಿಕೆಗಳನ್ನು ಕತ್ತರಿಸಿಕೊಂಡು, ಹೊಸ ರೂಪ ನೀಡುತ್ತಾನೆ. ಜೋಳಿಗೆ ಹೊಲಿಯುವಾಗ ಅರ್ಧ ಇಂಚಿಗೆ ಒಂದ ಪದರಗಳಂತೆ ಹೊಲಿಯುವ ವಿಧಾನವನ್ನು ಅನುಸರಿಸುತ್ತಾರೆ. ಮೇಲೆ ಎಳೆದು ಕಟ್ಟಲು ರಂಧ್ರ ಇರುವುದುಂಟು. ರಂಧ್ರದ ಮೂಲಕ ಹಳೆ ಬಟ್ಟೆಯನ್ನು ಸೇರಿಸಿ ಪೋಣಿಸುತ್ತಾರೆ. ಈ ಜೋಳಿಗೆ ಐದು ವರ್ಷಗಳು ಬಾಳಿಕೆ ಬರುತ್ತದೆ ಎಂದು ಹೇಳುತ್ತಾರೆ.[೭]

**ಹಲಗೆ (ತಮಟೆ) ವಾದ್ಯ ತಯಾರಿಕೆ :** ತಮಟೆ ಚರ್ಮವಾದ್ಯ ಪುರಾತನ ಕಾಲದ ವಾದ್ಯ. ಇದರ ಕುರಿತಾಗಿ ಗಾದೆಯೊಂದಿಗೆ "ಒಲೆಯಿಲ್ಲದ ಒಕ್ಕಲಿಲ್ಲ ತಮಟೆ ಇಲ್ಲದ ಊರಿಲ್ಲ" ಎಂಬುದನ್ನು ಗಮನಿಸಿದಾಗ ಇದರ ಸರ್ವವ್ಯಾಪಕತೆ ತಿಳಿಯುತ್ತದೆ. ಇದನ್ನು ಸಿಂಧೋಳ್ಳುರು ಹಲಗೆ ಎಂತಲೂ ಕರೆಯುವುದು. ಮೂರು ಅಡಿ ವ್ಯಾಸದ ವೃತ್ತಾಕಾರದ ಬಳೆಯ ಲೋಹ ವಸ್ತುವಿಗೆ, ಕೋಣದ ಚರ್ಮ ಬಳಸಿಕೊಂಡು ಬಿಗಿಸಿರುತ್ತಾರೆ. ಇದು ಬೆಂಕಿಗೆ ಕಾಸಿದಂತೆಲ್ಲಾ ಇದರ ನಾದ ಜಗನ, ಕನ್ ನಕ್ಕ ನಕ್ಕ...... ಹೊರ ಹೊಮ್ಮುತ್ತದೆ. ದೇವಿ ಹೊತ್ತುಕೊಂಡಿರುವ ಪೂಜಾರಿ ಹಲಗೆಯ ವಾದನಕ್ಕೆ ತಕ್ಕಂತೆ ಹೆಜ್ಜೆ ಹಾಕುವುದು ಕಾಣಿಸುತ್ತದೆ.

**ಬುರ್ರ ಬುರ್ರವಾದ್ಯ ತಯಾರಿಕೆ :** ಚರ್ಮ ವಾದ್ಯಗಳಲ್ಲಿ ಒಂದಾದ ಬುರ್ರ ಬುರ್ರವಾದ್ಯ ಸಿಂಧೋಳ್ಳುರಿಗೆ ತುಂಬಾ ಪ್ರಿಯವಾದುದು. ಈ ವಾದ್ಯ ಎರಡು ಕಡೆಯಿಂದಲೂ ನುಡಿಸುವಂತಹದ್ದು ಕೊಳವೆಯಾಕಾರದ ಒಂದು ಅಡಿ ವ್ಯಾಸದ ಕಟ್ಟಿಗೆಯ ಎರಡೂ ತುದಿಗಳಲ್ಲೂ ಮೇಕೆ ಚರ್ಮವನ್ನು ಜೋಡಿಸುತ್ತಾರೆ. ಪರಸ್ಪರ ಚರ್ಮ ಬಾರುಗಳಿಂದ ಕಟ್ಟರುತ್ತಾರೆ. ಚರ್ಮದ ಎಡಗಡೆಯಲ್ಲಿ ಔಡಲ ಎಣ್ಣೆಯನ್ನು ಹಚ್ಚಿರುವುದುಂಟು. ಇದನ್ನು ಬಿಸಿಲಿಗೆ ಒಣಗಿಸುತ್ತಾರೆ. ಹಾಗಾಗಿ ಈ ವಾದ್ಯ ಒಂದು ಕಡೆ ಜಿರ್, ಜಿರ್, ಗೀರ್......... ನಾದ ಬರುವುದು. ಈ ಬುರ್ರ ಬುರ್ರವಾದ್ಯದಿಂದಲೆ ಡೊಳ್ಳು, ಡೋಲು, ಮದ್ದಳೆ ಹುಟ್ಟಿಕೊಂಡಿರುವುದು ಎಂದು ಹೇಳುತ್ತಾರೆ.

**ಕ್ರೀಡೆಗಳು :** ಮಾನವನ ನಿತ್ಯ ಬದುಕಿನಲ್ಲಿ ಕ್ರೀಡೆಗಳಿಗೆ ಪ್ರಧಾನವಾದ ಸ್ಥಾನವಿದೆ. ಪ್ರತಿ ಸಮುದಾಯದ ವ್ಯಕ್ತಿಯೂ ತನ್ನ ಬದುಕಿನುದ್ದಕ್ಕೂ ವಿವಿಧ ಕ್ರೀಡೆಗಳೊಂದಿಗೆ ಅನೇಕ ಸಂಬಂಧಗಳನ್ನು

ತೊಡಗಿಸಿ ಕೊಂಡಿದ್ದಾನೆ. ಈ ಕ್ರೀಡೆಗಳಿಂದ ಮಾನಸಿಕ ಮತ್ತು ದೈಹಿಕ ಬೆಳವಣಿಗೆಯ ಜೊತೆಗೆ ಉಲ್ಲಾಸಭರಿತ ನಾಗಿರುತ್ತಾನೆ. ದೇಹಕ್ಕೆ ವ್ಯಾಯಾಮ ನೀಡುತ್ತದೆ. ಇದರಿಂದ ಸಾಮಾಜಿಕ ಜೀವನದಲ್ಲಿ ಸದೃಢ ಜೀವಿಗಳು ವಾಸಿಸಲು ಸಾಧ್ಯವಾಗುತ್ತದೆ. ಕೆಲವು ಕ್ರೀಡೆಗಳು ನಿಸರ್ಗದತ್ತವಾಗಿಯೂ, ಮತ್ತೆ ಕೆಲವು ಮನುಷ್ಯರ ಸ್ವಯಂ ಪ್ರೇರಣೆಯಿಂದ ರೂಪಿಸಿಕೊಂಡಿದ್ದಾರೆ. ಬುಡಕಟ್ಟು ಸಮುದಾಯಗಳು ಒಂದು ಕಾಲದಲ್ಲಿ ಹೊಟ್ಟೆಪಾಡಿಗೋಸ್ಕರ ಗೆಡ್ಡೆ-ಗೆಣಸು ಅರಸುತ್ತಾ ಬಂದಿದ್ದು. ಹಸಿಮಾಂಸ ಪ್ರಿಯವಾದ ಆಹಾರವಾಗಿತ್ತು. ಇಂದು ಆಧುನೀಕತೆ ಶೈಲಿಯಲ್ಲಿ ತಮ್ಮ ತಮ್ಮ ಸಮುದಾಯಗಳು ಊರಿನ ಹೊರಗಡೆ ಮತ್ತು ಒಳಗಡೆಯಲ್ಲಿ ಗುಂಪುಗಾರಿಕೆಯಿಂದ ಜೀವಿಸುತ್ತಿವೆ. ಅದರ ಜೊತೆಗೆ ಹಲವು ರೀತಿಯ ಆಟೋಟಗಳನ್ನು ರೂಢಿಸಿಕೊಂಡಿದ್ದಾರೆ. ವ್ಯಕ್ತಿ ಇಲ್ಲಿ ಪ್ರತ್ಯೇಕ್ಷವಾಗಿ, ಪರೋಕ್ಷವಾಗಿ ಕ್ರೀಡೆಗಳಿಗೆ ಪ್ರಕ್ರಿಯೆಗೆ ಒಳಗಾಗಿರುತ್ತಾನೆ. ಮೇಲ್ನೋಟಕ್ಕೆ ಕೇವಲ ಮನೋರಂಜನೆಗಾಗಿ ಕ್ರೀಡೆಗಳು ಎಂದೆನಿಸಿದರೂ, ತಮ್ಮ ದೈನಂದಿನ ದೈಹಿಕ ಶ್ರಮವನ್ನು ನೀಗಿಸಿಕೊಳ್ಳುವ ದೃಷ್ಟಿಯಿಂದ ಹಲವಾರು ಕ್ರೀಡೆಗಳನ್ನು ಬೆಳಸಿಕೊಂಡಿದ್ದಾರೆ.

ಕ್ರೀಡೆ ಎಂದರೆ 'ಆಟ ಆಡುವುದು' ಎಂದರ್ಥ. "ಆಟವಾಡಲು ವಯಸ್ಸಿನ ಅಂತರವಿಲ್ಲ. ಜಾತಿ ಮತಗಳ ಬೇಧವೂ ಇಲ್ಲ."[೧೮] ಸಿಂಧೋಳ್ಳರು ತಮ್ಮ ಬೌದ್ಧಿಕ ಪರಿಶ್ರಮ ಮತ್ತು ಆಯಾಸ ಬೇಸರಗಳು ಬಂದಾಗ ಕ್ರೀಡೆಗಳು ಆಡುವುದುಂಟು. ಚೌಕಬಾರ, ಮಕ್ಕಳ ವೃತ್ತಕಾರದ ಆಟ, ಕಣ್ಣು ಮುಚ್ಚಾಲೆ, ಮರಕೋತಿ ಆಟ ಇತ್ಯಾದಿಗಳಿಗೆ ಮಾನ್ಯತೆ ನೀಡುತ್ತಾರೆ. ಈ ಕ್ರೀಡೆಯಿಂದ ಮನೋರಂಜನೆಯ ಮೂಲಕ ನಮ್ಮ ಮತ್ತು ಮಕ್ಕಳ ಸಮಸ್ಯೆಗಳು ಬಂದಾಗ ಸಂತೋಷದ ಕ್ಷಣಗಳಿಂದ ಕ್ರೀಡೆಗಳು ರೂಪುಗೊಂಡಿವೆ ಎಂದು ಅಭಿಪ್ರಾಯಪಡುತ್ತಾರೆ.

**ಮಕ್ಕಳ ವೃತ್ತಾಕಾರದ ಆಟ :** ಸಿಂಧೋಳ್ಳು ಸಮುದಾಯದ ಹತ್ತು ವರ್ಷದ ಹುಡುಗಿ ತಮ್ಮ ಸಣ್ಣ ಮಕ್ಕಳೊಂದಿಗೆ ಲಾಲನೆ ಪಾಲನೆ ಹಾರೈಕೆ ನೋಡಿಕೊಳ್ಳುತ್ತಾ, ಮಕ್ಕಳ ದುಃಖವನ್ನು ಕಡಿಮೆ ಮಾಡುತ್ತಾಳೆ. ಒಮ್ಮೆ ಮಕ್ಕಳು ಹಠಮಾಡಿದರೆ ಎಲ್ಲ ಮಕ್ಕಳನ್ನು ಗುಂಪಾಗಿ ಸೇರಿಸಿಕೊಂಡು, ವೃತ್ತಾಕಾರದಲ್ಲಿ ಕೂಡುತ್ತಾರೆ. ವೃತ್ತಕಾರದಲ್ಲಿ ಕುಳಿತಿರುವ ಸಣ್ಣ ಮಕ್ಕಳ ಕೈಗಳನ್ನು ನೆಲದ ಮೇಲೆ ಬೋರಲಾಕಿ ಹಾಕಿಕೊಂಡು ಆಟ ಪ್ರಾರಂಭಿಸುತ್ತಾಳೆ. ಆಟ ನಡೆಸುವಳು ಒಂದು ಕೈಯನ್ನು ಮಾತ್ರ ಬೋರಲಾಕಿ, ಮಕ್ಕಳ ಕೈಗಳ ಮೇಲೆ ತಮ್ಮ ಪಲ್ಲವಿ ಮೂಲಕ

"ಅಂಟಿ, ಮಿಂಟಿ,
ಚಾವಲ ಗಂಟಿ,
ಗಜ್ಜಗ ಪೇರಾ,
ಟಾಂ ಟೋಮ್,
ಟೀಯ್ ಟಿಸಿಕ್"

ನುಡಿಗಳನ್ನು ಹೇಳುತ್ತಾ ಹೋಗಿ ಕೊನೆಯ ಟಿಸಿಕ್ ನುಡಿ ಬಂದವರ ಕೈಯನ್ನು ಅಂಗಾತವಾಗಿ ತಿರುವಿಹಾಕಿ ಕೊಳ್ಳುವ ಮುಂಚೆ ಮಕ್ಕಳಿಗೆ ಬೆಲ್ಲ ಬೇಕೆ, ಸಕ್ಕರೆ ಬೇಕೆ ಎಂದು ಕೇಳುತ್ತಾರೆ.[೧೯] ಮಕ್ಕಳು ಬೆಲ್ಲ ಎಂದರೆ ತಮ್ಮ ಕೈಯನ್ನು ತಿರುವಿಹಾಕಿಕೊಳ್ಳಬೇಕು. ಅನಂತರ ಸಕ್ಕರೆ ಹೇಳಿದರೆ ಕೈಯು ಬೋರಲಾಕಿ

ಇರಬೇಕು. ಇದೇ ಅನುಕರಣೆಯಿಂದ ಅಂತಿಮ ಸುತ್ತಿನವರೆಗೆ ಕೈಯನ್ನು ಹಿಂದೆಗಡೆಯಲ್ಲಿ ಬಚ್ಚಿಟ್ಟುಕೊಳ್ಳಬೇಕು. ಸಾಮಾನ್ಯವಾಗಿ ಕೈಗಳನ್ನು ಬೆನ್ನ ಹಿಂದಕ್ಕೆ ಇಟ್ಟುಕೊಳ್ಳುತ್ತಾರೆ. ಕೊನೆಯಲ್ಲಿ ಒಬ್ಬರ ಕೈ ಮಾತ್ರ ಉಳಿಯುತ್ತದೆ. ಆಗ ಅವರ ಕೈ ಜೊತೆ ಹಣೀ ಮುಟ್ಟಿಸಿ, ಮತ್ತೇ ಪಲ್ಲವಿ ನುಡಿಸುತ್ತಾಳೆ. ಆ ಕೈಯೂ ಬಚ್ಚಿಟ್ಟು ಕೊಂಡಾದ ಮೇಲೆ ಬಾಲ್ಯದ ಹುಡುಗಿ 'ಅಮ್ಮ' ಬಂದಳು ಎಂದು ಜೋರಾಗಿ ಚಪ್ಪಾಳೆ ತಟ್ಟುತ್ತಾಳೆ ಹಾಗೂ ಮಕ್ಕಳ ಕೈಯಿಂದ ಚಪ್ಪಾಳೆ ಬಾರಿಸುತ್ತಾಳೆ.

**ಚೌಕಬಾರ ಆಟ :** ಸಿಂಧೋಳ್ಳುರಲಿ, ಜಾತ್ರೆ ಉತ್ಸವ ಹಬ್ಬಗಳ ಆಚರಣೆಗಳು ಬಂದಾಗ ತಮ್ಮ ಗುಡಾರ ಮುಂದೆ ಚೌಕಬಾರ ಆಟ ಆಡುತ್ತಾರೆ. ಇದು ಬೇಸರವನ್ನು ಕಳೆಯುವ ಆಟವಾಗಿದೆ. ಈ ಸಮುದಾಯದಲ್ಲಿ ಕಿರಿಯರಿಂದ ಕುಲದ ಮುಖ್ಯಸ್ಥರ ವರೆಗೆ ಅಚ್ಚು ಮೆಚ್ಚಿನ ಆಟವಾಗಿದೆ. ಈ ೯ಟವಾಡಲು ಇಬ್ಬರು ಅಥವಾ ನಾಲ್ಕು ಜನ ಬೇಕು. ೬ ದೈದರಂತೆ ಐದು ಅಂಕಣಗಳು ಒಂದು ಚೌಕಬಾರವನ್ನು ಇದ್ದಿಲಗಳಿಂದ ಅಥವಾ ಬಳಪದಿಂದ ಬರೆಯುತ್ತಾರೆ. ಒಟ್ಟಿಗೆ ೨೫ ಅಂಕಣಗಳಾಗುತ್ತವೆ. ಅಂಕಣದ ಮದ್ಯೆ ಕಾಯಿ ಹಣ್ಣಾಗುವ ಮನೆಯಿರುತ್ತದೆ. ನಾಲ್ಕು ದಿಕ್ಕುಗಳಲ್ಲಿ ನಡುವಿನ ಅಂಕಣ ಆಟಗಾರನ ಮನೆಯಾಗಿರುತ್ತದೆ. ಅವರವರ ಮನೆಯಲ್ಲಿ ನಾಲ್ಕು ಬೆಂಕಿ ಕಡ್ಡಿ, ಹುಣಿಸೇ ಬೀಜ ಕವಡೆಗಳನ್ನಿಟ್ಟು ಕೊಂಡಿರುತ್ತಾರೆ. ದಾಳಗಳಾಗಿ ನಾಲ್ಕು ಕವಡೆ ಅಥವಾ ಹುಣಿಸೆ ಬೀಜಗಳನ್ನು ಒಂದು ಕಡೆ ತಿಕ್ಕಿ ಬೆಳ್ಳಗಾಗುವಂತೆಮಾಡಿ ಮತ್ತೊಂದು ಕಡೆ ಕಪ್ಪಾಗಿರುವಂತೆಯೇ ಬಿಟ್ಟು ತಯಾರಿಸಿಕೊಳ್ಳುತ್ತಾರೆ. ಈ ದಾಳಗಳು ಬಿಳಿಯಾಗಿ ನಾಲ್ಕು ಬಿದರೆ ನಾಲ್ಕು, ಕರಿಯಾಗಿ ಬಿದ್ದರೆ ಎಂಟು ಬಾರ ನಾಲ್ಕು ಮನೆಗಳನ್ನು ನಾಲ್ಕು ಅಂಕಣಗಳನ್ನು ಬಾರ ದಾಟಬಹುದು. ಉಳಿದವು ಎಷ್ಟೆ ಸಂಖ್ಯೆ ಬಿದ್ದರೆ ಅಷ್ಟೇ ಸಾಮಾನ್ಯವಾಗಿ ಬಿಳಿಯದನ್ನು ಲೆಕ್ಕಕ್ಕೆ ತೆಗೆದುಕೊಳ್ಳುತ್ತಾರೆ. ಅಂಕಣಗಳನ್ನು ಬಲಗಡೆಯಿಂದ ದಾಟುತ್ತಾ ಹೋಗಬೇಕು. ಅಂಕಣಗಳನ್ನು ದಾಟುವಾಗ ಎದುರಾಳಿಯ ಕಾಯನ್ನು ಹೊಡೆಯಬೇಕು. ಹೊಡೆದ ಕಾಯನ್ನು ಅವನ ಸ್ವಂತ ಮನೆಗೆ ಸೇರಿಸಬೇಕು. ಹೊಡೆದು ನಂತರವೇ ಹೊರವಲಯ ಬಿಟ್ಟು ಸ್ವಂತ ಮನೆಯ ಎಡಗಡೆಯ ಬಾಗಿಲಿನಿಂದ ಒಳವಲಯಕ್ಕೆ ಪ್ರವೇಶಿಸಬೇಕು. ಹೊಡೆದು ಮುಂದೆ ಹೋಗಿರುವ ಕಾಯಿಗಳನ್ನು ನಡೆಸಿ ಹಣ್ಣು ಮಾಡಬೇಕು. ಮಧ್ಯದ ಹಣ್ಣಾಗುವ ಮನೆಗೆ ಯಾರು ಮೊದಲು ತಮ್ಮ ನಾಲ್ಕು ಕಾಯಿಗಳನ್ನು ಸೇರಿಸುತ್ತಾರೋ ಅವರು ಗೆದ್ದಂತೆ ಉಳಿದವರು ಸೋತಂತೆ.



ಚೌಕಬಾರ

**ಕಣ್ಣು ಮುಚ್ಚಾಲೆ ಆಟ :** ಗುಡಾರಗಳ ಮುಂದೆ ಮಕ್ಕಳು ಭಾಗವಹಿಸಿ ಕಣ್ಣು ಮುಚ್ಚಾಲೆ ಆಟ ಆಡುತ್ತಾರೆ. ಈ ಆಟದಲ್ಲಿ ನಾಲ್ಕಕ್ಕಿಂತ ಹೆಚ್ಚು ಮಕ್ಕಳು ಭಾಗವಹಿಸಿರುತ್ತಾರೆ. ಹಿರಿಯ ಹುಡುಗಿ ಪ್ರಮುಖ ಪಾತ್ರ ವಹಿಸಿರುತ್ತಾಳೆ. ಈಕೆ ಮಕ್ಕಳನ್ನು ಸಾಲಾಗಿ ನಿಲ್ಲಿಸಿ, ಮಕ್ಕಳ ಕೈಯಲ್ಲಿ ಒಂದೊಂದು ಚಿಕ್ಕ ಕಲ್ಲು ಇಡುವ ಸಂದರ್ಭದಲ್ಲಿ "ಕಣ್ಣಾ ಮುಚ್ಚೆ ಕಾಡೇ ಗೂಡೇ ಉದ್ದಿನ ಉಂಡೆ, ಉರುಳೆ ಬಿಟ್ಟಿ ಮುತ್ತಿನ ಉಂಡೆ ನಿಮ್ಮ ಕೈಗೆ ಕಲ್ಲು ಇಟ್ಟು ಜೂಟ್......" ಎಂದು ಹೇಳುತ್ತಾಳೆ.[೨೦] ಒಬ್ಬ ಹುಡುಗನಿಗೆ

ಕಲ್ಲು ಇಟ್ಟಿದ ನಂತರ ಅವನು ಓಡಿ ಹೋಗುತ್ತಾನೆ. ಮತ್ತು ಗುಡಾರದಲ್ಲಿ ಬಚ್ಚಿಟ್ಟುಕೊಳ್ಳುವುದುಂಟು. ಆ ಹುಡುಗನಿಗೆ ಯಾರು ಮುಟ್ಟಿಸುತ್ತಾರೆ. ಅವನ ಸಂತೋಷದಿಂದ ಇರುತ್ತಾನೆ. ಮುಟ್ಟಿರುವ ಹುಡುಗ ಹತ್ತು ಬಾರಿ ಕಿವಿ ಹಿಡಿದುಕೊಂಡು ಕುಂತು ಎದ್ದೇಳಬೇಕು.

**ಮರಕೋತಿ ಆಟ :** ಸಿಂಧೋಳ್ಳು ಸಮುದಾಯದ ಮಕ್ಕಳಿಗೆ ಇದು ಪ್ರಿಯವಾದ ಆಟವಂತೆ. ಈ ಆಟದಲ್ಲಿ ಹತ್ತರಿಂದ ಇಪ್ಪತ್ತು ವಯಸ್ಸಿನ ಮಕ್ಕಳು ಇದರಲ್ಲಿ ಭಾಗವಹಿಸುತ್ತಾರೆ. ಸಿಂಧೋಳ್ಳರ ಹುಡುಗರು ಬೇಟೆ ಹೋದಾಗ ಕೆಲವೊಮ್ಮೆ ಮನರಂಜನೆಗಾಗಿ ಆಡುವುದುಂಟು. ಈ ಆಟದಲ್ಲಿ ಕೈ ಮೇಲೆ ಕೈಯಿಟ್ಟು ಮೇಲಕ್ಕೆ ತೂರಿಕೊಳ್ಳುವ ಮೂಲಕ ಒಬ್ಬ ಕಳ್ಳನನ್ನು ಆಯ್ಕೆ ಮಾಡುತ್ತಾರೆ. ಒಂದು ವೃತ್ತವನ್ನು ಬರೆದು, ಅದರಲ್ಲಿ ಒಂದು ಕೋಲು ಇಡುತ್ತಾರೆ. ಗೆದ್ದವರಲ್ಲಿ ಒಬ್ಬ ಕೋಲನ್ನು ದೂರ ಎಸೆಯುತ್ತಾನೆ. ಕೋತಿಯಾದವನು (ಸೋತವನು) ಆ ಕೋಲನ್ನು ತಂದು ವೃತ್ತದಲ್ಲಿಡಬೇಕು. ಅಷ್ಟರಲ್ಲಿ ಗೆದ್ದವರು ಮರವನ್ನು ಹತ್ತಿರುತ್ತಾರೆ. ಅವರನ್ನು ಮುಟ್ಟಬೇಕು. ಮುಟ್ಟುವಷ್ಟರಲ್ಲಿ ಯಾರಾದರೂ ಬಂದು ಕೋಲನ್ನು ಮುಟ್ಟಿದರೆ ಮತ್ತೆ ಅವನೆ ಕೋತಿಯಾಗಬೇಕಾಗುತ್ತದೆ. ಕೋಲನ್ನು ಮುಟ್ಟದಂತೆ ಕಳ್ಳನಾದವನು ಎಚ್ಚರದಿಂದಿರುತ್ತಾನೆ. ಮರ ಹತ್ತಲು ಬಾರದವನು ಸೋಲುತ್ತಾನೆ.

**ಅಡಿ ಟಿಪ್ಪಣಿಗಳು**

೧. ಮಹಾದೇವಯ್ಯ ಪಿ., ಸಾಮಾಜಿಕ ಉಪಭಾಷೆ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ಪು.೨

೨. ಭಾಸ್ಕರ್ ಟಿ.ಆರ್., ಸುಡುಗಾಡು ಸಿದ್ಧರು, ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ಪು.೧೮೬

೩. ನಲ್ಲೂರು ಪ್ರಸಾದ್., ಗಂಗಡಿಕಾರು ಒಕ್ಕಲಿಗರು, ಅಪ್ರಧಿನ ಪ್ರಕಾಶನ, ಬೆಂಗಳೂರು, ಪು. ೧೨೩

೪. ವಕ್ತೃ: ಶಾಂತಮ್ಮ (೩೦) ಗಂಡ ಕಾಟೆಪ್ಪ, ಅಯ್ಯ ಜಂಗಲ್, ಆಳಂದ, ಗುಲ್ಬರ್ಗಾ ಜಿಲ್ಲೆ.

೫. ವಕ್ತೃ: ಕಾಳಮ್ಮ (೨೫) ಗಂಡ ಹನುಮಂತ, ಸ.ಹಿ.ಪ್ರಾ.ಶಾಲೆ ಆವರಣ, ಸವಳಂಗ, ಹೊನ್ನಾಳ್ಳಿ, ದಾವಣಗೆರೆ ಜಿಲ್ಲೆ

೬. ವಕ್ತೃ: ಸಿಂಗಾರೆಪ್ಪ (೬೦) ತಂದೆ ರಾಜಪ್ಪ, ಗುಡಾರನಗರ, ಬಳ್ಳಾರಿ

೭. ಅವರೇ

೮. ವಕ್ತೃ: ಮಾರಕ್ಕ (೫೦) ಗಂಡ ಸಿಂಗಾರೆಪ್ಪ, ಗುಡಾರನಗರ, ಬಳ್ಳಾರಿ

೯. ವಕ್ತೃ: ದಿ. ವೆಂಕಟಪ್ಪ (೬೦), ದರ್ಗಾಹತ್ತಿರ, ಕೂಡ್ಲಿಗಿ ತಾ. ಬಳ್ಳಾರಿ ಜಿಲ್ಲೆ

೧೦. ವಕ್ತೃ: ಮಾರಮ್ಮ (೩೭) ಗಂಡ ಈರಪ್ಪ, ಉರುಕುಂದ್ಲಿನಗರ, ರಾಯಚೂರು

೧೧. ಬಸವರಾಜ ಪೋಲೀಸ್ ಪಾಟೀಲ್, ಹೈದ್ರಾಬಾದ್ ಕರ್ನಾಟಕದ ಜನಪದ ಸಾಹಿತ್ಯ, ಅಮರ ಪ್ರಕಾಶನ, ಗುಲ್ಬರ್ಗಾ, ೨೦೦೧, ಪು. ೬೧

೧೨. ವಕ್ತೃ: ಹುಲಿಗೆಮ್ಮ (೩೪) ಗಂಡ ದಿ.ಮಾಯಪ್ಪ, ಬಸವೇಶ್ವರನಗರ, ಕಾಲಘಟಗಿ ತಾ. ಧಾರವಾಡ ಜಿಲ್ಲೆ

೧೩. ಬಸವರಾಜ ಪೋಲೀಸ್ ಪಾಟಿಲ್, ಹೈದ್ರಾಬಾದ್ ಕರ್ನಾಟಕದ ಜನಪದ ಸಾಹಿತ್ಯ, ಅಮರ ಪ್ರಕಾಶನ, ಗುಲ್ಬರ್ಗಾ, ೨೦೦೧, ಪು. ೮೩

೧೪. ವಕ್ತೃ: ತಿಪ್ಪಣ್ಣ (೭೦) ತಂದೆ ಸಂಜೀವಪ್ಪ, ಹಳೇಹುಬ್ಬಳಿ, ನೇಕಾರನಗರ, ಶಿವಶಕ್ತಿಕಾಲೋನಿ ಹತ್ತಿರ, ಹುಬ್ಬಳ್ಳಿ

೧೫. ಮೊಗಳ್ಳಿ ಗಣೇಶ್, ಗಿರಿಜನ ಸಂಸ್ಕೃತಿ, ಕರ್ನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡೆಮಿ, ಬೆಂಗಳೂರು, ಪು. ೧೪೯

೧೬. ವಕ್ತೃ: ಆಶಾಪ್ಪ (೬೦) ತಂದೆ ಲಕ್ಷ್ಮಯ್ಯ, ಬಸವನಬಾಗೇವಾಡಿ ತಾ. ವಿಜಾಪುರ ಜಿಲ್ಲೆ

೧೭. ವಕ್ತೃ: ನರಸಿಂಹಯ್ಯ (೫೮) ತಂದೆ ಸಿದ್ಧಲಿಂಗಯ್ಯ, ಕೃಷ್ಣಪುರ, ಕೆ.ಎ.ಆರ್.ಪೇಟೆ ತಾ. ಮಂಡ್ಯ ಜಿಲ್ಲೆ

೧೮. ಎನಲ್ಲೂರು ಪ್ರಸಾದ್, ಗಂಗಡಿಕಾರು ಒಕ್ಕಲಿಗರು, ಅಪ್ರಧಿನ ಪ್ರಕಾಶನ, ಬೆಂಗಳೂರು, ಪು. ೧೪೬

೧೯. ವಕ್ತೃ: ಗೌರಿ (೭) ತಂದೆ ಕೃಷ್ಣಪ್ಪ, ಎಲ್ಲಮ್ಮ ಕಾಲೋನಿ, ಕೊಳಗೇರಿ ಹತ್ತಿರ, ರೈಲ್ವೆನಿಲ್ದಾಣ, ಮೈಸೂರು.

೨೦. ಅವರೇ

## ಅಧ್ಯಾಯ - ೭

# ಸಮಕಾಲೀನ ಸವಾಲುಗಳು

೧. ಸಮಸ್ಯೆಗಳು

೨. ಸರ್ಕಾರದ ಪಾತ್ರ

೩. ಸಂಘಟನೆಗಳ ಪಾತ್ರ

೪. ಸೌಲಭ್ಯಗಳು

೫. ಪರಿವರ್ತನೆಗಳು



# ಸಮಕಾಲೀನ ಸವಾಲುಗಳು

ಕರ್ನಾಟಕದ ಸಿಂಧೋಳ್ಳುರ ಜೀವನ ಅತ್ಯಂತ ಧಾರುಣ ಸ್ಥಿತಿಯಲ್ಲಿದೆ. ಇವರು ಒಂದೆಡೆ ಅಸ್ಪೃಶ್ಯರು, ಇನ್ನೊಂದಡೆ ನಾಗರಿಕ ಜಗತ್ತಿನಿಂದ "ಧಾರ್ಮಿಕ ಭಿಕ್ಷಕರು" ಎಂದು ಕರೆಸಿಕೊಳ್ಳುವ ಒಂದು ಸಮುದಾಯ. ಕನ್ನಡ ನಾಡಿನಲ್ಲಿ ಗುಡಾರಗಳನ್ನು ಎಲ್ಲಿಯೂ ಕಾಣಬಹುದು. ಒಂದೆಡೆ ಇಲ್ಲಿನ ಬಂಡವಾಳ ಶಾಹಿಗಳು ಕಾಂಕ್ರೀಟ್ ಕಟ್ಟಡದಲ್ಲಿ ಐಷಾರಾಮದ ಜೀವನ ಮಾಡುತ್ತಿದ್ದಾರೆ. ಇನ್ನೊಂದೆಡೆ ಗುಡಿ ಗುಂಡಾರ, ಗುಡಿಸಲುಗಳಲ್ಲಿ ವಾಸಮಾಡುವ ಕಡುಬಡವರನ್ನು ಕಾಣಬಹುದಾಗಿದೆ. ಕತ್ತಲಿನ ಪ್ರದೇಶದಲ್ಲಿ ಚಿಂದಿ ಬಟ್ಟೆಯನ್ನು ತೊಟ್ಟು ಅನಾಗರಿಕ ಎಂಬ ಹೊಸ್ತಿಲಿನಲ್ಲಿ ಬಿದ್ದು ಹೊರಳಾಡುತ್ತಿದೆ. ಆದರೆ ಇವರ ಸಂಸ್ಕೃತಿ ಮಾತ್ರ ಕಾಂಕ್ರೀಟ್ ಕಾಡಿನ ವಿಶಿಷ್ಠ ಶೈಲಿಯಂತೆ ಕಂಡುಬರುವುದು ಸಹಜವಾಗಿದೆ.

ಸಮಾಜದಲ್ಲಿ ಶ್ರೀಮಂತ, ಬಡವ, ಮಾಲಿಕ-ಕಾರ್ಮಿಕ, ಸ್ಪೃಶ್ಯ-ಅಸ್ಪೃಶ್ಯ, ಪ್ರಭು-ಪ್ರಜೆ, ಗುರು-ಶಿಷ್ಯ ಇತ್ಯಾದಿ ಚಿತ್ರಣಗಳು ಕಂಡು ಬಂದರೂ ಬಂಡವಾಳಶಾಹಿಗಳು ಇಲ್ಲಿನ ಪ್ರಾಕೃತಿಕ ಸಂಪನ್ಮೂಲ ಗಳನ್ನು ತಮ್ಮ ತಮ್ಮ ವೃತ್ತಿಗಳುನುಗುಣವಾಗಿ ಹೆಚ್ಚಿನ ಪ್ರಮಾಣದಲ್ಲಿ ತಮ್ಮದಾಗಿಸಿಕೊಂಡಿದ್ದಾರೆ. ಆದರೆ ಸಿಂಧೋಳ್ಳು ಸಮುದಾಯ ಅಕ್ಷರ ಜಗತ್ತಿನಿಂದ ದೂಠ ಉಳಿದಿದ್ದು, ಆಧುನಿಕ ಕಾಲದ ತುರ್ತುಗಳಿಗೆ ಅನುಗುಣವಾಗಿ ತಮ್ಮ ಬದುಕನ್ನು ರೂಪಿಸಿಕೊಳ್ಳುವಲ್ಲಿ ತಿಣುಕಾಡುತ್ತಿದೆ. ತಮ್ಮ ಕೈಗೆಟುಕುವ ನೈಸರ್ಗಿಕ ಸಂಪನ್ಮೂಲಗಳನ್ನು ಬಳಸಿಕೊಳ್ಳುವಲ್ಲಿ ಮತ್ತು ಉದ್ಯೋಗವನ್ನು ಸೃಷ್ಟಿ ಮಾಡಿಕೊಳ್ಳುವಲ್ಲಿ ಸಿಂಧೋಳ್ಳು ಸಮುದಾಯ ವಿಫಲವಾಗಿದೆ. ಕುಟುಂಬವನ್ನು ಯಾವ ದಿಕ್ಕಿನಲ್ಲಿ ಅಭಿವೃದ್ಧಿಪಡಿಸಬೇಕು ಇತ್ಯಾದಿ ಪ್ರಶ್ನೆಗಳು ಸಾಮಾಜಿಕ ಜೀವನದಲ್ಲಿ ಸಮಕಾಲೀನ ಸವಾಲುಗಳಾಗಿವೆ. ಆದರೂ ಭಿಕ್ಷೆ ಬೇಡುವ ಪರಿಸ್ಥಿತಿ ಅನಿವಾರ್ಯವಾಗಿ ಒದಗಿಬಂದಿದೆ. ಮೇಲಿನ ಹಲವಾರು ಪ್ರಶ್ನೆಗಳು ಇವರಿಗೆ ಪ್ರಶ್ನೆಗಳಾಗಿಯೇ ಉಳಿದು ಆರ್ಥಿಕ ವ್ಯವಸ್ಥೆಗೆ ಭಂಗ ಉಂಟುಮಾಡಿದೆ.

ಬಂಡವಾಳಶಾಹಿಗಳು ತಮ್ಮ ಕುಟುಂಬಗಳು ಅಭಿವೃದ್ಧಿ ಹೊಂದಬೇಕು, ಶ್ರೀಮಂತರಾಗಬೇಕು, ತಮ್ಮ ಸಮುದಾಯ ಸಮಾಜದಲ್ಲಿ ಬೆಳಕಿಗೆ ಬರಬೇಕು ಇತ್ಯಾದಿ ಅಂಶಗಳನ್ನಿಟ್ಟುಕೊಂಡು ಸಾರ್ವತ್ರಿಕ ಬದುಕಿನಲ್ಲಿ ಸರ್ಕಾರದ ಸಂಪರ್ಕದಿಂದ ಮುಂದೆ ಬಂದಿದ್ದಾರೆ. ಇದೇ ಅಂಶಗಳು ಮುಂದೆ ಅನುಸರಿಸಿ ಉಳಿದ ಬಂಡವಾಳ ಶಾಹಿಗಳು ತಮ್ಮ ಜೀವನ ರೂಪಿಸಿಕೊಂಡಿದ್ದಾರೆ. ಇಂತಹ ಸಂದರ್ಭದಲ್ಲಿ ಅಸಮಾನತೆಯನ್ನು ಬಿತ್ತುವ ತಂತ್ರಗಾರಿಕೆ ಸಮಾಜದಲ್ಲಿ ಬಂದೊದಗುತ್ತದೆ. ಸಿಂಧೋಳ್ಳುರ ಸಂಸ್ಕೃತಿ, ಕಲೆ, ಸಾಹಿತ್ಯ, ಬುರ್ರ ಬುರ್ರವಾದ್ಯ ಮತ್ತ, ವೇಷದೊಂದಿಗೆ ಭಿಕ್ಷಾಟನೆ ಕುಣಿತ ಇಂದಿಗೂ ಜನರ ದೃಷ್ಟಿಯಲ್ಲಿ ಅಜರಾಮರವಾಗಿದೆ. ಇದಕ್ಕೆ ಸಮಾಜದಲ್ಲಿ ಮಾನ್ಯತೆ ಇಲ್ಲ. ಸಿಂಧೋಳ್ಳು ಜನರಿಗೆ ಬಂಡವಾಳಶಾಹಿ ಸಮಾಜ ಮತ್ತು ಸರ್ಕಾರ ಸಹಕಾರವನ್ನು ನೀಡುವಲ್ಲಿ ವಿಫಲವಾಗಿದೆ.

ಸಮಾಜದ ಇತರೆ ಸಮುದಾಯಗಳು ಸಿಂಧೋಳ್ಳು ಸಮುದಾಯಕ್ಕೆ ಸಹಕಾರ ನೀಡಿದಾಗ, ಮತ್ತು ಇಲ್ಲಿನ ಸಂಪನ್ಮೂಲಗಳನ್ನು ಬಳಸಿಕೊಳ್ಳುವ ರೀತಿಯಲ್ಲಿ ಸಲಹೆಗಳನ್ನು ನೀಡಿದಾಗ, ಆ ಸಮುದಾಯಕ್ಕೆ ಸ್ವಾತಂತ್ರ್ಯ ಸಿಗುವ ರೀತಿಯಲ್ಲಿ ಭಾಸವಾಗುವುದಂತೆ ಹಾಗೂ ವಿಜಯೋತ್ಸವದ ಸಂಕೇತವಾಗುವುದಂತೆ. ಆಗ ಇವರಲ್ಲಿನ ಸಮಸ್ಯೆಗಳು ಕಡಿಮೆಯಾಗಬಹುದು ಆದರೆ ಇದು ಕೇವಲ ನಾಮ ಮಾತ್ರವಾಗಿದೆ. ನಮ್ಮ ದೇಶದಲ್ಲಿ ನೈಸರ್ಗಿಕ ಮತ್ತು ಮಾನವ ಸಂಪನ್ಮೂಲಗಳಿಗೆ ಇಂದಿಗೂ ಕೊರತೆ ಕಂಡು ಬರುವುದಿಲ್ಲ. ಸಮೃದ್ಧ ಭಾರತದಲ್ಲಿ ಏಕರೂಪ ಸಾಮಾಜಿಕ ವ್ಯವಸ್ಥೆಯಿಲ್ಲದ ಕಾರಣ ಸರ್ವಾಂಗೀಣ ಅಭಿವೃದ್ಧಿ ಅಸಾಧ್ಯವಾಗಿದೆ. ದೇಶ ಪರರ ದಾಸ್ಯದಿಂದ ವಿಮುಕ್ತಿ ಹೊಂದಿದ್ದರೂ, ದೇಶದೊಳಗಿರುವ ಬಂಡವಾಳ ಶಾಹಿಗಳು ಮಾನವೀಯ ಮೌಲ್ಯಗಳನ್ನು ಗಾಳಿಗೆ ತೂರಿ ತಮಗೆ ಇಷ್ಟ ಬಂದ ರೀತಿಯಲ್ಲಿ ವರ್ತಿಸುತ್ತಿದ್ದಾರೆ. ಇತರೆ ಜನ ಸಮುದಾಯಗಳು ಇವರ ದುರ್ವರ್ತನೆಯನ್ನು ಕಂಡು ಕಾಣದವರ ರೀತಿಯಲ್ಲಿ ಬದುಕುತ್ತಿದ್ದಾರೆ.

**ಸಮಸ್ಯೆಗಳು**

ಸಿಂಧೋಳ್ಳು ಸಮುದಾಯದ ಸಮಸ್ಯೆಗಳು ಇಂದು ನಿನ್ನೆಯದಲ್ಲ. ಅವು ನಿರಂತರವಾದ ಸಮಸ್ಯೆಗಳಾಗಿ ಬಂದಿವೆ. ಅವರು ಕಷ್ಟಗಳನ್ನು ಅನಿವಾರ್ಯವಾಗಿ ಅನುಭವಿಸಬೇಕಾಗಿದೆ. ಸಮಸ್ಯೆ ಸಾಮಾನ್ಯವಾಗಿ ಒಂದು ಅಸಹಜ ಪರಿಸ್ಥಿತಿಯಾಗಿರುವುದು, ತೊಂದರೆಯು ಸಮಸ್ಯೆಯಾಗಿ ರೂಪುಗೊಂಡಾಗ ಅದನ್ನು ನಿವಾರಿಸುವುದು ತುಂಬಾ ತ್ರಾಸದಾಯಕ ಕೆಲಸವಾಗುವುದು. ಅದನ್ನು ಬಿಡಿಸಲು ಪ್ರಯತ್ನಿಸಬಹುದಾದರೂ, ಇಂತಿಷ್ಟು ಅವಧಿಯಲ್ಲಿ ಸಂಪೂರ್ಣ ಪರಿಹಾರ ಸಾಧ್ಯ ಎನ್ನುವ ಖಚಿತತೆಯನ್ನು ಕಂಡುಕೊಳ್ಳುವುದು ಕಷ್ಟಸಾಧ್ಯ.

ಅಲೆಮಾರಿಯಂತೆ ವಾಸಿಸುತ್ತಾ ಬಂದಿರುವ ಸಿಂಧೋಳ್ಳು ಸಮುದಾಯ ತಮ್ಮ ವೃತ್ತಿ ಬದುಕಿನಲ್ಲಿ ಎದುರಿಸುತ್ತಿರುವ ವಾಸ್ತವಿಕ ಸಮಸ್ಯೆಗಳಿಗೂ ಹಿಂದಿನ ಸಮಸ್ಯೆಗಳಿಗೂ ವ್ಯತ್ಯಾಸವಿದೆ. ಸಮುದಾಯದ ಹಿಂದಿನ ಸಮಸ್ಯೆಗಳು ಸಾಮಾಜಿಕ ಜೀವನದಲ್ಲಿ ಅನಿವಾರ್ಯ ಪ್ರಸಂಗಗಳಾಗಿದ್ದು, ಹೆಚ್ಚು ಹೆಚ್ಚು ಗೋಚರವಾಗುತ್ತಿಲ್ಲ. ಆದರೆ ಇಂದಿನ ಸಮಸ್ಯೆಗಳು ಸಾಮಾಜಿಕ ಜೀವನದಲ್ಲಿ ಅನಿವಾರ್ಯ ಪ್ರಸಂಗಗಳೋಪಾದಿಯಲ್ಲಿ ಕಂಡು ಬರುತ್ತವೆ. ಸಿಂಧೋಳ್ಳು ಸಮುದಾಯದ ಜನಸಂಖ್ಯೆಯೂ ಭರದಿಂದ ಬೆಳೆಯುತ್ತಿದೆ. "ಸ್ವಾತಂತ್ರ್ಯದ ಸ್ವರ್ಣ ಮಹೋತ್ಸವ ಆಚರಿಸಿದರೂ; ಒಂದ್ಹೊತ್ತಿನ ಊಟವಿಲ್ಲ" "ಭಾರತದಂತಹ ಬಡ ದೇಶದಲ್ಲಿ ತನ್ನ ಒಡಲಲ್ಲಿ ಶೇ. ೫೦ ಭಾಗದ ಜನತೆ ಹಸಿವಿನಿಂದ ನರಳುತ್ತಿದ್ದಾರೆ".[೨] ಇದರ ಅನುಕರಣೆಯಂತೆ ಸಿಂಧೋಳ್ಳು ಸಮುದಾಯ ಹಸಿವಿನಿಂದ ಕಂಗಾಲಾಗಿದ್ದರು. ಇನ್ನೂ ಸಮುದಾಯದ ರೂಪ ಬದಲಾವಣೆಯಾಗಿಲ್ಲ, ಸಮಸ್ಯೆಗಳ ಮಧ್ಯೆ ಸಂಕಷ್ಟಗಳ ಮಧ್ಯೆ ನೆಲೆನಿಂತಿದ್ದಾರೆ. ಅವುಗಳಲ್ಲಿ

೧. ಆರ್ಥಿಕ ಸಮಸ್ಯೆ
೨. ರಾಜಕೀಯ ಸಮಸ್ಯೆ
೩. ಆರೋಗ್ಯ ಮತ್ತು ನೈರ್ಮಲ್ಯ ಸಮಸ್ಯೆ
೪. ಶೈಕ್ಷಣಿಕ ಸಮಸ್ಯೆ
೫. ಇನ್ನಿತರ ಸಮಸ್ಯೆಗಳು

**ಆರ್ಥಿಕ ಸಮಸ್ಯೆ**

ಸಿಂಧೋಳ್ಳರ ಮೂಲ ವೃತ್ತಿ ಭಿಕ್ಷಾಟನೆ ಮತ್ತು ಬೇಟೆ. ಆದರೆ ಪ್ರಸ್ತುತ ದಿನದಲ್ಲಿ ಶೇ. ೬೦ರಷ್ಟು ಜನರು ಭಿಕ್ಷೆಯನ್ನು ನಂಬಿ, ಜೀವನ ಮಾಡುತ್ತಿದ್ದಾರೆ. ದಿನವೊಂದರಲ್ಲಿ ಭಿಕ್ಷೆ ಜಾಸ್ತಿ ಬರಬಹುದು ಮತ್ತು ಕಡಿಮೆ ಬರಬಹುದು. ಆದ್ದರಿಂದ ಇವರಲ್ಲಿ ಕೆಲವರು ಇತ್ತೀಚೆಗೆ ಪಶುಪಾಲನೆ ಮತ್ತು ಇತರ ವೃತ್ತಿಗಳನ್ನು ನಂಬಿಕೊಂಡು ಜೀವನ ಮಾಡುತ್ತಿದ್ದಾರೆ. ಈ ಸಮುದಾಯದ ಆರ್ಥಿಕ ಪರಿಸ್ಥಿತಿ ತುಂಬಾ ಶೋಚನೀಯವಾಗಿದೆ. ಗುಡಾರಗಳಲ್ಲಿ ವಾಸಿಸುವ ಜನರ ಉಡಿಗೆ-ತೊಡಿಗೆ ಮತ್ತು ದೈಹಿಕ ಲಕ್ಷಣಗಳೇ ಅವರ ಆರ್ಥಿಕ ಸ್ಥಿತಿಗತಿಗಳನ್ನು ತಿಳಿಸುತ್ತವೆ. ಆಧುನಿಕತೆಯಲ್ಲಿ ಅನೇಕ ವೃತ್ತಿಗಳು ಇದ್ದರೂ ಇವರು ಭಿಕ್ಷೆ, ಬೇಟೆ ಮತ್ತು ಪಶುಪಾಲನೆಯಿಂದ ಜೀವನ ಮಾಡುವುದು ಇತ್ತೀಚಿನ ಪರಿಸ್ಥಿತಿಯಲ್ಲಿ ಕಷ್ಟವಿದೆ. ಬಹುಪಾಲು ಸಿಂಧೋಳ್ಳರು ಭಿಕ್ಷೆ ಮತ್ತು ಬೇಟೆ ವೃತ್ತಿಯಲ್ಲಿ ತೊಡಗಿದ್ದರು. ಕೂಲಿ, ಸಣ್ಣ ವ್ಯಾಪಾರ ಇತ್ಯಾದಿ ವೃತ್ತಿಗಳನ್ನು ಮಾಡಿಕೊಂಡು ಜೀವನ ಮಾಡುತ್ತಿದ್ದಾರೆ. ಗಂಡು-ಹೆಣ್ಣು ಎಂಬ ಭೇದವಿಲ್ಲದೆ ಕೆಲಸ ನಿರ್ವಹಿಸಿಕೊಂಡು, ಊಟಕ್ಕಾಗಿ ಮುದ್ದೆ, ಸಾರು ಸಿಕ್ಕರೆ ಅದರಲ್ಲೇ ತೃಪ್ತಿ ಪಟ್ಟುಕೊಳ್ಳುತ್ತಾರೆ.

ಭಿಕ್ಷೆ ಮತ್ತು ಬೇಟೆ ವೃತ್ತಿ ಮಾಡುವುದು ಅಪರಾಧ. ಆದಕಾರಣ ಸಿಂಧೋಳ್ಳರು ಭಿಕ್ಷೆಯನ್ನು ಬಿಡಲು ಸದಾ ಸಿದ್ಧ ಇದ್ದಾರೆ. ಆದಕಾರಣ ಇತರೆ ವೃತ್ತಿಗಳನ್ನು ಅವಲಂಬಿಸಬೇಕಾಗಿರುವುದು ಅನಿವಾರ್ಯ. ಒಂದು ಕಾಲದಲ್ಲಿ ಸಿಂಧೋಳ್ಳ ಪೂಜಾರಿ ಊರಿಗೆ ಬಂದರೆ ಸಾಕು ಆ ಊರಿನಲ್ಲಿ ಮುಖಂಡರು ಸೇರಿ ದವಸ ಧಾನ್ಯ, ಬಟ್ಟೆ ಮತ್ತು ಹಣ ನೀಡುತ್ತಿದ್ದರು. ಆದರೆ ಕಾಲ ಬದಲಾದಂತೆ ಭಿಕ್ಷೆ ಕೊಡುವರ ಸಂಖ್ಯೆ ವಿರಳವಾಗಿದೆ. ಇವರು ತಮ್ಮ ಕೈಗಳನ್ನು ಕೊಯ್ದುಕೊಂಡರು, ಭಿಕ್ಷೆ ನೀಡದ ಪರಿಸ್ಥಿತಿಯಾಗಿದೆ. ದಿನದಲ್ಲಿ ಒಂದ್ಹೊತ್ತಿನ ಊಟಕ್ಕಾಗಿ ಯೋಚಿಸುವುದಾಗಿದೆ. ಊಟ ಸಿಗದೆ ಇದ್ದಾಗ ಸಿಂಧೋಳ್ಳರು ನಗರ ಪ್ರದೇಶಗಳಾದ ಬೆಂಗಳೂರು, ಬಾಂಬೆ, ಸೊಲ್ಲಾಪುರ, ಅನಂತಪುರ, ನೇಪಾಳ ಪ್ರದೇಶಗಳಿಗೆ ವಲಸೆ ಹೋಗಿ ಭಿಕ್ಷೆ ಮತ್ತು ಕೂಲಿ ಕೆಲಸ ಮಾಡಿ ಜೀವನ ನಿರ್ವಹಿಸುತ್ತಿದ್ದಾರೆ. ಕೆಲವೊಂದು ಪ್ರದೇಶಗಳಲ್ಲಿ ಮಹಿಳೆಯರು ಮತ್ತು ಮಕ್ಕಳು ಸಣ್ಣ ವ್ಯಾಪಾರದಿಂದ ಹೊಟ್ಟೆ ತುಂಬಿಸಿಕೊಳ್ಳುತ್ತಿದ್ದಾರೆ. ಪುರುಷರು ಮೀನಿನ ಕೆಲಸದಲ್ಲಿಯೂ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ವೃದ್ಧರು ಹಂದಿಗಳ ಸಾಗಣಿಕೆ ಮಾಡಿಕೊಂಡು ಗುಡಾರದಲ್ಲಿ ಇರುತ್ತಾರೆ. ಬಹುಪಾಲು ಸಿಂಧೋಳ್ಳರು ಬಡತನ ರೇಖೆಗಿಂತ ಕೆಳಗೆ ಜೀವಿಸುತ್ತಿದ್ದಾರೆ. ಭಿಕ್ಷಾಟನೆ ಮಾಡಿ ತಮ್ಮ ಕೈಗಳನ್ನೂ ಕೊಯ್ದುಕೊಂಡು ಧಾರಣ ಸ್ಥಿತಿಗೆ ಒಳಗಾಗಿದ್ದಾರೆ.

ಸಿಂಧೋಳ್ಳರು ಇಂದು ಅನೇಕ ಸಮಸ್ಯೆಗಳಲ್ಲಿ ಸಿಲುಕಿಕೊಂಡಿದ್ದಾರೆ. ಭಿಕ್ಷೆಯನ್ನು ನಂಬಿದ ಜನರು ಇಂದು ಭಿಕ್ಷೆ ಬಿಟ್ಟು, ಯಾವ ವೃತ್ತಿಗಳನ್ನು ಮಾಡಬೇಕು? ಹೇಗೆ ಮಾಡಬೇಕು? ಎಂಬ ಆತಂಕದಲ್ಲಿದ್ದಾರೆ. ಭಿಕ್ಷಾಟನೆ ಬಿಟ್ಟು ಹೊಸ ವೃತ್ತಿಗಳು ಸ್ವೀಕರಿಸಿದ್ದರು, ಹೊಸ ವೃತ್ತಿಗಳಿಗೆ ಹೊಂದಿಕೊಳ್ಳುವ ಸಂಘರ್ಷದಲ್ಲಿ ಸಿಲುಕಿಕೊಂಡಿದ್ದಾರೆ. ಆದರು ಅನಿವಾರ್ಯವಾಗಿ ಕೂಲಿ, ವ್ಯಾಪಾರ ಮತ್ತು ಇತರೇ ವೃತ್ತಿಗಳು ನಿರ್ವಹಿಸಿಕೊಂಡು ಜೀವನ ನಿರ್ವಹಿಸುತ್ತಿರುವುದು ಬಹುದೊಡ್ಡ ಸವಾಲಾಗಿದೆ.

ದೇಶ ಅಭಿವೃದ್ಧಿಯಾಗಬೇಕಾದರೆ ದೇಶದೊಳಗಿರುವ ಸಮುದಾಯ ಅಭಿವೃದ್ಧಿಯಾಗಬೇಕು. ಅದು ಆರ್ಥಿಕ ಸಮಾನತೆ ಇದ್ದಾಗ, ಸಮಾಜಿಕ ಸ್ಥಾನಮಾನ ಮುಂದೆ ಬರಲು ಸಾಧ್ಯ. ಆದರೂ ಸಿಂಧೋಳ್ಳ

ಸಮುದಾಯದವರಿಗೆ ಸಕಲ ರೀತಿಯ ಸೌಲಭ್ಯಗಳು ನೀಡಬೇಕಾಗಿರುವುದು ಸರ್ಕಾರದ ಕರ್ತವ್ಯವಾಗಿದೆ. ಮತ್ತು ಇಲ್ಲಿನ ರಾಜಕೀಯ ವ್ಯಕ್ತಿಗಳು, ಚಿಂತಕರು, ಜನಸಾಮಾನ್ಯರು, ಸಿಂಧೋಳ್ಳರು ವಾಸಿಸುವ ಗುಡಾರದ ಕಡೆಗೆ ಗಮನಹರಿಸಬೇಕಾಗಿದೆ.

**ರಾಜಕೀಯ ಸಮಸ್ಯೆ**

"Some people born for rule of Some people born for ruled, but Some people born rule of ruled" ಎಂಬ ಸಿದ್ಧಾಂತದಂತೆ ಬುಡಕಟ್ಟು ಸಮುದಾಯಗಳು ಗುಡ್ಡ-ಗಾಡು, ಗಿರಿ-ಕಂದರಗಳಲ್ಲಿ ತಮ್ಮ ರಕ್ಷಣೆಗೋಸ್ಕರ ತಮ್ಮದೇ ಆದ ಕುಲಪಂಚಾಯಿತಿಯನ್ನು ಹೊಂದಿದ್ದರು. ಇದುವೇ ಪ್ರಸ್ತುತ ರಾಜಕೀಯ ವ್ಯವಸ್ಥೆಗೆ ಪ್ರೇರಣೆಯಾಯಿತು. ಆದರೆ ಆಧುನಿಕ ದಿನಗಳಲ್ಲಿ ರಾಜಕೀಯ ಜೀವನ ಮುಖ್ಯ ಅಂಗವಾಗಿ, ರೂಪುಗೊಂಡಿದೆ ಮತ್ತು ಹೆಮ್ಮರವಾಗಿ ಬೆಳೆದು ನಿಂತಿದೆ. ಇದರಿಂದಾಗಿ ಸಮುದಾಯಗಳ ವ್ಯವಹಾರದ ರಾಜಕೀಯ ಅತಿಮಹತ್ವದ್ದಾಗಿದೆ. ಹಾಗೂ ಸಮಾಜವನ್ನು ಪ್ರಭಾವಿಸುವ ಮುಖ್ಯ ಮೌಲ್ಯ. ಸಮಾಜದ ಗುಣಾತ್ಮಕತೆಯನ್ನು ಹಾಗೂ ಅದರ ಭವಿಷ್ಯವನ್ನು ಅನಾವರಣಗೊಳಿಸುತ್ತದೆ. ಇದರ ದಿಕ್ಕಿನಲ್ಲಿ ಕೇವಲ ಸಾಮಾಜಿಕ, ಆರ್ಥಿಕ ಜೀವನದ ಜೊತೆಗೆ ಅದರ ರಾಜಕೀಯ ಜೀವನದ ಮೇಲೆ ಪ್ರಭಾವ ಬೀರಿತು. "Economic determines Politics" ಎಂಬಂತೆ ಆರ್ಥಿಕವಾಗಿ ಬಲಿಷ್ಠವಾದ ವರ್ಗ ರಾಜಕೀಯವನ್ನು ತನ್ನ ಹಿಡಿತದಲ್ಲಿಟ್ಟುಕೊಂಡಿತ್ತು. ಆದರೆ ಇಂದು ಪ್ರಜಾ ಪ್ರಭುತ್ವದಲ್ಲಿ ಪ್ರತಿಯೊಬ್ಬ ವ್ಯಕ್ತಿ ರಾಜಕೀಯದಲ್ಲಿ ಭಾಗವಹಿಸುವುದು ಅತ್ಯವಶ್ಯಕ.

ಆಧುನಿಕ ದಿನಗಳಲ್ಲಿ ಬುಡಕಟ್ಟು ಸಮುದಾಯಗಳು ರಾಜಕೀಯದ ಕಡೆಗೆ ಹೆಚ್ಚಿನ ಗಮನಹರಿಸುತ್ತಿವೆ. ಕೆಲವೊಂದು ಬುಡಕಟ್ಟು ಸಮುದಾಯಗಳಿಗೆ ಮೀಸಲಾತಿಯನ್ನು ಕಲ್ಪಿಸಿ ರಾಜಕೀಯದಲ್ಲಿ ಸ್ಥಾನಮಾನಗಳನ್ನು ದೊರಕಿಸಿಕೊಡಲಾಗಿದೆ. ಇದು ಪ್ರಜಾಪ್ರಭುತ್ವ ಸರ್ಕಾರದಲ್ಲಿ ಅತ್ಯಂತ ಆಶಾದಾಯಕ ಬೆಳವಣಿಗೆಯಾಗಿದೆ. ೧೯೯೩ರಲ್ಲಿಯ ಕರ್ನಾಟಕ ಸರ್ಕಾರ ಪಂಚಾಯತ್ ರಾಜ್ ವ್ಯವಸ್ಥೆ ಜಾರಿಗೆಯಿಂದಾಗಿ ಸಮಾಜದ ಎಲ್ಲ ಸಮುದಾಯಗಳಿಗೂ ಸರ್ಕಾರಿ ಮತ್ತು ರಾಜಕೀಯ ಕಾರ್ಯ ಚಟುವಟಿಕೆಗಳಲ್ಲಿ ಸಕ್ರೀಯವಾಗಿ ಭಾಗವಹಿಸಲು ಅವಕಾಶ ಕಲ್ಪಿಸಿಕೊಡಲಾಗಿದೆ. ಗ್ರಾಮಪಂಚಾಯತ್, ತಾಲೂಕು ಪಂಚಾಯತ್, ಜಿಲ್ಲಾ ಪಂಚಾಯತ್, ನಗರ ಪಾಲಿಕೆ, ನಗರ ಸಭೆ ಮತ್ತು ಪುರಸಭೆ ಕ್ಷೇತ್ರಗಳಲ್ಲಿ ಮೀಸಲಾತಿ ಸೌಲಭ್ಯ ದೊರಕಿದೆ. ವಿಧಾನ ಸಭೆ ಮತ್ತು ಲೋಕಸಭೆಗಿಂತಲೂ ವಿಶೇಷವಾಗಿ ಗ್ರಾಮ ಪಂಚಾಯಿತಿ, ತಾಲೂಕು ಪಂಚಾಯಿತಿ ಹಾಗೂ ಜಿಲ್ಲೆ ಪಂಚಾಯಿತಿ ರಾಜಕೀಯದಲ್ಲಿ ಸಮಾಜದ ಎಲ್ಲ ವರ್ಗದ ಜನರಿಗೆ ತೊಡಗಿಸಿಕೊಳ್ಳಲು ಹೆಚ್ಚು ಅವಕಾಶ ಕಲ್ಪಿಸಲಾಗಿದೆ. ಆದರೆ ಮೀಸಲಾತಿಯಿಂದ ವಂಚಿತ ಬುಡಕಟ್ಟು ಸಮುದಾಯಗಳು ಇನ್ನು ಸಮಾಜದಲ್ಲಿ ಗುರುತಿಸಿಕೊಂಡಿಲ್ಲ. ಅದರಲ್ಲಿ ಸಿಂಧೋಳ್ಳು ಸಮುದಾಯ ರಾಜಕೀಯದಲ್ಲಿ ಬರದೇ ಇರುವುದು ಗಮನಾರ್ಹ ಮತ್ತು ಶೋಚನೀಯ ಸಂಗತಿಯಾಗಿದೆ.

ಸಿಂಧೋಳ್ಳು ಸಮುದಾಯವು ಅಲೆಮಾರಿ ಜೀವನ ನಡೆಸುತ್ತಿದ್ದರಿಂದ ರಾಜಕೀಯ ಪಡೆಯುವಲ್ಲಿ ತುಂಬಾ ಹಿಂದೆ ಬಿದ್ದಿದ್ದಾರೆ. ಅದಕ್ಕೆ ಮೂಲ ಕಾರಣಗಳೆಂದರೆ ಅವರ ವೃತ್ತಿ. ಸಿಂಧೋಳ್ಳರಿಗೆ ಇಂದಿಗೂ ಚುನಾವಣೆ ಸಂದರ್ಭದಲ್ಲಿ ಮತ ಚಲಾವಣೆ ಮಾಡಬೇಕೆಂಬ ಅರಿವೂ ಸಹ ಕಡಿಮೆಯೇ ಈ ಹಿನ್ನೆಲೆಯಲ್ಲಿ

ಸಿಂಧೋಳ್ಳುರಿಗೆ ಮೀಸಲಾತಿ ನೀಡಿದಾಗ, ಅವರು ಗ್ರಾಮಪಂಚಾಯತಿ ಚುನಾವಣೆಯಲ್ಲಿ ಸ್ಪರ್ಧೆಯಲ್ಲಿ ಇಳಿಯಲು ಇಷ್ಟಪಡುತ್ತಾರೆ. ಆದರೂ ಪ್ರಸ್ತುತ ಸಂದರ್ಭದಲ್ಲಿ ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಒಬ್ಬರು ಪರಿಶಿಷ್ಟ ವರ್ಗ ಪ್ರಮಾಣ ಪತ್ರದ ಮೂಲಕ ಶ್ರೀ. ಎಸ್.ದುರಗಮುರಗಿ ಮುನವಳ್ಳಿ ಚುನಾವಣೆಗೆ ಸ್ಪರ್ಧಿಸಿ ಅದರಲ್ಲಿ ಗೆದ್ದು ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದಾರೆ. ೧೯೯೬ರಲ್ಲಿ ಶಿವಮೊಗ್ಗ ಜಿಲ್ಲೆ ದೇವಿಕೆರೆ ಗ್ರಾಮದಲ್ಲಿ ಶ್ರೀಮತಿ ದೇವಮ್ಮ ಎಂಬುವವರು ಗ್ರಾಮ ಪಂಚಾಯಿತಿ ಚುನಾವಣೆಯಲ್ಲಿ ಗೆದ್ದಿದ್ದಾಳೆ. ಇತ್ತೀಚಿನ ದಿನಗಳಲ್ಲಿ ತಮಗೆ ಮೀಸಲಾತಿ ಪ್ರಮಾಣ ಪತ್ರ ಇಲ್ಲದಿರುವುದರಿಂದ ಶೋಚನೀಯ ಸ್ಥಿತಿಯಲ್ಲಿದೆ.

### ಆರೋಗ್ಯ ಮತ್ತು ನೈರ್ಮಲ್ಯ

ಸಿಂಧೋಳ್ಳರು ವಾಸಿಸುವುದು ಸಾಮಾನ್ಯವಾಗಿ ಊರ ಹೊರಗಿನ ಪ್ರದೇಶಗಳಲ್ಲಿ, ಅಂದರೆ ಊರಿನ ಬಯಲು ಜಾಗದಲ್ಲಿ ಕಾಡು ಕೊನೆಯ ಭಾಗದಲ್ಲಿ ಮತ್ತು ಗುಡ್ಡ ಬೆಟ್ಟ ಪ್ರದೇಶಗಳಲ್ಲಿ ಇವರು ಗುಡಾರ ನಿರ್ಮಿಸಿಕೊಂಡು ವಾಸಿಸುತ್ತಿದ್ದಾರೆ. ಊರ ಹೊರಗಿನ ಪ್ರದೇಶ ಕೆಲವೊಮ್ಮೆ ಕೊಳಚೆ ಪ್ರದೇಶವೂ ಆಗಿರುವುದುಂಟು. ಇವರು ಅನಿವಾರ್ಯವಾಗಿ ಇಂಥ ಸ್ಥಳಗಳಲ್ಲಿ ವಾಸಮಾಡಬೇಕಾದ ಪ್ರಸಂಗ ಒದಗಿಬರುತ್ತದೆ. ಇಂತಹ ಕಡೆಗಳಲ್ಲಿ ಜೀವಿಸಿದಾಗ ಅನೇಕ ರೋಗ ರುಜಿನಗಳಿಗೆ ಬಲಿಯಾಗುತ್ತಾರೆ. ಮಲೇರಿಯಾ, ಜ್ವರ, ಕೆಮ್ಮು, ಆಸ್ತಮಾ, ಸಿಡುಬು ಮತ್ತು ದಡಾರ ಇತ್ಯಾದಿ ಖಾಯಿಲೆಗಳ ಮೂಲಕ ಗುಡಾರದಲ್ಲಿಯೂ ನರಳುತ್ತಿದ್ದಾರೆ. ಆಧುನಿಕ ವೈದ್ಯಕೀಯ ಸೌಲಭ್ಯಗಳು ಇದ್ದರೂ ಅವರು ತಮ್ಮದೇ ವೈದ್ಯಪದ್ಧತಿಯನ್ನು ನಂಬಿಕೊಳ್ಳುವುದುಂಟು. ರೋಗಗಳು ವಾಸಿಯಾಗಲು ನಾಟಿಔಷಧಿ, ದೇವರ ಪ್ರಸಾದ ಮತ್ತು ವಶೀಕರಣ ಮಂತ್ರಗಳನ್ನು ನಂಬಿಕೊಳ್ಳುತ್ತಾರೆ. ಹುಟ್ಟು ಸೂತಕವೆಂದು ತಿಳಿದು, ಗುಡಾರದಲ್ಲಿ ಹೆರಿಗೆ ಮಾಡಿಕೊಳ್ಳುತ್ತಾರೆ ವಿನಃ ಆಸ್ಪತ್ರೆಗೆ ಹೋಗುವುದಿಲ್ಲ. ಯಾವುದೇ ಕಾಯಿಲೆಗಳು ಬಂದರೂ ಇವರು ನಾಟೀ ಔಷಧಿಗೆ ಕೊಟ್ಟಷ್ಟು ಮಹತ್ವ ವೈಜ್ಞಾನಿಕ ಔಷಧಿಗೆ ಕೊಡುವುದಿಲ್ಲ. ಸಾಮಾನ್ಯವಾಗಿ ಕುಲದ ಹಿರಿಯರು, ಮುಖ್ಯಸ್ಥರು ಆಸ್ಪತ್ರೆಗೆ ಹೋಗುವುದಿಲ್ಲ. ಔಷಧಿಗಳಂತೂ ಮುಟ್ಟುವುದೇ ಇಲ್ಲ. ಒಂದು ವೇಳೆ ಕುಲದ ಮುಖ್ಯಸ್ಥ ಬೇರೆ ಔಷಧಿಯನ್ನು ಪಡೆದುಕೊಂಡರೆ ತಮ್ಮ ಕುಲದ ನಿಯಮವನ್ನು ಮೀರಿದಂತಾಗುತ್ತದೆ. ಇದರಿಂದ ಕುಲ ಮಲೀನವಾದಂತಾಗುತ್ತದೆ ಎಂಬ ಭಾವನೆ ಈ ತಿರಸ್ಕಾರದ ಹಿಂದಿರುವ ನಂಬಿಕೆಯಾಗಿರಬಹುದು.

ಗುಡಾರದಲ್ಲಿ ಮಕ್ಕಳು ಒಂದೆ ಸಮನೆ ಅಳುತ್ತಿದ್ದರೆ ರಚ್ಚೆ ಹಿಡಿದಿದೆ ಎನ್ನುತ್ತಾರೆ. ಹೀಗೆ ಅಳುವ ಸಂದರ್ಭದಲ್ಲಿ ಯಾರದೋ ಕೆಟ್ಟ ಕಣ್ಣು ತಗಲಿ, ದೃಷ್ಟಿಯಾಗಿದೆ ಎಂದು ಭಾವಿಸಿಕೊಳ್ಳುತ್ತಾರೆ. ದೃಷ್ಟಿ ನಿವಾರಣೆಗಾಗಿ ಪೊರಕೆಯ ಕೊನೆ ಕಡ್ಡಿಗಳನ್ನು ಎಡಗೈಲಿ ಹಿಡಿದುಕೊಂಡು ಮಗುವಿಗೆ ದೃಷ್ಟಿ ತೆಗೆಯುತ್ತಾರೆ. ಹೀಗೆ ಸಂಪ್ರದಾಯದಂತೆ ಬಂದಿರುವ ಕೆಲವೊಂದು ವಿಧಾನಗಳು ತಮ್ಮ ಗುಡಾರಗಳಲ್ಲಿ ಹಾರೈಕೆ ಮಾಡಿಕೊಳ್ಳಲು ಸದಾ ಕೆಲಸ ನಿರ್ವಹಿಸಲಿದ್ದಾರೆ. ಆದರೆ ರಚ್ಚೆ ಹಿಡಿದಿರುವ ಮಗುವನ್ನು ಎಂದಿಗೂ ಆಸ್ಪತ್ರೆಗಳಿಗೆ ಕರೆದುಕೊಂಡು ಹೋಗುವುದಿಲ್ಲ.

ಸಿಂಧೋಳ್ಳುರು ವಾಸಿಸುವ ಪ್ರದೇಶಗಳಲ್ಲಿ ಸರ್ಕಾರಿ ಆಸ್ಪತ್ರೆ ಇದ್ದರೂ ಹೋಗುವುದಿಲ್ಲ. ಸರ್ಕಾರ

ಪ್ರತಿಯೊಬ್ಬ ನಾಗರಿಕನೂ ಉಚಿತ ಸೌಲಭ್ಯಗಳನ್ನು ನೀಡುತ್ತದೆ. ಇಂದಿನ ವೈದ್ಯಕೀಯ ಚಿಕಿತ್ಸೆಯಿಂದ ಪೋಲಿಯ ನಿರ್ಮೂಲನೆ, ಕುಷ್ಠ ರೋಗ ನಿರ್ಮೂಲನೆಗೆ ಡಾಟ್ಸ್, ಹೊಸ ಪ್ರಸೂತಿ ಕೇಂದ್ರ, ಹೃದಯದ ಜೋಡಣೆ ಹೀಗೆ ಅನೇಕ ಸೌಲಭ್ಯಗಳನ್ನು ಪಡೆಯಲು ಅವರನ್ನು ಪ್ರೋತ್ಸಾಹಿಸುತ್ತದೆ. ಸರ್ಕಾರ ಈ ಸೌಲಭ್ಯಗಳನ್ನು ಈ ಸಮುದಾಯದಲ್ಲಿ ಆರೋಗ್ಯ ಮತ್ತು ನೈರ್ಮಲ್ಯದ ಬಗ್ಗೆ ತಿಳುವಳಿಕೆ ಮೂಡಿಸುತ್ತಿದೆ. ಹಾಗೂ ಹಲವಾರು ವೈದ್ಯಕೀಯ ಸೌಲಭ್ಯಗಳನ್ನು ನೀಡಿದ್ದರೂ, ಇವುಗಳ ಸಂಪೂರ್ಣ ಉಪಯೋಗ ಪಡೆಯಲು ಸಿಂಧೋಳ್ಳುರು ವಿಫಲರಾಗಿದ್ದಾರೆ. ಕಾರಣ ಅವರಲ್ಲಿರುವ -

೧. ಅನಕ್ಷರತೆ

೨. ನಾಟಿ ವೈದ್ಯಪದ್ಧತಿಯಲ್ಲಿ ಅತಿಯಾದ ನಂಬಿಕೆ

೩. ಅವರು ವಾಸಿಸುವ ಕಡೆಯಲ್ಲಿ ಆರೋಗ್ಯ ಇಲಾಖೆಗಳು ಬಹುದೂರದಿಂದ ಇರುವುದು

೪. ಆರೋಗ್ಯ ಇಲಾಖೆಗೆ ಹೋದಾಗ ಅಲ್ಲಿನ ಲಂಚಗುಳಿತನ

೫. ದೇವರ ಪ್ರಸಾದಗಳ ಮೇಲೆ ನಂಬಿಕೆ

**ಶೈಕ್ಷಣಿಕ ಸಮಸ್ಯೆ**

ಕರ್ನಾಟಕದಲ್ಲಿ ಸಿಂಧೋಳ್ಳುರು ಬಡತನದಲ್ಲಿ ಕಂಡುಬರುತ್ತಾರೆ. ಇವರು ಬಡತನದಿಂದ ಶಿಕ್ಷಣ ಪಡೆಯುವಲ್ಲಿ ವಿಫಲರಾಗಿದ್ದಾರೆ. ಇವರು ತಮ್ಮ ಬದುಕಿಗಾಗಿ ಭಿಕ್ಷಾಟನೆಯನ್ನು ಅವಲಂಬಿಸಿರುವುದರಿಂದ ಜೀವನ ಸುಖಮಯವಾಗಿರದೆ, ಸಂಕಷ್ಟದಲ್ಲಿ ಬಳಲುವುದನ್ನು ಕಾಣಬಹುದಾಗಿದೆ. ಹಾಗೂ ಇವರು ತಮ್ಮ ಮಕ್ಕಳನ್ನು ಚಿಕ್ಕ ವಯಸ್ಸಿನಲ್ಲಿಯೇ ಭಿಕ್ಷಾಟನೆಗೆ ಕಳುಹಿಸಿಬಿಡುತ್ತಾರೆ. ಅದಕ್ಕೆ ಕಾರಣ ಈ ಸಮುದಾಯದ ಮಕ್ಕಳ ಹೆಗಲ ಮೇಲೆ ಶಾಲೆಯ ಪಾಠಿ ಚೀಲದ ಬದಲು ಜೋಳಿಗೆ ಇರುವುದು ಸರ್ವೆ ಸಮಾನ್ಯವಾದ ವಿಷಯವಾಗಿದೆ. ಸಿಂಧೋಳ್ಳುರು ತಮ್ಮ ಮಕ್ಕಳನ್ನು ಭಿಕ್ಷೆಗೆ ಕಳುಹಿಸಿ ತಮ್ಮ ಜೀವನವನ್ನು ಸಾಗಿಸಿಕೊಳ್ಳುತ್ತಾರೆ. ಇದು ಮಕ್ಕಳ ಶೈಕ್ಷಣಿಕ ಜೀವನದಲ್ಲಿ ಅಡ್ಡಿ ಉಂಟುಮಾಡಿದೆ.

ಪ್ರಾಥಮಿಕ ಶಿಕ್ಷಣವನ್ನು ಸರ್ಕಾರವು ಉಚಿತವಾಗಿ ನೀಡಿದರೂ ಸಹ ಅವರು ಈ ಸೌಲಭ್ಯವನ್ನು ಪಡೆಯುವಲ್ಲಿ ವಿಫಲವಾಗಿದ್ದಾರೆ. ಶಿಕ್ಷಣ ಪಡೆಯುವಲ್ಲಿ ಮೀಸಲಾತಿ ಮತ್ತು ಆರ್ಥಿಕ ವಿಷಯಗಳು ಸಹ ಸಹಾಯಕವಾಗುತ್ತವೆ. ಅಂತಹ ಮೀಸಲಾತಿ ಮತ್ತು ಆರ್ಥಿಕ ಭದ್ರತೆ ಇವರಿಗಿಲ್ಲವಾಗಿದೆ. ಅಂದಿನ ಜೀವನಕ್ಕೆ ಬೇಕಾದಷ್ಟನ್ನು ಮಾತ್ರ ಭಿಕ್ಷೆ ಬೇಡಿ ಪಡೆದುಕೊಂಡು ನಾಳಿನ ಬಗ್ಗೆ ಚಿಂತಿಸದೇ ತಮ್ಮ ಜೀವನವನ್ನು ಸಾಗಿಸುತ್ತಾರೆ. ಇವರಲ್ಲಿ ಚಿಕ್ಕ ಮಕ್ಕಳ ಪಾಲು ಸಹ ಇದೆ. ಹೀಗಿರುವಾಗ ಅವರು ಇನ್ನೂ ಶಾಲೆಗೆ ಹೋಗಬೇಕು, ಅಕ್ಷರ ಜ್ಞಾನ ಕಲಿತು ಇತರರ ಹಾಗೆ ನಾವು ನಾಗರೀಕರೆನಿಸಿಕೊಳ್ಳಬೇಕು ಎನ್ನುವುದರ ಕಡೆಗೆ ಯೋಚನೆ ಮಾಡುವುದೇ ವಿರಳ. ಸಿಂಧೋಳ್ಳು ಸಮುದಾಯದ ಶೇ. ೯೦ರಷ್ಟು ಜನರು ಬಡತನ ರೇಖೆಗಿಂತ ಕೆಳಗಿನ ಜೀವನ ಸಾಗಿಸುತ್ತಿದ್ದಾರೆ. ಒಂದೆಡೆ ನೆಲೆ ನಿಲ್ಲಲ್ಲು ಮನೆ ಮಾಡಿಕೊಂಡು, ದುಡಿದು ಊಟ ಮಾಡಲು ಉತ್ತಮ ಕೆಲಸವಿಲ್ಲದೆ ಭಿಕ್ಷೆಯನ್ನೇ ಮೂಲ ಕಸುಬನ್ನಾಗಿಸಿಕೊಂಡಿದ್ದಾರೆ. ಇನ್ನು ಮಕ್ಕಳು ತಮ್ಮ ತಂದೆ-ತಾಯಿಗಳ ಹಿಂದೆ ಭಿಕ್ಷೆ ಬೇಡಲು ಹೋಗುವುದುಂಟು. ಇದರಿಂದ ಇವರ ಶಿಕ್ಷಣದಲ್ಲಿ ಆಂತರಿಕ ಪೆಟ್ಟು ಬೀಳುತ್ತದೆ. ಒಟ್ಟಾರೆ ಹೇಳುವುದಾದರೆ ಶೈಕ್ಷಣಿಕ ಭದ್ರತೆ ಇಲ್ಲದೆ

ಬಡತನದಿಂದ ಜೀವನ ಸಾಗಿಸುವ ಇವರಿಗೆ ಶಿಕ್ಷಣವನ್ನು ಪಡೆಯುವಲ್ಲಿ ಆಸೆಯೇ ಇಲ್ಲದಂತಾಗಿದೆ. ಇವರು ಶೈಕ್ಷಣಿಕವಾಗಿ ಹಿಂದುಳಿದಿರುವುದಕ್ಕೆ ಈ ಕೆಳಗಿನ ಅಂಶಗಳು ಕಾರಣವಾಗಿವೆ.

೧. ಆರ್ಥಿಕ ಸಮಸ್ಯೆ.

೨. ಪ್ರಾಥಮಿಕ ಶಿಕ್ಷಣ ಪಡೆಯುವಲ್ಲಿ ಜಾತಿ ಪ್ರಮಾಣಪತ್ರ ಬೇಕಾಗಿರುವುದು ಕಡ್ಡಾಯ.

೩. ಸಿಂಧೋಳ್ಳುರು ವಾಸಿಸುವ ನೆಲೆಗಳಲ್ಲಿ ಶಾಲೆಗಳು ಇರದೆ, ಇರುವುದು.

೪. ದೂರದ ಪ್ರದೇಶಗಳಲ್ಲಿ ಸರ್ಕಾರಿ ಶಾಲೆಗಳು ಇದ್ದರು ಶಿಕ್ಷಕರ ಕೊರತೆ.

೫. ಶಿಕ್ಷಣಪಡೆಯುವಲ್ಲಿ ಮಾರ್ಗದರ್ಶನದ ಕೊರತೆ.

೬. ಸಿಂಧೋಳ್ಳುರು ತಮ್ಮ ಮಾತೃ ಭಾಷೆ ತೆಲುಗನ್ನು ಸ್ಪಷ್ಟವಾಗಿ ಮಾತಾನಾಡುತ್ತಿದ್ದು, ಕನ್ನಡ ಸ್ಪಷ್ಟವಾಗಿ ಮಾತನಾಡುವುದಿಲ್ಲ. ಪಠ್ಯಪುಸ್ತಕದ ಭಾಷೆಗೂ ಇವರು ಮಾತನಾಡುವ ಭಾಷೆಗೂ ತುಂಬಾ ವ್ಯತ್ಯಾಸ ಕಂಡುಬರುತ್ತದೆ.

**ಇನ್ನಿತರ ಸಮಸ್ಯೆಗಳು**

* ಬಹುತೇಕವಾಗಿ ಸಿಂಧೋಳ್ಳುರು ಗುಡಾರಗಳಲ್ಲಿ ವಾಸ ಮಾಡುತ್ತಿದ್ದಾರೆ. ಸರ್ಕಾರದ ಅಲಕ್ಷತೆಗೆ ತುತ್ತಾಗಿ ಇವರು ಡಾ. ಬಿ.ಆರ್.ಅಂಬೇಡ್ಕರ್ ಯೋಜನೆ, ಜನತಾ ಆಶ್ರಯ ಮನೆಗಳು, ವಾಲ್ಮೀಕಿ ಆಶ್ರಯ ಮನೆ ಮುಂತಾದ ಯೋಜನೆಗಳಿಂದ ವಂಚಿತರಾಗಿದ್ದಾರೆ. ಸರ್ಕಾರದಿಂದ ದೊರಕುತ್ತಿರುವ ನೆರವು ಅತ್ಯಲ್ಪ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ನೀಡುವ ಆದ್ಯತೆಯನ್ನು ಸಿಂಧೋಳ್ಳು ಸಮುದಾಯ ನೀಡಲಾಗುತ್ತಿಲ್ಲ.

* ಇತ್ತೀಚಿನ ದಿನಗಳಲ್ಲಿ ಸಿಂಧೋಳ್ಳು ಸಮುದಾಯ ಕೃಷಿ ಆಧಾರಿತ ಕೂಲಿ ಚಟುವಟಿಕೆಗಳಲ್ಲೇ ತೊಡಗಿರುವುದರಿಂದ ಅವರಿಗೆ ಹೆಚ್ಚು ಭೂಮಿ ಬೇಕಾಗಿದೆ. ಹೀಗಾಗಿ ಈ ಜನವರ್ಗವು ಅಧಿಕ ಭಿಕ್ಷಾಟನೆಯಿಂದ ಇಳಿಕೆಯ ಮೂಲಕ ಹೊಸ ಸಂಕ್ರಮಣ ಹಂತದಲ್ಲಿ ತಲುಪಬಹುದು. ಆದ್ದರಿಂದ ಇವರಿಗೆ ಸರ್ಕಾರ ಭೂಮಿ ನೀಡಬೇಕಾಗಿರುವುದು ಅನಿವಾರ್ಯವಾಗಿದೆ.

* ಗುಡಾರದ ಮಕ್ಕಳು ಹಸಿವಿನಿಂದ ಕಂಗಾಲಾಗಿದ್ದು, ಅವರಿಗೆ ಅಂಗನವಾಡಿ ಕೇಂದ್ರಗಳ ಮತ್ತು ಪಡಿತರ ಚೀಟಿ ಸೌಲಭ್ಯವನ್ನು ಕೊರತೆಯೂ ಇದೆ.

* ಸರ್ಕಾರದ ವತಿಯಿಂದ ಈ ಸಮುದಾಯದ ಜನರಿಗೆ ದೊರೆಯುವ ರಾಷ್ಟ್ರೀಕೃತ ವಾಣಿಜ್ಯ ಬ್ಯಾಂಕುಗಳಾದ, ಸಹಕಾರಿ ಬ್ಯಾಂಕು, ಸ್ಟೇಟ್‌ಬ್ಯಾಂಕ್ ಆಫ್ ಮೈಸೂರು ಮೊದಲಾದವುಗಳಿಂದ ಸಾಲದ ವ್ಯವಸ್ಥೆ ದೊರೆಯುತ್ತಿಲ್ಲ. ಇವರ ಅಜ್ಞಾನ ಮತ್ತು ಅನಕ್ಷರತೆಯಿಂದ ಸಾಲನೀಡುವಲ್ಲಿ ಬ್ಯಾಂಕಿನ ಅಧಿಕಾರಿಗಳು ಹಿಂದೆ ಮುಂದೆ ನೋಡುತ್ತಿದ್ದಾರೆ. ಆದಕಾರಣ ಈ ಸಮುದಾಯದ ಭವಿಷತ್ತಿನ ದಿನಗಳ ಬಗ್ಗೆ ಆತಂಕಪಡುತ್ತಿದೆ.

**ಸರ್ಕಾರದ ಪಾತ್ರ**

ಪ್ರತಿಯೊಂದು ಸಮುದಾಯವು ಪರಿವರ್ತನಾಶೀಲವಾದದ್ದು. ಆದಿವಾಸಿಗಳಲ್ಲಿ ಪರಿವರ್ತನೆ ಎಂಬುದು ಆಮೆ ಗತಿಯಲ್ಲಿರುತ್ತದೆ. ಕೆಲವು ಬುಡಕಟ್ಟುಗಳಲ್ಲಿ ಯಾವ ಪರಿವರ್ತನೆ ಆಗುತ್ತಿಲ್ಲ ಎಂಬ ಭಾವನೆ

ಒಂದು ಕಾಲದಲ್ಲಿ ಇತ್ತು. ಆದರೆ ಇಂದು ಬುಡಕಟ್ಟು ಜನ ಬದುಕನ್ನು ಗಮನಿಸಿದರೆ ಹಲವಾರು ಬದಲಾವಣೆಗಳು ಆಗಿರುವುದು ಗೋಚರವಾಗುತ್ತಿದೆ. ಈ ಪರಿವರ್ತನೆಗಳಿಂದ ಆ ಸಮುದಾಯಗಳು ಹೇಗೆ ಬದುಕುತ್ತಿವೆ. ಈಗ ಅವರಲ್ಲಿ ಉದ್ಭವಿಸಿರುವ ಸಮಸ್ಯೆಗಳೇನು? ಹಿಂದಿನ ಮತ್ತು ಇಂದಿನ ಬದುಕಿಗೂ ಇರುವ ವ್ಯತ್ಯಾಸಗಳೇನು? ಅವರನ್ನು ಮುಖ್ಯ ವಾಹಿನಿಗೆ ತರುವಲ್ಲಿ ಸರ್ಕಾರ ಹೇಗೆ ಸ್ಪಂಧಿಸುತ್ತಿದೆ, ಎಷ್ಟರ ಮಟ್ಟಿಗೆ ಅವರು ತಮ್ಮ ಬದುಕನ್ನು ಉನ್ನತ ಮಟ್ಟದಲ್ಲಿ ಅಭಿವೃದ್ಧಿಗೊಳಿಸಿ ಕೊಂಡಿದ್ದಾರೆ ಎಂಬಿತ್ಯಾದಿ ಅಂಶಗಳ ಕಡೆಗೆ ಗಮನಹರಿಸಿದಾಗ ನಿರಾಶಾಭಾವನೆ ಉಂಟಾಗುತ್ತದೆ.

ಸರ್ಕಾರ ಬುಡಕಟ್ಟು ಜನರಿಗೆ ಸೌಲಭ್ಯಗಳನ್ನು ಒದಗಿಸಿಕೊಡುವಲ್ಲಿ ವಿಫಲವಾಗಿದೆ. ಜೊತೆಗೆ ಇಂಥ ಸಮುದಾಯಗಳ ಬಗೆಗೆ ಸಂಕುಚಿತ ಭಾವನೆಯನ್ನು ಹೊಂದಿದ್ದು, ಅವರ ಅಭಿವೃದ್ಧಿಯ ಬಗೆಗೆ ಯೋಚನೆ ಮಾಡುವುದು ತುಂಬಾ ವಿರಳವೆಂದೇ ಹೇಳಬಹುದು. ಅದರಲ್ಲೂ ಪಂಚವಾರ್ಷಿಕ ಯೋಜನೆ ಪ್ರಾರಂಭದಿಂದ ಈಗಿನ ಪಂಚವಾರ್ಷಿಕ ಯೋಜನೆಯವರೆಗೂ ದೊಡ್ಡ ದೊಡ್ಡ ಅಣೆಕಟ್ಟುಗಳು, ಶಕ್ತಿ ಸ್ಥಾವರಗಳು, ಗಣಿಗಳನ್ನು ಕಟ್ಟುವುದು, ವಿದೇಶಿ ಸ್ವರೂಪ ರಸ್ತೆಗಳ ನಿರ್ಮಾಣ (ವರ್ತುಲಕಾರ ರಸ್ತೆ), ಗಗನಚುಂಬಿ ಕಟ್ಟಡಗಳು ಇನ್ನು ಅನೇಕ ಸರ್ಕಾರದ ಅಭಿವೃದ್ಧಿ ದ್ಯೋತಕಗಳು ಸಾಮಾಜಿಕ ವ್ಯವಸ್ಥೆಯಲ್ಲಿ ಕಂಡುಬರುತ್ತವೆ. ಆದರೆ ಅದೆಷ್ಟೋ ಬುಡಕಟ್ಟು ಸಮುದಾಯಗಳಿಗೆ ವಾಸಿಸಲ್ಲಿಕ್ಕೆ ಸೂರು ಇಲ್ಲ. ಕುಡಿಯಲ್ಲಿಕ್ಕೆ ನೀರಿಲ್ಲ. ಅಕ್ಷರ ಕಲಿಯಲ್ಲಿಕ್ಕೆ ಶಾಲೆ ಇಲ್ಲ. ಆರೋಗ್ಯ, ರಸ್ತೆ ಮುಂತಾದ ಅಭಿವೃದ್ಧಿಗಳಿಂದ ಇಂದಿಗೂ ವಂಚಿತರಾಗಿದ್ದಾರೆ. ಕೊನೆಗೂ ಮೇಲ್ಜಾತಿಗಳ ದೌರ್ಜನ್ಯ ತಪ್ಪಿಲ್ಲ. ಬ್ರಿಟೀಷ್‌ರಿಂದ ನಮ್ಮ ದೇಶ ಬಿಡುಗಡೆಯನ್ನು ಪಡೆದಿದ್ದರೂ ಇಂದಿನ ಸರ್ಕಾರ ಮೂಲಭೂತ ಬದಲಾವಣೆಯನ್ನು ಮಾಡುವಲ್ಲಿ ಸೋತಿದೆ.

"ನಮ್ಮ ಶ್ರೇಣೀಕೃತ ಸಾಮಾಜಿಕ ಸಂಗಟನೆಯಲ್ಲಿ ಸಿಂಧೋಳ್ಳುರನ್ನು "ಧಾರ್ಮಿಕ ಭಿಕ್ಷುಕರು" ಎಂದು ಕರೆಯುವುದುಂಟು".[೨] ಇವರು ರಾಜ್ಯದ ನಾನಾ ಭಾಗಗಳಲ್ಲಿ ಕಂಡುಬರುತ್ತಾರೆ. ಅವರು ಹೆಚ್ಚಾಗಿ ಹಾಳುಮಂಟಪ, ದೇವಸ್ಥಾನ, ಗುಡಿ-ಗುಂಡಾರಗಳು, ಕೊಳಚೆ ಪ್ರದೇಶ, ಊರಿನ ಬಯಲು ಸ್ಥಳಗಳಲ್ಲಿ ವಾಸಿಸುತ್ತಿರುವುದು ಸಹಜವಾಗಿದೆ. ಸಮಾಜದಲ್ಲಿ ಪಡೆಯುವ ಎಲ್ಲಾ ಮೂಲಭೂತ ಸೌಲಭ್ಯಗಳಿಂದ ವಂಚಿತರಾಗಿದ್ದು ಅಭದ್ರತೆಯಿಂದಲೇ ಜೀವಸ ನಡೆಸುತ್ತಿದ್ದಾರೆ. "ಅಲ್ಲಲ್ಲಿ ಗುಡಾರಗಳನ್ನು ನಿರ್ಮಿಸಿ ಕೊಂಡರು, ಅಧಿಕಾರಿಗಳು ಯಾವುದೇ ಮುನ್ಸೂಚನೆ ನೀಡದೇ ಅವರ ಗುಡಾರಗಳನ್ನು ಕೆಡವಿರುವುದು ಹುಬ್ಬಳ್ಳಿಯ ಸಿದ್ದೇಶ್ವರ ಕಾಲೋನಿಯೆ ಜ್ವಲಂತ ಸಾಕ್ಷಿಯಾಗಿದೆ".[೩] ಇದರ ಸಮಸ್ಯೆಯಿಂದ ಅಲ್ಲಿನ ಜನರು ಅಲ್ಲಿಯೇ ವಾಸಿಸುತ್ತಿದ್ದಾರೆ.

ಸರ್ಕಾರ ಮತ್ತು ಸಿಂಧೋಳ್ಳುರ ಮಧ್ಯೆ ಇರುವ ವೈರುಧ್ಯಗಳಿಗಿಂತ, ಇಂಥ ಬುಡಕಟ್ಟು ಸಮುದಾಯಗಳ ಬಗೆಗೆ ಸರ್ಕಾರ ದ್ವಂದ್ವಾತ್ಮಕನೀತಿಗಳನ್ನು ಅನುಸರಿಸುತ್ತಿದೆ. ಇಂದು ಈ ಸಮುದಾಯದ ಸೌಲಭ್ಯಗಳಿಂದ ಪಕ್ಷಪಾತ ಮಾಡಲಾಗುತ್ತದೆ. "ಬುಡಕಟ್ಟು ಸಮುದಾಯಗಳು ಇಂದು ಸರ್ಕಾರದ ಅನುಕಂಪವನ್ನಲ್ಲದೆ 'ತಾಯ್' ಮನಸ್ಸಿನ ಉಪಯುಕ್ತ ಯೋಜನೆಗಳನ್ನು ನಿರೀಕ್ಷಿಸುತ್ತವೆ. ಸಾಮಾಜಿಕವಾಗಿ, ಆರ್ಥಿಕವಾಗಿ, ಶೈಕ್ಷಣಿಕವಾಗಿ ಈ ಸಮುದಾಯಗಳು ಇನ್ನು ನೂರುವರ್ಷಗಳು

ಹಿಂದಿವೆ".[೪] ಸಾಮಾಜಿಕ ವ್ಯವಸ್ಥೆಯಲ್ಲಿ ಹಿಂಗಿನ ಸಮಸ್ಯೆಗಳಿಗಿಂತಲೂ, ಇಂದಿನ ದಿನದಲ್ಲಿ ಸಮಸ್ಯೆಗಳು ಅಧಿಕವಾಗಿವೆ. ಸರ್ಕಾರ ಈ ಸಮುದಾಯದ ಬಗೆಗೆ ಸಂಪೂರ್ಣ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸಿದೆ, ಅಲ್ಪ ರೀತಿಯಲ್ಲಿ ಸೌಲಭ್ಯಗಳನ್ನು ನೀಡಿ ಸಹ ಕರಿಸಿ, ಕಾರ್ಯನಿರ್ವಹಿಸಿದೆ. ಅದು ಸಂಘಟನೆಗಳ ಮೂಲಕ ಆದರೂ ಸಿಂಧೋಳ್ಳು ಸಮುದಾಯ ಜಾಗತೀ 'ರಣದ ಸಂದರ್ಭದಲ್ಲಿ ಅನೇಕ ಹೊಸ ಸಮಸ್ಯೆಗಳೊಂದಿಗೆ ಮುಖಾಮುಖಿಯಾಗಬೇಕಾಗಿದೆ. ಒಟ್ಟಿನಲ್ಲಿ ಸರ್ಕಾರ ಈ ಸಮುದಾಯಕ್ಕೆ ಸೌಲಭ್ಯಗಳನ್ನು ನೀಡದೆ ಕಡೆಗಣಿಸಿರುವುದು ಈ ಅಧ್ಯಯನದಿಂದ ತಿಳಿದುಬರುತ್ತದೆ.

ಕರ್ನಾಟಕದ ಬಳ್ಳಾರಿ ಜಿಲ್ಲೆಯ ಕಂಪ್ಲಿಯ ಗ್ರಾಮದಲ್ಲಿ ಒಂದು ಪ್ರಾಥಮಿಕ ಶಾಲೆ ಬಿಟ್ಟರೆ, ಉಳಿದ ಸಿಂಧೋಳ್ಳು ವಾಸಿಸುವ ಸ್ಥಳಗಳಲ್ಲಿ ಪ್ರಾಥಮಿಕ ಶಾಲೆಗಳು ಕಂಡುಬರುವುದಿಲ್ಲ. ಅದು ಒಂದು ಶಾಲೆ ಇದ್ದರೂ ಸುಸ್ಥಿತಿಯಲ್ಲಿದೆ. ಅದನ್ನು ಉಳಿಸಿಕೊಂಡು ಶಿಕ್ಷಕರು ಕಾರ್ಯನಿರ್ವಹಿಸುತ್ತಿದ್ದಾರೆ. ಉಳಿದಂತೆ ಈ ಸಮುದಾಯದ ಕಾಲೋನಿಗೂ ಶಾಲೆಗೂ ಬಹಳ ದೂರವಿದೆ. ಮೀಸಲಾತಿಯನ್ನು ಪಡೆಯದ ಕುಟುಂಬಗಳು ಅನೇಕ ಸೌಲಭ್ಯಗಳಿಂದ ವಂಚಿತರಾಗಿದ್ದಾರೆ. ಸೌವದತ್ತಿ ತಾಲ್ಲೂಕಿನ ಹಗ್ಗದ ದೇವರ ಓಣಿಯಲ್ಲಿ ವಾಸಿಸುವ ವಿದ್ಯಾರ್ಥಿ ರವಿ ಎಂಬುವನು ಪಿ.ಯು.ಸಿ. ಪ್ರಥಮ ದರ್ಜೆಯಲ್ಲಿ ಉತ್ತೀರ್ಣನಾದರೂ, ಮುಂದಿನ ಡಿ.ಇಡಿ. ವ್ಯಾಸಂಗಕ್ಕಾಗಿ ಸೇರಲು ಮೀಸಲಾತಿಯಿಂದಾಗಿ ತೊಂದರೆ ಅನುಭವಿಸಿದ್ದಾನೆ. ಮಕ್ಕಳಿಗೆ ಉತ್ತಮ ಶಿಕ್ಷಣ ನೀಡುವಲ್ಲಿ ಆತಂಕಕ್ಕೆ ಒಳಗಾಗಿದ್ದಾರೆ. ಪಡಿತರ ಚೀಟಿ ಅಲ್ಪ ಜನರಿಗೆ ಮಾತ್ರ ಸಿಕ್ಕಿದೆ. ಇನ್ನು ಅನೇಕ ವ್ಯಕ್ತಿಗಳಿಗೆ ಸಿಗಬೇಕಾಗಿದೆ. ವಸತಿ ವ್ಯವಸ್ಥೆಯಂತೂ ಇನ್ನು ಗುಡಾರದಲ್ಲಿ ವಾಸಿಸುವ ವ್ಯಕ್ತಿಗೆ ಒಂದು ಮನೆ ನೀಡುವುದು ಅನಿವಾರ್ಯವಾಗಿದೆ. ಆದಕಾರಣ ಸರ್ಕಾರ ಸಿಂಧೋಳ್ಳು ಸಮುದಾಯದ ಮೇಲೆ ಗಮನಹರಿಸಿ ಕನಿಷ್ಠ ಮೂಲಭೂತ ಸೌಕರ್ಯಗಳನ್ನಾದರು ಒದಗಿಸಿದರೆ, ಮುಂದಿನ ದಿನಮಾನಗಳಲ್ಲಿ ಅಲ್ಪಮಟ್ಟಿನ ಬದಲಾವಣೆಗಳನ್ನು ಕಾಣಲು ಸಾಧ್ಯವಾಗಬಹುದು.

**ಸಂಘಟನೆಗಳು**

ಒಂದು ಸಮುದಾಯದ ಪ್ರಗತಿ ಸಂಘಟನೆಯ ಆಧಾರದ ಮೇಲೆ ನಿಂತಿರುತ್ತದೆ. ಇದು ಸಮಸ್ಯೆಗಳಿಗೆ ಸಂಘಟನೆಯಿಂದ ಪರಿಹಾರ ಸಾಧ್ಯ. ಸಮಸ್ಯೆಗಳ ರಂಗದಲ್ಲಿ ಕ್ರಾಂತಿಕಾರಕ ಬದಲಾವಣೆಯೆ ಸಂಘಟನೆ ಉಂಟುಮಾಡುತ್ತದೆ. ಇಂದಿನ ಆಧುನಿಕ ದಿನಗಳಲ್ಲಿ ಅನೇಕ ಸಮುದಾಯಗಳು ಕೊಳಚೆ ಪ್ರದೇಶಗಳಲ್ಲಿ, ಯಾವುದೇ ಸೌಲಭ್ಯಗಳಿಲ್ಲದೆ ಸ್ಥಳದಲ್ಲಿ, ಅನೇಕ ಸಮಸ್ಯೆಗಳಿಂದ ಕೂಡಿರುವ ಸ್ಥಳದಲ್ಲಿ ವಾಸಿಸುತ್ತಿದ್ದಾರೆ.

ಸಂವಿಧಾನ ಬದ್ಧವಾಗಿ ೫೪ ವರ್ಷಗಳಿಂದ ಸಿಂಧೋಳ್ಳು ಸಮುದಾಯ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಸಾಧನೆ ಕಡಿಮೆ ಗತಿಯಲ್ಲಿರುವುದು ಚಿಂತನೀಯವಾಗಿದೆ. ಇಂದಿಗೂ ಬದುಕಿಗಾಗಿ ಕಂಪ್ಲಿಯ ಜನರು ಹೊಸಪೇಟೆಯ ಅನಂತಶಯನಗುಡಿಗೆ ಅಲೆಮಾರಿಯ ಜೀವನ ತಪ್ಪಿಲ್ಲ. ಬಹುಸಂಖ್ಯಾವಾರು ಗುಡಾರಗಳಲ್ಲಿ ವಾಸಿಸುತ್ತಿದ್ದಾರೆ. ಭಿಕ್ಷಾವೃತ್ತಿಯಿಂದ ಅವಮಾನ ಅತಂತ್ರ ಬದುಕು ನಡೆಸುತ್ತಿದ್ದಾರೆ. ಭಾರತದ ಮೂಲನಿವಾಸಿಗಳಾದರೂ ಭಾರತದ ಎರಡನೆಯ ದರ್ಜೆಯ ಪ್ರಜೆಗಳಂತೆ ಕಡೆಗಣಿಸಲ್ಪಟ್ಟಿದ್ದಾರೆ. ಇಡಿ ಬದುಕು ಧಾರ್ಮಿಕ ಭಿಕ್ಷಾವೃತ್ತಿಯಿಂದ ಕಾಲ ಕಳೆಯುತ್ತಿದ್ದಾರೆ. ಇಂದು ಇತರ ಸಮಾಜಗಳಿಗೆ

ಮತ್ತು ಸರ್ಕಾರಕ್ಕೆ ಸಿಂಧೋಳ್ಳು ಸಮಾಜ ಧಾರ್ಮಿಕ ಭಿಕ್ಷಾವೃತ್ತಿ ಬೇಡವಾಗಿದೆ. ಇದರಿಂದ ಈ ಸಂಪ್ರದಾಯ ಮಾಯವಾಗುವುದರಲ್ಲಿ ಸಂದೇಹವಿಲ್ಲವೆನಿಸುತ್ತದೆ.

ಬಳ್ಳಾರಿ ಜಿಲ್ಲೆಯ ಗುಡಾರ ಗುಡಿಸಿ ನಿವಾಸಿಗಳ ಕಲ್ಯಾಣ ಸಂಘದ ಅಧ್ಯಕ್ಷರಾದ ಶ್ರೀ ಮಾಧವರಾವ್ ಜಿ. ಅವರು ಈ ಜಿಲ್ಲೆಯ ಗೋಸಂಗಿ ಸಮುದಾಯದಲ್ಲಿ ಬೆಳಕಿಗೆ ಬಂದವರು ಮೊದಲಿಗರಾಗಿದ್ದಾರೆ. ಇವರು ಸಿಂಧೋಳ್ಳು ಸಮುದಾಯದ ಅನೇಕ ಸೌಲಭ್ಯಗಳು ನೀಡಿ ಸಂಘಟನೆಗೆ ರೂವಾರಿಯಾಗಿದ್ದಾರೆ.

ಸಿಂಧೋಳ್ಳು ಸಮಾಜದ ಆತ್ಮಗೌರವ, ಸ್ವಾಭಿಮಾನ, ನೈತಿಕ ಬಲ ಹೆಚ್ಚಿಸಲು ಸಂಘಟನೆಯ ಮೂಲಕದಿಂದ ಮಾತ್ರ ಸಾಧ್ಯ. ಇತರೆ ಸಮುದಾಯಗಳಂತೆ ಪರಸ್ಪರ ಐಕ್ಯತೆ ಸಂಬಂಧವನ್ನು ಕಲ್ಪಿಸುವುದರ ಮೂಲಕ ತನ್ನ ನೈತಿಕ ಶಕ್ತಿಯನ್ನು ಹೆಚ್ಚಿಸುವುದು ಸಂಘಟನೆಯ ಧ್ಯೇಯೋದ್ದೇಶಗಳಿಂದ ಮಾತ್ರ ಸಾಧ್ಯವೆಂದು ಶ್ರೀ. ಮಾಧವರಾವ್ ಜಿ. ಅಭಿಪ್ರಾಯವಾಗಿತ್ತು. ಇವರ ಅಧ್ಯಕ್ಷತೆಯ ಮೇರೆಗೆ ದಿನಾಂಕ ೨, ಜನವರಿ ೨೦೦೫ರಂದು ಬಳ್ಳಾರಿ ಜಿಲ್ಲೆಯ ಹೊಸಪೇಟೆಯ ತಾಲ್ಲೂಕಿನ ಬುಕ್ಕಸಾಗರ ಗ್ರಾಮದ ಸ್ವಾತಿಕುಂಟೆಯಲ್ಲಿ ಸಿಂಧೋಳ್ಳು ಸಮಾಜದ ನೆಲೆಯಲ್ಲಿ "ಸಿಂಧೋಳ್ಳು ಸಮಾಜ ಕಲ್ಯಾಣ ಸಂಘ"ವು ಸರ್ವಾನುಮತದಿಂದ, ಪದಾಧಿಕಾರಿಗಳ ಮಾಡಲಾಯಿತು. (ಅನುಬಂಧ: ೩) ಹೀಗೆ ಸಂಘ ಅನಾವರಣ ಗೊಂಡ ನಂತರ ಶ್ರೀ ನಾಗಪ್ಪನವರು ಆಯ್ಕೆ ಮಾಡಲಾಯಿತು.

ರಾಹುಲ್ ನಾಗಪ್ಪನವರು ಮೊದಲು ದಲಿತ ಸಂಘಟನೆಯಲ್ಲಿ ಕೆಲಸಮಾಡಿ ಅನೇಕ ಸಂಘಟನೆಯಲ್ಲಿ ಸದಸ್ಯರಾಗಿದ್ದವರು ಇವರು ತಮ್ಮ ಸಮುದಾಯದ ಅಭಿವೃದ್ಧಿ ಪಡಿಸುವ ದಿಕ್ಕಿನಲ್ಲಿ ಸರ್ಕಾರಕ್ಕೆ ಅನೇಕ ಮನವಿಪತ್ರ ಕೊಟ್ಟಿರುವುದುಂಟು. ವಿಚಾರ ಸಂಕೀರ್ಣಗಾಗಿ ಬುಡಕಟ್ಟು ಅಧ್ಯಯನ ವಿಭಾಗ ಕನ್ನಡ ವಿಶ್ವವಿದ್ಯಾಲಯ, ಹಂಪಿ. ಬೆಂಗಳೂರು ಮತ್ತು ದೆಹಲಿಗಳಿಗೆ ಹೋಗಿರುವುದುಂಟು. ಈಗಾಗಲೇ ಶ್ರೀ ನಾಗಪ್ಪ ಅವರು ಸಿಂಧೋಳ್ಳು ವಾಸಿಸುವ ಕಡೆಗಳಲ್ಲಿ ತಾವೇ ಹೋಗಿ ಅಲ್ಲಿ 'ಸಿಂಧೋಳ್ಳು ಸಮಾಜ ಕಲ್ಯಾಣ ಸಂಘ'ವೆಂದು ನಾಮಫಲಕ ಹಾಕಿಕೊಂಡು ಬರುತ್ತಾರೆ. (ಅನುಬಂಧ: ೫) ಇನ್ನೂ ಕೆಲವೆ ದಿನಗಳಲ್ಲಿ ಸಿಂಧೋಳ್ಳು ಸಮಾಜ ಕಲ್ಯಾಣ ಸಂಘ ಪ್ರಬಲಗೊಂಡು ಅವರ ಸಮಸ್ಯೆಗಳನ್ನು ಕಡಿಮೆಮಾಡುವ ದಿಕ್ಕಿನಲ್ಲಿ ದಾಪುಗಾಲು ಹಾಕುತ್ತಿದೆ.

**ವ್ಯಕ್ತಿ ಪರಿಚಯ**

**ಶ್ರೀ ಮಾಧವರಾವ್** - ಬದುಕು ಎಂಬುದು ಒಂದು ಹೋರಾಟ. ಈ ಹೋರಾಟದಲ್ಲಿ ಬಡತನದಿಂದ ಬಂದು, ಬದುಕಿನುದ್ದಕ್ಕೂ ಕಷ್ಟವನ್ನು ಎದುರಿಸಿ, ಗುರಿಯೊಂದರ ಸಾಧನೆಯ ಮೆರೆದ ಅಗ್ರಗಣ್ಯರು ಸಮಾಜದಲ್ಲಿ ಬೆಳಕಿಗೆ ಬರುತ್ತಾರೆ. ಗೋಸಂಗಿ ಸಮುದಾಯದಲ್ಲಿ ಬೆಳಕಿಗೆ ಮುಖ ಮಾಡಿದ ಶ್ರೀ ಮಾಧವರಾವ್ ಒಬ್ಬರು. ಇವರು ಸಂಘಟನೆಯ ಒಂದೊಂದು ಮೆಟ್ಟಿಲನ್ನು ಏರಿ ಸ್ವಾಭಿಮಾನ, ಆತ್ಮವಿಶ್ವಾಸದ ಬದುಕನ್ನು ಬದುಕಿರುವುದು ಅನುಕರಣೀಯವಾಗಿದೆ. ಬುಡಕಟ್ಟು ಜನರಿಗೆ ಅನೇಕ ಸೌಲಭ್ಯಗಳನ್ನು ಒದಗಿಸಿಕೊಡುವಲ್ಲಿ ಶ್ರಮಿಸಿದ್ದಾರೆ. ಆಶ್ರಯ ಮನೆಗಳು, ಆರಾಧನೆ, ಅಕ್ಷರ ತುಂಗಾದಂತಹ ಭಿನ್ನ ವಿಭಿನ್ನ ಯೋಜನೆಗಳನ್ನು ಈ ಜನರಿಗೆ ದೊರಕಿಸಿಕೊಡುವಲ್ಲಿ ಇವರ ಪಾತ್ರ ಮಹತ್ವದ್ದಾಗಿದೆ.

ಇವರು ಬಡತನದಲ್ಲಿ ಹುಟ್ಟಿ, ವ್ಯಾಪಾರ ವೃತ್ತಿ ಮಾಡಿಕೊಂಡು ಜೀವನ ನಡೆಸುತ್ತಿದ್ದ ಸಂದರ್ಭದಲ್ಲಿ ತಾವು ಎಸಗಿದ ಯಾವುದೋ ಒಂದು ಸಣ್ಣ ತಪ್ಪಿನಿಂದಾಗಿ ಜಾತಿಯಿಂದ ಬಹಿಷ್ಕಾರಕ್ಕೆ ಒಳಗಾದರು. ಜೀವನವೇ ದುಸ್ತರವಾಗುವಂತಹ ಸಂದರ್ಭದಲ್ಲಿ ಧೃತಿಗೆಡದೆ ಬದುಕನ್ನು ಮುಂದುವರಿಸಿದರು. ಅನ್ಯಾಯದ ವಿರುದ್ಧ ಹೋರಾಡಿದರು. ಆದರೆ ಇವರ ಸಂಕಲ್ಪ ಮತ್ತು ಸತ್ಯ ಇವರನ್ನು ಕಾಪಾಡುವಲ್ಲಿ ನೆರವು ನೀಡಿತು. ಇದರಿಂದ ಸಮುದಾಯವು ಸತ್ಯದ ಅರಿವನ್ನು ತಿಳಿದು ಅವರ ಮೇಲೆ ಇದ್ದ ಆರೋಪವನ್ನು ತಳ್ಳಿಹಾಕಿ ಮತ್ತೇ ತಮ್ಮ ಸಮುದಾಯದಲ್ಲಿ ಇವರಿಗೆ ಸ್ಥಾನಮಾನಗಳನ್ನು ನೀಡಲಾಯಿತು. ಇವರು ಬುಡಕಟ್ಟು ಸಮುದಾಯಗಳ ಬಗ್ಗೆ ಅಪಾರ ಕಾಳಜಿವಹಿಸಿದ್ದರು. ಹಾಗೆಯೇ ಇವರು ಸಲ್ಲಿಸಿರುವ ಬುಡಕಟ್ಟುಗಳ ಕೆಲಸ ಕಾರ್ಯಗಳನ್ನು ಗಮನಿಸಿ ಇವರಿಗೆ ೨೦೦೪ರಲ್ಲಿ 'ಸ್ನೇಹಸೇತು' ಎಂಬ ಪ್ರಶಸ್ತಿಯನ್ನು ನೀಡಿ ಗೌರವಿಸಲಾಗಿದೆ. ಪ್ರತಿಯೊಬ್ಬ ವ್ಯಕ್ತಿಗೂ ತಲೆಯ ಮೇಲೊಂದು ಸೂರು ನೀಡಬೇಕು ಎಂಬುದು ಇವರ ಒತ್ತಾಸೆಯಾಗಿತ್ತು. ಸಿಂಧೋಳ್ಳು, ಗೋಸಂಗಿ, ಬುಡ್ಗಾಜಂಗಮ ಇತ್ಯಾದಿ ಹಲವಾರು ಸಮುದಾಯಗಳಿಗೆ ತಮ್ಮ ಗುಡಾರ ಗುಡಿಸಿಗಳಿಗೆ ಕಲ್ಯಾಣ ಸಂಘದ ವತಿಯಿಂದ ತಲೆಗೊಂದು ಆಶ್ರಯ ಮನೆಗಳನ್ನು ಕಲ್ಪಿಸಿಕೊಟ್ಟಿದ್ದಾರೆ. ತಮಗೆ ಬಂದಿರುವ ಆಶ್ರಯಮನೆಯನ್ನು ಪ್ರಾಥಮಿಕ ಶಾಲೆ ನಡೆಸಲು ದೇಣಿಗೆ ನೀಡಿರುವುದು ಅವರ ಔದಾರ್ಯಕ್ಕೆ ಹಿಡಿದ ಕನ್ನಡಿಯಾಗಿದೆ.

**ನಡೆದು ಬಂದ ದಾರಿ -** ಶ್ರೀ ಮಾಧವರಾವ್ ೧೯೮೦ರಲ್ಲಿ ಮೀನುಗಾರಿಕೆಯಲ್ಲಿ ಉಪಾಧ್ಯಕ್ಷರಾಗಿ ಮೊದಲಬಾರಿಗೆ ಆಯ್ಕೆಗೊಂಡರು, ತಮಗೆ ಕೊಟ್ಟಿರುವ ಸ್ಥಾನವನ್ನು ಪ್ರಮಾಣಿಕತೆಯಿಂದ ನಿರ್ವಹಿಸಿದರು. ೧೯೮೧-೮೨ರಲ್ಲಿ ಇದೇ ಇಲಾಖೆಯಲ್ಲಿ ಅಧ್ಯಕ್ಷ ಪದವಿ ನೀಡಲಾಯಿತು. ಅಲ್ಲಿ ಅನೇಕ ಸಮುದಾಯಗಳ ಜೊತೆಯಲ್ಲಿ ಕೆಲಸ ನಿರ್ವಹಿಸಿಕೊಂಡು ೬ ವರ್ಷಗಳವರೆಗೆ ನಿಸ್ವಾರ್ಥ ಸೇವೆಸಲ್ಲಿಸಿದರು. ಇವರ ಸಂಘ ವಿಸ್ತಾರವಾದ ಮೇಲೆ ಬಳ್ಳಾರಿ ಜಿಲ್ಲಾ ವ್ಯಾಪ್ತಿಯಲ್ಲಿ ತುಂಗಭದ್ರ ಮೀನುಗಾರ ಸಹಕಾರ ಸಂಘ (ನಿ) ಬುಕ್ಕಸಾಗರದಲ್ಲಿ ೧೯೯೫-೯೬ರಲ್ಲಿ ಪ್ರಾರಂಭಗೊಂಡಿತು. ಸಂಘದ ಅಡಿಯಲ್ಲಿ ಸದಸ್ಯರುಗಳು ಇವರನ್ನು ಅಧ್ಯಕ್ಷರನ್ನಾಗಿ ನೇಮಿಸಿದರು. ಅವರು ೧೯೯೫-೨೦೦೫ರ ವರೆಗೆ ಅಧ್ಯಕ್ಷರಾಗಿ ಕಾರ್ಯನಿರ್ವಹಿಸಿದ್ದಾರೆ. ಇಂತಹ ಸಂದರ್ಭದಲ್ಲಿ ೨೦೦೧-೦೨ರಲ್ಲಿ ಗುಡಾರ-ಗುಡಿಸಿ ನಿವಾಸಿ ಕಲ್ಯಾಣ ಸಂಘ ಅಸ್ತಿತ್ವಕ್ಕೆ ಬಂದಿತ್ತು. ಈ ಸಂಘದಡಿಯಲ್ಲಿ ಇವರನ್ನು ಅಧ್ಯಕ್ಷ ಸ್ಥಾನಕ್ಕೆ ನೇಮಿಸಲಾಯಿತು. ಇವರ ಅಧಿಕಾರಾವಧಿಯಲ್ಲಿ ಸರ್ಕಾರಕ್ಕೆ ಅನೇಕ ಮನವಿ ಪತ್ರಗಳನ್ನು ನೀಡಿ ಬುಡಕಟ್ಟು ಸಮುದಾಯಗಳ ಅಭಿವೃದ್ಧಿಗೆ ನಿರಂತರವಾಗಿ ಶ್ರಮಿಸಿದ್ದಾರೆ.

**ಇವರು ಮಾಡಿರುವ ಅಭಿವೃದ್ಧಿ ಕೆಲಸಗಳು**

* ಬಳ್ಳಾರಿ ಜಿಲ್ಲಾ ಹೊಸಪೇಟೆ ತಾ. ಕಂಪ್ಲಿ ಗ್ರಾಮದ ಸಿಂಧೋಳ್ಳು ಆಶ್ರಯ ಕಾಲೋನಿಯಲ್ಲಿ ೩೦ ಆಶ್ರಯ ಮನೆಗಳನ್ನು ಒದಗಿಸಿದ್ದಾರೆ.
* ತಮಗೆ ಬಂದಿರುವ ಆಶ್ರಯ ಮನೆ ಸಿಂಧೋಳ್ಳು ಮಕ್ಕಳಿಗೆ ಶಾಲೆ ಕಲಿಯಲು ದೇಣಿಗೆ ನೀಡಿರುವುದು.
* ಗೋಸಂಗಿ, ಬುಡ್ಗಾ ಜಂಗಮ ಇತ್ಯಾದಿ ಸಮುದಾಯಗಳಿಗೆ ೧೧ ಆಶ್ರಯ ಮನೆಗಳನ್ನು ಕಲ್ಪಿಸಿಕೊಟ್ಟಿದ್ದಾರೆ.

* ಮೀನಿನ ಬಲೆಗಳನ್ನು ಸಾಲದ ರೂಪದಲ್ಲಿ ನೀಡುವಂತೆ ಮಾಡಿದ್ದಾರೆ.
* ಪ್ರಾಥಮಿಕ ಶಾಲೆ ಮಕ್ಕಳಿಗೆ ತಿಂಗಳಿಗೆ ೧೫.೦೦ ರೂ.ಗಳಂತೆ ಮೀನುಗಾರರ ಸಂಘದ ವತಿಯಿಂದ ಶಿಷ್ಯವೇತನ ನೀಡುವುದು.
* ಸಿಂಧೋಳ್ಳುರಿಗೆ ಪರಿಶಿಷ್ಟ ಜಾತಿ ಪ್ರಮಾಣ ಪತ್ರ ನೀಡಬೇಕೆಂದು ಜಿಲ್ಲಾ ದಂಡಾಧಿಕಾರಿಗಳಿಗೆ ಮನವಿ ಪತ್ರಕೊಟ್ಟು ಪರಿಶಿಷ್ಟ ಜಾತಿ ಪ್ರಮಾಣಪತ್ರ ದೊರಕಿಸಿಕೊಟ್ಟಿದ್ದಾರೆ.
* ಬಳ್ಳಾರಿ ಗುಡಾರ ನಗರದಲ್ಲಿರುವ ಆಶ್ರಯ ಮನೆಗಳಿಗೆ ಇವರು ಕಾರಣಿಭೂತರಾಗಿದ್ದಾರೆ.
* ಬುಡಕಟ್ಟು ಸಮುದಾಯಗಳಿಗೆ ಮೀನು ವೃತ್ತಿಯನ್ನು ಕಲ್ಪಿಸಿಕೊಟ್ಟಿರುವರು.
* ತುಂಗಭದ್ರಾ ಮೀನುಗಾರ ಸಹಕಾರ ಸಂಘದ ವತಿಯಿಂದ ೨೦೦೫ರಲ್ಲಿ ಸಿಂಧೋಳ್ಳುರಿಗೆ ಮೀನು ಮಾರಾಟಕ್ಕಾಗಿ ಸೈಕಲ್ ಮತ್ತು ಐಸ್ ಬಾಕ್ಸ್‌ಗಳನ್ನು ಕೊಡಿಸಿದ್ದಾರೆ.
* ಸಿಂಧೋಳ್ಳು ಆಶ್ರಯ ಕಾಲೋನಿಯಲ್ಲಿ 'ಗಂಗಾಭವಾನಿ' ಸ್ವ-ಸಹಾಯ ಗುಂಪನ್ನು ಇವರ ಅಮೃತ ಹಸ್ತದಿಂದ ಸ್ಥಾಪಿಸಿದ್ದಾರೆ.

ಹೀಗೆ ಅವರು ಮಾಡಿರುವ ಕೆಲಸಗಳಿಂದಾಗಿ ಬುಡಕಟ್ಟು ಸಮುದಾಯಗಳಿಗೆ ಆರಾಧ್ಯ ದೈವರಾಗಿ ಕಂಡುಬರುತ್ತಾರೆ. ಇವರಲ್ಲಿ ಕೆಲಸ ಮಾಡುವ ಹಂಬಲ, ಬುಡಕಟ್ಟು ಸಮುದಾಯಗಳಿಗೆ ಜ್ಯೋತಿ ಬೆಳಗಿಸುವಲ್ಲಿ ಅವರ ಸೌಜನ್ಯ ಮತ್ತು ಶ್ರಮ ಇಂದಿಗೂ ಸಾಕ್ಷಿಯಾಗಿದೆ. ಪ್ರಸ್ತುತ ಸಂದರ್ಭದಲ್ಲಿ ಕರ್ನಾಟಕ ಸರ್ಕಾರ ಗಣ್ಯವ್ಯಕ್ತಿಗಳಿಗೆ ನೀಡುವ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಯನ್ನು ಶ್ರೀ ಮಾಧವರಾವ್ ಅವರಿಗೂ ನೀಡಿ ಗೌರವಿಸಿದರೆ, ಅತ್ಯಂತ ಸಾರ್ಥಕವಾಗುತ್ತದೆ. ಈ ನಿಟ್ಟಿನಲ್ಲಿ ಸರ್ಕಾರ ಗಮನಹರಿಸ ಬೇಕಾಗಿದೆ.

**ಸೌಲಭ್ಯಗಳು**

ಅಭಿವೃದ್ಧಿ ಕಾರ್ಯದಲ್ಲಿ ಸರ್ಕಾರದ ಪಾತ್ರ ಮುಖ್ಯವಾದುದು. ಸೌಲಭ್ಯಗಳ ಮೇಲೆ ಸಿಂಧೋಳ್ಳು ಸಮುದಾಯದ ಮೇಲೆ ಬೀರುತ್ತಿರುವ ಪರಿಣಾಮದ ಬಗ್ಗೆ ವಿಸ್ತೃತವಾದ ಚರ್ಚೆ ಕಡಿಮೆಯೆಂದೆ ಹೇಳಬಹುದು. ಸೌಲಭ್ಯದ ಕೊರತೆಗಳು ಹಲವಾರು ಹೋರಾಟಗಳಿಗೆ ದಾರಿ ಮಾಡಿದೆ. ಸಿಂಧೋಳ್ಳುರು ವಾಸಿಸುವ ನೆಲೆಗಳಲ್ಲಿ ವಸತಿ, ಕುಡಿಯುವ ನೀರು, ವಿದ್ಯುತ್ ಮತ್ತು ಶಿಕ್ಷಣ ಸೌಲಭ್ಯಗಳಿಗಾಗಿ ಸ್ಥಳೀಯ ಮಟ್ಟದಲ್ಲಿ ಹೋರಾಟಗಳು ನಡೆದಿವೆ. ಈ ಎಲ್ಲಾ ಹೋರಾಟಗಳಿಗೆ ಗುಡಾರ ಗುಡಿಸಿ ನಿವಾಸಿಗಳ ಕಲ್ಯಾಣ ಸಂಘವೇ ಕಾರಣವಾಗಿದೆ. ಹೋರಾಟದ ಮೂಲಕ ಮನವಿ ಪತ್ರಗಳನ್ನು ಸಲ್ಲಿಸಿ ಸರ್ಕಾರದ ಮೇಲೆ ಒತ್ತಡ ತರುವ ಕೆಲಸ ಇಂದಿಗೂ ನಡೆಯುತ್ತಲೇ ಇದೆ. ಇಂತಹ ಸಂಘಟನೆಯಲ್ಲಿ ಸಿಂಧೋಳ್ಳುರ ಸಮಾಜ ಕಲ್ಯಾಣ ಸಂಘ ಸ್ಥಾಪನೆಗೊಂಡು, ಹೋರಾಟದಲ್ಲಿ ಸಕ್ರಿಯವಾಗಿ ತೊಡಗಿಸಿಕೊಂಡಿದ್ದಾರೆ.

ಸಿಂಧೋಳ್ಳು ಸಮುದಾಯದ ಸಮಸ್ಯೆಗಳು ಅವರ ಜೀವನದ ಮೇಲೆ ಉಂಟು ಮಾಡುತ್ತಿರುವ ಪರಿಣಾಮಗಳನ್ನು ಗುರುತಿಸಲಾಗಿದೆ. ಸಮುದಾಯದ ಮುಖ್ಯ ಗಣನೆಗೆ ತೆಗೆದುಕೊಳ್ಳುವುದು ಸರ್ಕಾರದ ಕೆಲಸವಾಗಿದೆ. ಸರ್ಕಾರ ಸಿಂಧೋಳ್ಳು ಸಮುದಾಯದ ಬಗೆಗೆ ನಿರ್ಲಕ್ಷ್ಯ ಧೋರಣೆಯನ್ನು ಅನುಸರಿಸಿದ್ದರು ಅಲ್ಪಮಟ್ಟಿನ ನೆರವು ನೀಡಿ ಸಹಕರಿಸಿದೆ. ಅವು ಈ ಕೆಳಗಿನಂತಿವೆ.

೧. ಸಿಂಧೋಳ್ಳುರ ಒಟ್ಟು ಕುಟುಂಬಗಳು ೮೪೪ರಲ್ಲಿ ೧೭೬ ಜನತಾ ಆಶ್ರಯ ಮನೆಗಳು ನಿರ್ಮಿಸಿಕೊಟ್ಟಿದೆ.

೨. ಪಡಿತರ ಚೀಟಿ ವ್ಯವಸ್ಥೆಯಲ್ಲಿ ೨೫೧ ಕುಟುಂಬಗಳಿಗೆ ಅನ್ನದಾನ ನೀಡಿದೆ.

**ಸ್ವ-ಸಹಾಯ ಗುಂಪು**

ಇಂದಿನ ಆಧುನಿಕ ದಿನಗಳಲ್ಲಿ ಸ್ತ್ರೀ ಅನೇಕ ಕ್ಷೇತ್ರಗಳಲ್ಲಿ ಗಮನಾರ್ಹ ಸಾಧನೆಯನ್ನು ಸಾಧಿಸಿದ್ದಾಳೆ. ದೇಶೀಯ ನೆಲೆಯಲ್ಲಿ ಸ್ತ್ರೀಯರಿಗೆ ಅನ್ಯಾಯವಾದಾಗ ಅದರ ವಿರುದ್ಧ ಹೋರಾಟ ಮಾಡಿರುವ ಹಲವಾರು ನಿದರ್ಶನಗಳು ನಮ್ಮ ಕಣ್ಣೆದುರಿಗಿವೆ. ಆ ನಿಟ್ಟಿನಲ್ಲಿ ಸಂಘ ಸಂಸ್ಥೆಗಳು, ನವಯುವಕರು, ನಿರುದ್ಯೋಗಿಗಳು ಸಹಕಾರ ನೀಡಿದ್ದಾರೆ. ಸ್ತ್ರೀವಾದಿಗಳು ಸರ್ಕಾರ ಮತ್ತು ಸಂಘ ಸಂಸ್ಥೆಗಳ ಜೊತೆಯಲ್ಲಿ ಭಾಗವಹಿಸಿಕೊಂಡು, ಅನೇಕ ಯೋಜನೆಗಳನ್ನು ರೂಪಿಸಿಕೊಂಡಿದ್ದಾರೆ. ಇಂತಹ ಪರಿಸ್ಥಿತಿಯಲ್ಲಿ ಬುಡಕಟ್ಟು ಸಮುದಾಯಗಳು ವಾಸಿಸುವ ಪ್ರದೇಶದಲ್ಲಿನ ಮಹಿಳೆಯರು ದೂರ ಉಳಿದಿರುವುದು ಸಾಮಾನ್ಯವಾದ ಸಂಗತಿ. ಇಂತಹ ಸಂದರ್ಭದಲ್ಲಿ ಸ್ವ-ಸಹಾಯ ಗುಂಪುಗಳ ಪ್ರವೇಶ ಭಾರತದ ಬಡತನ ರೇಖೆಯ ಕೆಳಗೂ ಗ್ರಾಮೀಣ ಮಹಿಳೆಯರಿಗೆ ನವ ಚೈತನ್ಯದ ಜಗತ್ತೊಂದರ ಪರಿಚಯವನ್ನು ಮಾಡಿಕೊಡುವಲ್ಲಿ ಯಶಸ್ವಿಯಾಯಿತು. ಇಂತಹ ಸ್ವಸಹಾಯ ಗುಂಪು ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಿಕೊಳ್ಳಲು ಸಹಕಾರಿಯಾಯಿತು.

ಆರ್ಥಿಕ ಮತ್ತು ಸಾಮಾಜಿಕ ಸಮಾನ ವಯಸ್ಸಿನವರು ಚಿಕ್ಕ ಚಿಕ್ಕ ಗುಂಪುಗಳನ್ನು ಸ್ವ-ಇಚ್ಛೆಯಿಂದ ರಚಿಸಿಕೊಂಡು, ಸಂಘಟಿತರಾಗಿ ಚಿಕ್ಕ ಉಳಿತಾಯ ಮಾಡುವುದುಂಟು. ಅಗತ್ಯಕ್ಕೆ ತಕ್ಕಂತೆ ಸಣ್ಣ ಸಾಲಗಳು ಸರಳ ಬಡ್ಡಿ ದರಗಳ ಮೂಲಕ ಹಣದ ಉಳಿತಾಯ ಮಾಡುವುದುಂಟು. ಇದು ಸಣ್ಣಪುಟ್ಟ ಸಮಸ್ಯೆಗಳ ನಿರ್ಮೂಲನೆಗೆ ಮತ್ತು ದುಡಿಮೆಗೆ ದಾರಿ ಮಾಡಿಕೊಟ್ಟಿದೆ. ಈ ಉದ್ದೇಶವನ್ನು ಸಕಾರಗೊಳಿಸುವಲ್ಲಿ ಸ್ವ-ಸಹಾಯ ಗುಂಪಿನ ಪಾತ್ರ ಮಹತ್ವದಾಗಿದೆ.

ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ಕಂಪ್ಲಿಯ ಸಿಂಧೋಳ್ಳು ಆಶ್ರಯ ಕಾಲೋನಿಯಲ್ಲಿ ಸಿಂಧೋಳ್ಳುರ ಗಂಗಾ ಭವಾನಿ ಸ್ವ-ಸಹಾಯ ಗುಂಪು ಇದೆ. ಇದು ಸರ್ಕಾರದ ಯೋಜನೆ ಅಡಿಯಲ್ಲಿ ಸ್ಥಾಪಿತವಾದ ಸ್ವರ್ಣ ಜಯಂತಿ ಶಹರಿ ರೋಜಗಾರ್ ಯೋಜನೆ. ಈ ಯೋಜನೆ ಹಲವಾರು ಉದ್ದೇಶಗಳನ್ನು ಹೊಂದಿದೆ. ಮಾರ್ಗದರ್ಶನ, ತರಬೇತಿ, ಸಾಲ ಒದಗಿಸಿಕೊಡುವಿಕೆ, ವ್ಯಾಪಾರ ಮತ್ತು ಪಶುಪಾಲನೆ ಹೆಚ್ಚಿಸುವಲ್ಲಿ ಸಹಕಾರ ನೀಡುವುದು. ಇಂತಹ ಗುಂಪಿನಲ್ಲಿ ಹೆಚ್ಚಾಗಿ ಸಿಂಧೋಳ್ಳು ಮಹಿಳೆಯರೇ ಇರುವುದು ವಿಶೇಷ. ಈ ಗುಂಪಿನಲ್ಲಿ ವಾರ ಅಥವಾ ೧೫ ದಿವಸಕ್ಕೊಮ್ಮೆ ಸದಸ್ಯರೆಲ್ಲರು ಸೇರಿ ತಮ್ಮ ಉಳಿತಾಯದ ಮೊತ್ತವನ್ನು ಕೂಡಿಸುವುದು. ಬಂಡವಾಳವನ್ನು ಅಗತ್ಯಕ್ಕೆ ತಕ್ಕಂತೆ ವಿನಿಯೋಗಿಸುವ ದುಡಿಸುವ ಮತ್ತು ಅಲ್ಪ ಬಡ್ಡಿಯೊಂದಿಗೆ ನಿಗದಿತ ಸಮಯದಲ್ಲಿ ಹಿಂತಿರುಗಿಸುವ ನೀತಿ ನಿಯಮಗಳನ್ನು ತಾವೇ ರೂಢಿಸಿಕೊಳ್ಳುತ್ತಾರೆ. ಅಗತ್ಯವಿದ್ದಲ್ಲಿ ಗುಂಪಿನ ಸದಸ್ಯರಿಗೂ ಸಾಲ ನೀಡಿ ನಿಗದಿತ ಸಮಯದಲ್ಲಿ ವಸೂಲಿ ಮಾಡಿಕೊಳ್ಳುತ್ತಾರೆ. ಇದರಿಂದ ಈ ಗುಂಪಿನ ಸರಾಸರಿ ೧೦ ರಿಂದ ೨೦ ಸಾವಿರ ರೂಪಾಯಿಗಳವರೆಗೆ ಉಳಿತಾಯ ಮಾಡಿದೆ. ಇವುಗಳ ಎಲ್ಲಾ ವ್ಯವಹಾರಗಳು ಸಿಂಡಿಕೇಟ್ ಬ್ಯಾಂಕ್, ಕಂಪ್ಲಿ ಶಾಖೆಯಲ್ಲಿ ನಡೆಯುತ್ತದೆ. ಇದರಿಂದ ಸಿಂಧೋಳ್ಳು ಸಮುದಾಯದ ಬಗ್ಗೆ ಅವಲೋಕಿಸಿದಾಗ, ವ್ಯವಹಾರಿಕ ವಲಯದಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಸ್ಪಷ್ಟವಾಗುತ್ತದೆ.

ಒಂದು ಕಾಲದಲ್ಲಿ ಬುರ್ರ ಬುರ್ರವಾದ್ಯ ನುಡಿಸಿ, ಭಿಕ್ಷೆಬೇಡುತ್ತಿದ್ದ ಮಹಿಳೆ ಸ್ವತಃ ಬ್ಯಾಂಕಿಗೆ ಹೋಗಲಿದ್ದಾಳೆ. ತನ್ನ ಆರ್ಥಿಕ ಬದುಕಿನಲ್ಲಿ ಸ್ವಾವಲಂಬನೆ ಸಾಧಿಸಿ ತನ್ಮೂಲಕ ಒಂದು ಕುಟುಂಬದ ಜೊತೆಗೆ ಒಂದು ಸಂಘದ ಕೆಲಸ ಕಾರ್ಯಗಳನ್ನು ನಿರ್ವಹಿಸುವ ಮಟ್ಟಿಗೆ ಬೆಳೆದು ನಿಂತಿದ್ದಾಳೆ. ಇದರಲ್ಲಿ ಪರಸ್ಪರ ಸಹೋದರಿಯಂತೆ ವರ್ತಿಸಿ ಐಕ್ಯತೆಗೆ ಪಾತ್ರವಾಗಿದ್ದಾಳೆ.

**ಕೋಷ್ಟಕ ೭.೧ ಗಂಗಾಭವಾನಿ ಉಳಿತಾಯ ಗುಂಪಿನ ವಿವರ**

| ಸಂ. | ಸಂಘದ ಹೆಸರು | ಸದಸ್ಯರ ಒಟ್ಟು ಸಂಖ್ಯೆ | ಹಿಂದುಳಿದ ಸದಸ್ಯರು | ಉಳಿತಾಯ ಸಂಖ್ಯೆ ಹಣ ರೂ.ಗಳಲ್ಲಿ | ಯೋಜನೆಯಿಂದ ಒಟ್ಟು ಸಾಲ ಪಡೆದು ಕೊಂಡ ವಿವರ |
|---|---|---|---|---|---|
| ೧ | ಗಂಗಾಭವಾನಿ ಉಳಿತಾಯ ಸಂಘ, ಕಂಪ್ಲಿ | ೨೦ | ೨೦ | ೬೦,೦೦೦.೦೦ | ೧. ೩೦,೦೦೦.೦೦<br>೨. ೪೫,೦೦೦.೦೦<br>೩. ೨,೧೦,೦೦೦.೦೦ |

(ಮಾಹಿತಿದಾರರು: ಶ್ರೀಮತಿ ನಾಗಮ್ಮ, ಅಧ್ಯಕ್ಷರು ಗಂಗಾಭವಾನಿ ಸ್ವಸಹಾಯ ಸಂಘ, ಕಂಪ್ಲಿ)

**ಗಂಗಾಭವಾನಿ ಉಳಿತಾಯ ಸ್ವ-ಸಹಾಯ ಸಂಘದ ಸದಸ್ಯರಗಳ ಪಟ್ಟಿ**

| ಕ್ರ.ಸಂ. | ಹೆಸರುಗಳು | ಪದನಾಮ |
|---|---|---|
| ೦೧ | ನಾಗಮ್ಮ ಗಂಡ ಚಿನ್ನಿಯಲ್ಲಪ್ಪ | ಅಧ್ಯಕ್ಷರು |
| ೦೨ | ಸಣ್ಣ ಗಾಳಮ್ಮ ಗಂಡ ಗಾಳೆಪ್ಪ | ಕಾರ್ಯದರ್ಶಿ |
| ೦೩ | ಸಣ್ಣ ಗಾಳಮ್ಮ ಗಂಡ ಯಲ್ಲಪ್ಪ | ಸದಸ್ಯರು |
| ೦೪ | ಮುನಿಯಮ್ಮ ಗಂಡ ರಾವುಲ್ ನಾಗಪ್ಪ | ಸದಸ್ಯರು |
| ೦೫ | ಗಾಳೆಮ್ಮ ಗಂಡ ಯಲ್ಲಪ್ಪ | ಸದಸ್ಯರು |
| ೦೬ | ಸಣ್ಣ ಮಾರಕ್ಕ ಗಂಡ ನಾಗಪ್ಪ | ಸದಸ್ಯರು |
| ೦೭ | ನಾಗಮ್ಮ ಗಂಡ ಚಿನ್ನ ಮಾರಪ್ಪ | ಸದಸ್ಯರು |
| ೦೮ | ನಾಗಮ್ಮ ಗಂಡ ಮುನಿಯಪ್ಪ | ಸದಸ್ಯರು |
| ೦೯ | ಜಂಬಮ್ಮ ಗಂಡ ಯಲ್ಲಪ್ಪ | ಸದಸ್ಯರು |
| ೧೦ | ದುರುಗಮ್ಮ ಗಂಡ ಆಡು ಮಾರೆಪ್ಪ | ಸದಸ್ಯರು |
| ೧೧ | ದುರುಗಮ್ಮ ಗಂಡ ಜಂಬಯ್ಯ | ಸದಸ್ಯರು |
| ೧೨ | ದುರುಗಮ್ಮ ಗಂಡ ಈರಣ್ಣ | ಸದಸ್ಯರು |
| ೧೩ | ಗಾಳೆಮ್ಮ ಗಂಡ ಈರಣ್ಣ | ಸದಸ್ಯರು |

| | | |
|---|---|---|
| ೧೪ | ರಾಜಮ್ಮ ಗಂಡ ಡಿ. ನಾಗಪ್ಪ | ಸದಸ್ಯರು |
| ೧೫ | ನಾಗಮ್ಮ ಗಂಡ ಸೊಂಡೆ ಮಾರೆಪ್ಪ | ಸದಸ್ಯರು |
| ೧೬ | ಮುನಿಯಮ್ಮ ಗಂಡ ಜಂಬಯ್ಯ | ಸದಸ್ಯರು |
| ೧೭ | ಜಂಬಕ್ಕ ಗಂಡ ಡೊಂಕ ಮಾರೆಪ್ಪ | ಸದಸ್ಯರು |
| ೧೮ | ಯಲ್ಲಮ್ಮ ಗಂಡ ರೆಡ್ಡಿ ಗಾಳೆಪ್ಪ | ಸದಸ್ಯರು |
| ೧೯ | ಸುಡುಗಾಡು ಮಾರಮ್ಮ ಗಂಡ ಕೇಶಪ್ಪ | ಸದಸ್ಯರು |
| ೨೦ | ಹುಚ್ಚಮ್ಮ ಗಂಡ ಭಂಡಾರಿ | ಸದಸ್ಯರು |

**ಪರಿವರ್ತನೆ**

ಪರಿವರ್ತನೆ ಅಥವಾ ಬದಲಾವಣೆ ಪ್ರಕೃತಿ ನಿಯಮ. ಅದೊಂದು ಸ್ವಾಭಾವಿಕ ಪ್ರಕ್ರಿಯೆ. ಈ ದಿನ ಏನಿದೆಯೋ ಅದು ನಾಳೆ ಬದಲಾವಣೆಗೆ ಒಳಗಾಗಬಹುದು. ಒಂದಿಷ್ಟು ಸಮಯದಲ್ಲಿ ಪರಿವರ್ತನೆ ಬರುವುದನ್ನು ಬದಲಾವಣೆ ಎನ್ನಬಹುದು. ಪರಿವರ್ತನೆ ಎನ್ನುವುದು ಮನುಷ್ಯನ ಆಕಾರದಲ್ಲಿಯೂ ಭಿನ್ನ ಮತ್ತು ವಿಭಿನ್ನ ರೀತಿಯಲ್ಲಿ ಇರಬಹುದು. ಹಾಗೆಯೇ ಕಾಲಾವಧಿಯೂ ಸಹ ಸೆಕೆಂಡುಗಳು ಅಂತರವಾಗಿರಬಹುದು. ಇಲ್ಲವೇ ದಶಲಕ್ಷ ವರ್ಷಗಳ ಅಂತರವಾಗಿರಬಹುದು.

ಪ್ರಕೃತಿಯಲ್ಲಿ ಗಿಡ ಮರಗಳು ಹುಟ್ಟುತ್ತವೆ, ಬೆಳೆಯುತ್ತವೆ, ಕೊನೆಗೆ ಒಣಗಿ ಬೀಳುತ್ತವೆ. ಮಾನವರೂ ಹುಟ್ಟುತ್ತಾರೆ. ಬೆಳೆಯುತ್ತಾರೆ, ಜೀವನ ಸುಗಮ ರೀತಿಯಲ್ಲಿ ಸಾಗಿಸುತ್ತಾರೆ. ಕೊನೆಗೂ ಅವಸಾನ ಹೊಂದುತ್ತಾರೆ. ನದಿ ಸಾಗರಗಳೂ, ಬೆಟ್ಟ ಪರ್ವತಗಳು ತಮ್ಮ ಸ್ಥಿತ್ಯಂತರ ಹೊಂದುತ್ತವೆ. ಇವೆಲ್ಲವುಗಳು ಪರಿವರ್ತನೆಗಳು ಆಗಿವೆ. "ಅಂಗೀಕೃತವಾದ ಜೀವನ ಕ್ರಮದಲ್ಲಿ ಭೌಗೋಳಿಕ ಪರಿಸ್ಥಿತಿಗಳಿಂದ ಸಾಂಸ್ಕೃತಿಕ ಉಪಕರಣಗಳಿಂದ, ಜನಸಂಖ್ಯೆಯ ರಚನೆಯಿಂದ ಇಲ್ಲವೇ ಆದರ್ಶಗಳಿಂದ ಮತ್ತು ಮಾನವ ಸಮೂಹ ದಲ್ಲಿ ಆದ ಪ್ರಸರಣವೇ ಸಾಮಾಜಿಕ ಬದಲಾವಣೆ ಎನ್ನಬಹುದು".[*] ಇಂತಹ ಸ್ವಾಭಾವಿಕ ಬದಲಾವಣೆಗಳು ಮಾನವನ ಜೀವಿತದಲ್ಲಿ ಅವನ ಪರಿಸರದಲ್ಲಿ ಸತತವಾಗಿ ಆಗುತ್ತಲೇ ಇರುತ್ತವೆ. ಪರಿವರ್ತನೆಯೂ ಸರ್ವವ್ಯಾಪಿಯಾದುದು. ವಿಶ್ವದಲ್ಲಿ ಬದಲಾಗದಿರುವ ವಸ್ತು ಯಾವುದೂ ಇಲ್ಲ. ಕುಟುಂಬ ವ್ಯವಸ್ಥೆ ಮತ್ತು ಧರ್ಮಗಳು ಪರಿವರ್ತನೆ ಹೊಂದುತ್ತವೆ. ಮಾನವನ ಸಂಸ್ಕೃತಿ ಮತ್ತು ನಾಗರಿಕತೆಗಳು ಕಾಲ ಕಾಲದಲ್ಲಿ ಪರಿವರ್ತನೆಗೊಳ್ಳುತ್ತವೆ.

ಸಮಾಜವು ನಿಂತ ನೀರಲ್ಲ, ಅದು ನಿರಂತರ ಪರಿವರ್ತನಾ ಶೀಲವಾದದ್ದು. ತನ್ನೊಳಗಿನ ಅನೇಕ ಅಂಶಗಳು ಬದಲಾಗುತ್ತಿರುತ್ತವೆ. ಸಮಾಜ ಮತ್ತು ಮಾನವ ಇವು ಒಂದನ್ನು ಬಿಟ್ಟು ಮತ್ತೊಂದಿಲ್ಲ. ಇದರ ಪರಿವರ್ತನೆಯ ಸ್ವರೂಪದಲ್ಲಿ ಸಾಕಷ್ಟು ಸಂಶೋಧನೆಗಳು ನಡೆಯುತ್ತಲೇ ಇರುತ್ತವೆ. ಆದರೂ ಸಮಾಜ ವಿಜ್ಞಾನಿಗಳಿಗೆ ಸಾಮಾಜಿಕ ಪರಿವರ್ತನೆಗೆ ಕಾರಣವೇನು ಇದರ ಗುರಿ ಮತ್ತು ಅಂತ್ಯ ಹೇಗಾಗಬಹುದು ಎಂದು ಹೇಳಲು ಸಾಧ್ಯವಿಲ್ಲ ಮತ್ತು ವೈಜ್ಞಾನಿಕ ಸವಾಲು ಆಗಿದೆ. ಆದರೂ ಒಂದು

ಕಾಲದಲ್ಲಿ ಅನಾಗರಿಕ ಸಮುದಾಯ ಬೆಳೆದು, ನಾಗರಿಕತೆ ಹೊಂದಿ, ಆಧುನೀಕರಣಗೊಂಡಿದೆ ಎಂದು ಹೇಳಬಹುದು. ಮಾನವ ನಿಸರ್ಗದಲ್ಲಿ ಜನಿಸಿ, ಹಂತ ಹಂತವಾಗಿ ವಿಕಾಸಹೊಂದಿ, ಭೌತಿಕ ಮತ್ತು ಬೌದ್ಧಿಕವಾಗಿ ಬದಲಾವಣೆಗೆ ಒಳಗಾಗಿದ್ದಾನೆ. ಇದು ಒಂದು ರೀತಿಯ ಪರಿವರ್ತನೆ ಅಥವಾ ಬದಲಾವಣೆ ಎಂದೇ ಕರೆಯಬಹುದು.

ಸಾಮಾಜಿಕ ಪರಿವರ್ತನೆಯಲ್ಲಿ ಬುಡಕಟ್ಟು ಸಮುದಾಯಗಳು ಹಲವು ಪಾರಂಪರಿಕ ಜ್ಞಾನಶಿಸ್ತುಗಳಿಂದ ಮತ್ತು ಕೆಲವು ಆಧುನಿಕ ಶೈಲಿಯ ಶಿಸ್ತುಗಳಿಂದ ಪ್ರಭಾವಿತರಾಗಿದ್ದಾರೆ. ಯಾವುದೇ ಸಮುದಾಯವು ಒಂದು ಜೀವನ ಮಾದರಿಯಲ್ಲಿ ಸಿದ್ಧಗೊಂಡ ನಂಬಿಕೆ, ಸಂಪ್ರದಾಯ ಮತ್ತು ಆಚರಣೆಗಳು ಹಾಗೆಯೇ ಉಳಿಯಲು ಸಾಧ್ಯವಿಲ್ಲ. ಹೀಗೆ ಅವರ ಸಾಮಾಜಿಕ ಜೀವನ ವಿಧಾನವೂ ಕೂಡ ಕಾಲ ಕ್ರಮೇಣ ತಾವು ವಾಸಿಸುವ ನೆಲೆಗಳಲ್ಲಿ ಪರಿವರ್ತನೆ ಕ್ರಿಯೆಗೆ ಯಾವಾಗಲೂ ತನ್ನನ್ನು ಒಡ್ಡಿಕೊಳ್ಳುತ್ತಿರುತ್ತದೆ. ಆದರೆ ಈ ಪರಿವರ್ತನೆಯ ಪ್ರಮಾಣ ಆಯಾ ಸಮುದಾಯವನ್ನು ಅವಲಂಬಿಸಿರುತ್ತದೆ. ದೇಶೀಯ ಬುಡಕಟ್ಟು ಸಮುದಾಯಗಳು ಇನ್ನೂ ನಾಗರಿಕ ಜಗತ್ತಿನ ಸಂಪರ್ಕದಿಂದ ದೂರವೆ ಉಳಿದಿರುವುದನ್ನು ಗಮನಿಸಿದರೆ, ಬದಲಾವಣೆಯ ಪ್ರಮಾಣ ನಿಧಾನಗತಿಯಲ್ಲಿ ಚಲಿಸುತ್ತಿರುವುದನ್ನು ಗಮನಿಸಬಹುದು.

ಸಿಂಧೋಳ್ಳುರು ಗುಡಾರ ನಿವಾಸಿಗಳು. ಇವರ ಜನಸಂಖ್ಯೆ ಕರ್ನಾಟಕದಲ್ಲಿ ಅತಿ ವಿರಳ ಈ ಸಮುದಾಯವು ಇಂದು ನಗರ, ಗ್ರಾಮ ಮತ್ತು ಪಟ್ಟಣಗಳಲ್ಲಿ ನೆಲೆಸಿದ್ದಾರೆ. ಇವರು ಇಂದಿನ ದಿನಗಳಲ್ಲಿ ಸಮಾಜದ ಮೇಲೆ ಹಿಡಿತ ಸಾಧಿಸಿರುವ ಜಾಗತೀಕರಣ ಮತ್ತು ತಂತ್ರಜ್ಞಾನ ಪ್ರಭಾವಕ್ಕೆ ಒಳಗಾಗಿ, ಪರಿವರ್ತನೆಗೊಳ್ಳುತ್ತಲಿದ್ದಾರೆ. ಅವರ ಸಂಸ್ಕೃತಿ ಬದಲಾಗುತ್ತಿದೆ. ಆದರೆ ಇವರ ಇಡೀ ಜೀವನದ ಕ್ರಮವೇ ಸಂಪೂರ್ಣವಾಗಿ ಬದಲಾಗಿದೆ ಎಂದರೆ ತಪ್ಪಾಗುತ್ತದೆ. ಏಕೆಂದರೆ ಇಂದಿಗೂ ಬಡತನ, ಭಿಕ್ಷಾಟನೆ, ಅನಕ್ಷರತೆ ಮತ್ತು ವಸತಿ ಕೊರತೆಗಳಿಂದ ಎದ್ದು ಕಾಣುತ್ತದೆ. ಪರಿವರ್ತನೆಯಲ್ಲಿ ಐದು ರೂಪಗಳಲ್ಲಿ ಈ ಕೆಳಗಿನಂತೆ ಕಾಣಬಹುದು.

**೧. ಸಾಮಾಜಿಕ ಪರಿವರ್ತನೆ**

ಸಾಮಾಜಿಕ ಪರಿವರ್ತನೆಯಲ್ಲಿ ಸಿಂಧೋಳ್ಳು ಸಮುದಾಯದ ಬಗ್ಗೆ ಅವಲೋಕಿಸಿದಾಗ, ಅವುಗಳಲ್ಲಿ ಕೆಲವೊಂದು ವಿಷಯಗಳಲ್ಲಿ ಮಾತ್ರ ಪರಿವರ್ತನೆಯಾಗಿರುವುದು ಕಂಡುಬರುತ್ತದೆ. ಅವುಗಳನ್ನು ಈ ಕೆಳಗಿನಂತೆ ವಿವರಿಸಲಾಗಿದೆ.

೧. ಕುಟುಂಬದಲ್ಲಿ ಅವಿಭಕ್ತ ಕುಟುಂಬ ಇಂದು ತನ್ನ ಅಸ್ತಿತ್ವವನ್ನು ಬದಲಾಯಿಸಿಕೊಂಡಿದೆ. ಅವಿಭಕ್ತ ಕುಟುಂಬ ವ್ಯವಸ್ಥೆಗೆ ಬದಲಾಗಿ, ವಿಭಕ್ತ ಕುಟುಂಬ ಪದ್ಧತಿಗೆ ಹೆಚ್ಚು ಪ್ರಾಶಸ್ತ್ಯ ನೀಡುತ್ತಿದ್ದಾರೆ. ಕುಟುಂಬದಲ್ಲಿ ತಂದೆ- ತಾಯಿ, ಅಣ್ಣ-ಅತ್ತಿಗೆ, ತಮ್ಮ-ಸಹೋದರಿ ಇತ್ಯಾದಿ ಸಂಬಂಧಿಕರು ಒಂದೇ ಕುಟುಂಬದಲ್ಲಿ ಕೂಡಿ ಬದುಕುವ ಬದಲು ಗಂಡ ಹೆಂಡತಿ ಹಾಗೂ ಮಕ್ಕಳು ಒಂದು ಕಡೆ ವಾಸ ಮಾಡಲು ಇಚ್ಛೆಪಡುತ್ತಾರೆ. ಹೀಗೆಂದ ಮಾತ್ರಕ್ಕೆ ಸಮುದಾಯದ ಎಲ್ಲಾ ಕುಟುಂಬಗಳಲ್ಲಿಯೂ ಈ ಬದಲಾವಣೆಯಾಗಿದೆ ಎಂದು ಹೇಳಲಾಗುವುದು. ಇಂತಹ ಪರಿಸ್ಥಿತಿಗಳ ನಡುವೆಯೂ ಇಲ್ಲಿ ಅವಿಭಕ್ತ

ಕುಟುಂಬಗಳಿರುವುದನ್ನು ಮರೆಯುವ ಆಗಿಲ್ಲ. ಇದಕ್ಕೆ ಇಲ್ಲಿರುವ ರಾವುಲೋರ್, ಸಿಂಧ್ಯಾಲೋರ್ ಮತ್ತು ಗಂಟೆಲೋರು ಇತ್ಯಾದಿ ಕುಟುಂಬಗಳು ಸಾಕ್ಷಿ. ಈಗಲೂ ೮ ರಿಂದ ೧೨ ಜನರು ಒಟ್ಟಿಗೆ ವಾಸವಾಗಿರುವುದು ಕಂಡುಬರುತ್ತದೆ. ಆಧುನಿಕತೆ ಹಾಗೂ ನಗರೀಕರಣ ಬೆಳವಣಿಗೆಯಿಂದಾಗಿ ಜನರು ಈಗ ತಮ್ಮದೇ ಆದ ಸ್ವತಂತ್ರ ಗುಡಾರಗಳಲ್ಲಿ ಕುಟುಂಬ ಹೊಂದಿರಬೇಕು ಎಂಬ ಮನೋಭಾವ ಉಳ್ಳವರಾಗಿದ್ದಾರೆ. ಇದರಿಂದಾಗಿ ಮೊದಲಿದ್ದ ಹಾಗೆ ಅವಿಭಕ್ತ ಕುಟುಂಬಗಳು ಈಗಿಲ್ಲ. "ಸಿಂಧೋಳ್ಳು ಕುಟುಂಬದಲ್ಲಿ ಮಕ್ಕಳು ಇದ್ದರೆ, ಸಾಕು ಅದೇ ನಮ್ಮ ಅವಿಭಕ್ತ ಕುಟುಂಬವೆಂದು ಹೇಳುವುದುಂಟು".[೬]

೨. ಅಲೆಮಾರಿ ಸಮುದಾಯವಾದ ಸಿಂಧೋಳ್ಳರು ಒಂದು ಸ್ಥಳದಲ್ಲಿ ಸ್ಥಿರವಾದ ನೆಲೆಗಳನ್ನು ಕಟ್ಟಿಕೊಳ್ಳದೆ ಡೇರಿ ಅಥವಾ ಗುಡಾರಗಳನ್ನು ಹಾಕಿಕೊಂಡು ಕಾಲಕಳೆಯುತ್ತಾ ಬಂದಿದ್ದಾರೆ. ಇದು ಅಲೆಮಾರಿ ಸಮುದಾಯಕ್ಕೆ ಅನುಕೂಲ ಹಾಗೂ ಅನಿವಾರ್ಯವೂ ಕೂಡ. ಆದರೆ ಇತ್ತೀಚಿಗೆ ಕಾಲ ಬದಲಾದಂತೆ ಸ್ಥಿರ ನೆಲೆಗಳನ್ನು ಕಟ್ಟಿಕೊಳ್ಳುತ್ತಿರುವುದು ಕಾಣಬರುತ್ತದೆ. ಗುಡಾರಗಳಿಗೆ ಬದಲಾಗಿ ಮನೆಗಳನ್ನು ಕಟ್ಟಿಕೊಂಡು ಒಂದೆಡೆ ಸ್ಥಿರ ಜೀವನ ನಡೆಸಲು ಪ್ರಾರಂಭಿಸಿರುವುದು ಹೊಸ ಬೆಳವಣಿಗೆಯೆಂದೇ ಗುರುತಿಸಬಹುದು. ಮೊದಲು ಗುಡಾರ/ಗುಡಿಸಲುಗಳು ನಿರ್ಮಿಸಬೇಕಾಗಿದ್ದ, ಪ್ಲಾಸ್ಟಿಕ್ ಚೀಲಗಳು, ಸೊಪ್ಪು, ಮತ್ತು ಲಕ್ಕಿಬರಲ್‌ಗೆ ಬದಲಾಗಿ ಸಿಮೆಂಟ್, ಇಟ್ಟಿಗೆ ಮತ್ತು ಕಬ್ಬಿಣ ಮೊದಲಾದ ಸಾಮಾಗ್ರಿಗಳನ್ನು ಉಪಯೋಗಿಸಿ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಈ ಹಿನ್ನೆಲೆಯಲ್ಲಿ ಸಾಕಷ್ಟು ಸುಧಾರಣೆಯಾಗಿದೆ ಎಂದು ಹೇಳಬಹುದು. ಕೆಲವು ಸಿಂಧೋಳ್ಳರು ಸರ್ಕಾರ ನಿರ್ಮಿಸಿಕೊಟ್ಟ ಆಶ್ರಯಮನೆಗಳಲ್ಲಿ ವಾಸವಾಗಿದ್ದಾರೆ. ಇನ್ನೊಂದು ವಿಶೇಷವೆಂದರೆ ಈ ಹಿಂದೆ ಗುಡಾರಗಳ ನಿರ್ಮಾಣದಲ್ಲಿ ವಾಸ್ತು ಹೇಳುವವರ ಪಾತ್ರ ಇದ್ದಿಲ್ಲ. ಆದರೆ ಕಾಲ ಬದಲಾಗಿ, ಈಗ ಕೆಲವರು ತಮ್ಮ ಮನೆಗಳನ್ನು ನಿರ್ಮಾಣ ಮಾಡುವಾಗ ವಾಸ್ತು ಪ್ರಕಾರ ಕಟ್ಟಿಸುತ್ತಾರೆ. ಇವರಲ್ಲಿ ವಾಸ್ತು ಹೇಳುವರನ್ನು ಬಳಸಿಕೊಳ್ಳುತ್ತಾರೆ. ಇವುಗಳ ಬಗ್ಗೆ ಅವಲೋಕಿಸಿದಾಗ, ವಸತಿ ವ್ಯವಸ್ಥೆಯಲ್ಲಿ ಹಲವು ಕಡೆಗಳಲ್ಲಿ ಪರಿವರ್ತನೆಗೆ ಒಳಪಟ್ಟಿರುತ್ತದೆ.

೩. ಸಿಂಧೋಳ್ಳರು ಸಾಮಾನ್ಯವಾಗಿ ಗೃಹ ಉಪಯೋಗಿ ವಸ್ತುಗಳಾಗಿ ಮಣ್ಣಿನ ಮಡಕೆಗಳನ್ನು ಉಪಯೋಗಿಸುತ್ತಿದ್ದರು. ಇಂದು ಕ್ರಮೇಣ ಇವು ಮರೆಯಾಗುತ್ತಿದ್ದು, ಮಣ್ಣಿನ ಪಾತ್ರೆಗಳ ಸ್ಥಾನವನ್ನು ಹಿತ್ತಾಳೆ, ಅಲ್ಯೂಮಿನಿಯಂ, ಸ್ಟೀಲ್ ಪಾತ್ರೆಗಳು ಆಕ್ರಮಿಸುತ್ತಿವೆ. ಸೀಮೆ ಎಣ್ಣೆ ದೀಪಗಳಿಂದ ಬೆಳಕು ಪಡೆಯುತ್ತಿದ್ದವರು ಸರ್ಕಾರ ಭಾಗ್ಯ ಜ್ಯೋತಿ ಯೋಜನೆಯಡಿಯಲ್ಲಿ ಕೆಲವೇ ಮನೆಗಳಲ್ಲಿ ಮಾತ್ರ ವಿದ್ಯುತ್ ದೀಪಗಳ ಬೆಳಕನ್ನು ಪಡೆದಿದ್ದಾರೆ.

೪. ಭಿಕ್ಷಾಟನೆ ಉಡುಪುಗಳು ಇವರಿಗೆ ಜೀವಂತ ನಾಡಿ ಮಿಡಿತಗಳಾಗಿವೆ. ಹಾಗೂ ನಿರಂತರ ಬಳಕೆಯಲ್ಲಿ ಉಪಯೋಗಿಸಿಕೊಳ್ಳುತ್ತಾರೆ. ಭಿಕ್ಷಾಟನೆ ಉಡುಪನ್ನು ಬಿಟ್ಟು, ಸಿಂಧೋಳ್ಳರಿಗೂ ಮೈತುಂಬಾ ಬಟ್ಟೆ ಇಲ್ಲ. ನಗರ ಗ್ರಾಮೀಣರ ಪ್ರಭಾವಕ್ಕೆ ಒಳಗಾದ ಪುರುಷರು ಅಂಗಿ ಚೆಡ್ಡಿ, ಪಂಚೆ, ಲುಂಗಿ, ಪ್ಯಾಂಟು, ಟೀಶರ್ಟ್, ಟೆರಿಕಾಟ್ ಮತ್ತು ಟೆರಿಲಿನ್ ಇತ್ಯಾದಿ ಬಟ್ಟೆಗಳನ್ನು ಧರಿಸುತ್ತಿದ್ದಾರೆ. ಮಹಿಳೆಯರು

ರವಿಕೆ ಸೀರೆ, ಚೂಡಿದಾರ ಮತ್ತು ನೈಟಿ ಉಡುಪುಗಳನ್ನು ಬಳಸುತ್ತಿದ್ದಾರೆ. ಚೂಡಿದಾರ ಮತ್ತು ನೈಟಿ ಉಡುಪುಗಳನ್ನು ಬೆರಳಣಿಕೆಯಷ್ಟು ಸ್ತ್ರೀಯರು ಉಪಯೋಗಿಸಿಸುತ್ತಿದ್ದಾರೆ. ಹುಡುಗರು ಕ್ರಾಪ್ ಕಟಿಂಗ್ ಮಾಡಿಸಿಕೊಂಡರೆ, ಹುಡುಗಿಯರು ಸ್ನೋ ಪೌಡರ್ ಇತ್ಯಾದಿ ಅಲಂಕಾರಿಕ ಸಾಮಾಗ್ರಿಗಳನ್ನು ಬಳಸುತ್ತಿದ್ದಾರೆ. ಆದರೆ ನಗರದಿಂದ ದೂರದಲ್ಲಿರುವ ಸಿಂಧೋಳ್ಳುರು ಮೊದಲಿನ ಸ್ಥಿತಿಯಲ್ಲಿಯೇ ಇರುವುದನ್ನು ಕಾಣಬಹುದಾಗಿದೆ. ಮತ್ತು ಬದಲಾವಣೆಗೆ ಒಳಗಾಗಿರುವುದಿಲ್ಲ. ನಗರಕ್ಕೆ ಹತ್ತಿರವಿದ್ದು, ವಾಹನ ಸೌಕರ್ಯವಿರುವ ಕಡೆಯಲ್ಲಿ ಸಿನಿಮಾ ಮಂದಿರಗಳಿಗೂ ಪ್ರವೇಶಿಸಿದ್ದಾರೆ. ಅವರು ವಾಸಿಸುವ ಗುಡಾರಗಳ ಪಕ್ಕದಲ್ಲಿ ಟಿ.ವಿ. ಇದ್ದವರ ಮನೆಯಲ್ಲಿ ಹೊರಗಡೆ ಕುಳಿತುಕೊಂಡು ಟಿ.ವಿ.ಯನ್ನು ನೋಡುವುದು ಇತ್ತೀಚಿನ ಮನರಂಜನೆಯಾಗಿದೆ. ಸಿಂಧೋಳ್ಳು ಹುಡುಗರಿಗೆ ಕ್ರಿಕೆಟ್ ಎಂದರೆ ತುಂಬಾ ಇಷ್ಟ. ಗುಡಾರದಲ್ಲಿ ಸಚಿನ್‌ತೆಂಡೂಲ್ಕರ್ ಛಾಯಾ ಚಿತ್ರಗಳನ್ನು ಹಾಕಿಕೊಂಡಿರುವುದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ಕಾಣಬಂದ ವಾಸ್ತವ ಸಂಗತಿಯಾಗಿದೆ.

### ೨. ಆರ್ಥಿಕ ಪರಿವರ್ತನೆ

ಮೊದಮೊದಲು ಬುಡಕಟ್ಟು ಸಮುದಾಯಗಳು ತಮ್ಮ ಆರ್ಥಿಕತೆಯ ಬಗ್ಗೆ ಅಷ್ಟಾಗಿ ಯೋಚನೆಮಾಡುತ್ತಿರಲಿಲ್ಲವೆಂದೇ ಹೇಳಬಹುದು. ದಿನಕ್ಕೆ ಬೇಕಾಗುವಷ್ಟು ಆಹಾರವನ್ನು ಸಂಗ್ರಹಿಸಿಕೊಳ್ಳುತ್ತಿದ್ದರು. ಕ್ರಮೇಣ ಹಣ ಉಳಿತಾಯ ಮಾಡುವುದರ ಬಗ್ಗೆ ಮುಂದಾದರು. ನಂತರ ಅವರು ತಮ್ಮದೇ ಆದ ಆರ್ಥಿಕ ಪರಿವರ್ತನೆಗಳಿಗೆ ಮಹತ್ವ ನೀಡತೊಡಗಿದರು. ಸಿಂಧೋಳ್ಳುರಲ್ಲಿ ಈಗ ಆರ್ಥಿಕವಾಗಿ ತುಂಬಾ ಬದಲಾವಣೆಗಳಾಗಿರುವುದನ್ನು ಕಾಣಬಹುದು. ಮೊದಲು ಆರ್ಥಿಕ ಸ್ಥಿತಿ ಚಿಂತಾಜನಕವಾಗಿತ್ತು. ಕೇವಲ ಭಿಕ್ಷಾಟನೆಯ ಮೂಲಕ ಮತ್ತು ದವಸಧಾನ್ಯಗಳನ್ನು ಸಂಪಾದಿಸಲಾಗುತ್ತಿತ್ತು. ಒಂದು ದಿನ ಭಿಕ್ಷೆ ಅದು ಅಂದಿನ ಹಣವಿದ್ದಂತೆ. ಅದು ಆಹಾರ, ದವಸಧಾನ್ಯ, ಬಟ್ಟೆ ರೂಪದಲ್ಲಿ ಆಗಿರಬಹುದು. ಇಂದು ಭಿಕ್ಷೆಕೊಡವರ ಸಂಖ್ಯೆ ವಿರಳವಾಗಿದೆ. ಆದರೂ ಭಿಕ್ಷೆ ಬೇಡುವವರು ಇವರಲ್ಲಿ ಅಧಿಕವಾಗಿದ್ದಾರೆ.

ಇಂದಿನ ದಿನಗಳಲ್ಲಿ ಸಿಂಧೋಳ್ಳುಲು "ಈ ಹಿಂದೆ ಭಿಕ್ಷಾಟನೆ, ಪಶುಪಾಲನೆ ವೃತ್ತಿಯನ್ನು ಕೈಗೊಂಡಿದ್ದರು. ಆದರೆ ಇಂದು ವ್ಯಾಪಾರ ಕೃಷಿಯೇತರ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇವರ ಆರ್ಥಿಕ ಸುಧಾರಣೆಯಲ್ಲಿ ಮೀನುಹಿಡಿಯುವುದು, ಕೃಷಿಯೇತರ ಕೂಲಿ, ವ್ಯಾಪಾರ ಎಂಬಿತ್ಯಾದಿ ವೃತ್ತಿಗಳು ಪಾತ್ರ ಹಿರಿದಾಗಿದೆ. ಕರ್ನಾಟಕದ ನಾನಾ ಭಾಗಗಳಲ್ಲಿ ಬ್ಯಾಂಕಿನ ವ್ಯವಹಾರಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಈ ಹಿಂದೆ ಇದ್ದ ಗುಡಾರದ ಮನೆಗಳು ಮಾಯವಾಗಿ ಆಸ್ಥಳದಲ್ಲಿ ಟಿನ್‌ಮನೆ, ದಾಬಾ ಮಾಳಿಗೆ ಮನೆಗಳು ಉಗಮವಾಗಿವೆ. ಇದಕ್ಕೆಲ್ಲ ಮುಖ್ಯ ಕಾರಣ ಇವರಲ್ಲಿ ಉಂಟಾಗಿರುವ ಆರ್ಥಿಕ ಬದಲಾವಣೆ. ಇಂತಹ ಪರಿಸ್ಥಿತಿಗಳ ನಡುವೆಯೂ ಇಲ್ಲಿ ಕೆಲವು ಜನ ಭಿಕ್ಷಾಟನೆಯನ್ನೇ ಅವಲಂಬಿಸಿ ಜೀವನ ಸಾಗಿಸುವುದನ್ನು ಕಾಣಬಹುದಾಗಿದೆ. ಇವರು ಅನುಸರಿಸುವ ವೃತ್ತಿಗಳಲ್ಲಿ ಕೂಡ ಸಾಕಷ್ಟು ವ್ಯತ್ಯಾಸ ಹಾಗೂ ಬದಲಾವಣೆ ಆಗಿರುವುದು ಕಂಡು ಬರುತ್ತದೆ. ಈ ಹಿಂದೆ ಅನುಸರಿಸುತ್ತಿದ್ದ ಮೂಲ ವೃತ್ತಿಗಳು ಇಂದು ಮಾಯವಾಗುತ್ತಿವೆ. ಇದಕ್ಕೆ ಹಲವಾರು ಕಾರಣಗಳಿವೆ. ಅವುಗಳೆಂದರೆ

ಸಂಘಟನೆಗಳು, ರಾಜಕೀಯ, ಸಾರಿಗೆ ಸಂಪರ್ಕ, ಅನ್ಯ ವ್ಯಾಪಾರ ದೃಷ್ಟಿಕೋನ ಇತ್ಯಾದಿ ಕ್ಷೇತ್ರಗಳಲ್ಲಾದ ಬೆಳವಣಿಗೆಯಿಂದ ಸಿಂಧೋಳ್ಳುರು ಪರಿವರ್ತನೆಯ ಹಾದಿಯಲ್ಲಿದ್ದಾರೆ.

೩. ಧಾರ್ಮಿಕ ಪರಿವರ್ತನೆ

ಸಿಂಧೋಳ್ಳುರಿಗೂ ಮತ್ತು ದೈವಕ್ಕೂ ಅವಿನಾಭಾವ ಸಂಬಂಧವಿದೆ. ಭಿಕ್ಷಾಟನೆಗೆ ಬಳಸುತ್ತಿದ್ದ ಮಾಪನವೆಂದರೆ ದೈವವೇ. ದೈವವೇ ಇವರ ಜೀವನಕ್ಕೆ ಮೂಲಾಧಾರವಾಗಿತ್ತು. ಇವರ ದೈವಗಳಾದ ಈರನಾಗಮ್ಮ, ಮಾರಗಮ್ಮ, ದುರುಗಮ್ಮ ಮತ್ತು ಕೂಗಮ್ಮ ಇತ್ಯಾದಿಗಳನ್ನು ಗಾಢವಾಗಿ ನಂಬಿದ್ದರು. ಕಾಲ ಬದಲಾದಂತೆ ಧಾರ್ಮಿಕ ವಿಚಾರದಲ್ಲಿಯೂ ಕೂಡಾ ಬದಲಾವಣೆಗಳಾಗ ತೊಡಗಿವೆ. ಇವರಲ್ಲಿ ಪೆಟ್ಟಿಗೆ ದೇವರುಗಳಿಗಿಂತ ಇತರೆ ದೇವರುಗಳಿಗೆ ಆದ್ಯತೆ ನೀಡಿರುವುದು ಕಂಡುಬರುತ್ತದೆ. ಈ ಸಮುದಾಯ ದಲ್ಲಿ ಇಂದು ಕೆಲವರ ಮನೆ ದೇವರು ಶ್ರೀ ಮಂಜುನಾಥ ಆಗಿರುವುದನ್ನು ಗಮನಿಸಬಹುದು. ಇನ್ನು ಕೆಲವರಿಗೆ ತಮ್ಮ ಮನೆ ದೇವರು ಆಂಜನೇಯ ಆಗಿದೆ. ಹಳೆ ತಲೆಮಾರಿನವರು ಪೆಟ್ಟಿಗೆ ದೈವಗಳನ್ನು ಮಾತ್ರ ಪೂಜಿಸುತ್ತಾರೆ. ಇಲ್ಲಿ ಬರುವ ಎಲ್ಲಾ ಹಬ್ಬ, ಜಾತ್ರೆ ಹಾಗೂ ಉತ್ಸವಗಳನ್ನು ಎಲ್ಲರೂ ಸಾಮೂಹಿಕವಾಗಿ ಒಂದೆಡೆ ಸೇರಿಕೊಂಡು, ಒಂದೇ ರೀತಿಯಲ್ಲಿ ಆಚರಿಸುತ್ತಾರೆ. ಯುಗಾದಿ, ದಸರಾ ಹಬ್ಬಗಳನ್ನು ಇವರು ಒಂದೇ ಬಗೆಯಲ್ಲಿ ಆಚರಿಸುವ ಪದ್ಧತಿ ಇದೆ.

ಸಿಂಧೋಳ್ಳುರಲ್ಲಿ ಕೆಲವರು ತಮ್ಮ ಕುಲದೇವತೆಗಳಿಗೆ ಶ್ರದ್ಧೆ ಭಕ್ತಿಯಿಂದ ಪೂಜಿಸಿದರೂ, ವರ್ಷದ ಕೊನೆಯದಿನಗಳಲ್ಲಿ ಧರ್ಮಸ್ಥಳ, ಮಂತ್ರಾಲಯ, ಪಾವಗಡ ಮೊದಲಾದ ದೇವರುಗಳ ದರ್ಶನ ಪಡೆದು ಕೊಂಡು ಬರುತ್ತಾರೆ. ಇಂದು ಸಿಂಧೋಳ್ಳುರಲ್ಲಿ ಶಬರಿಮಲೈ ಸ್ವಾಮಿ ಅಯ್ಯಪ್ಪ ಸಹ ಆರಾಧನೆಗೆ ಒಳಪಟ್ಟಿರುವುದನ್ನು ಗಮನಿಸಬಹುದು. ವರ್ಷಕ್ಕೊಮ್ಮೆ ಶಬರಿಮಲೈ ಸ್ವಾಮಿ ಮಾಲೆ ಧರಿಸಿ 'ಇರುಮುಡಿ' ಹೊತ್ತು ಶಬರಿಮ್ಮಲೆಗೆ ಹೋಗಿ ಬರುತ್ತಾರೆ. ತಮ್ಮ ಮಕ್ಕಳಿಗೆ ಹಿಂದೆ ತಮ್ಮ ಕುಲದೈವಗಳಿಗೆ ಜವಳ ತೆಗೆಸುವುದು ರೂಢಿಯಲ್ಲಿತ್ತು. ಆದರೆ ಇಂದು ತಮ್ಮ ಮಕ್ಕಳನ್ನು ಈಶ್ವರ ದೇವಸ್ಥಾನ, ಆಂಜನೇಯ ದೇವಸ್ಥಾನಕ್ಕೆ ಕರೆದುಕೊಂಡು ಹೋಗಿ 'ಜವಳ' ತೆಗೆಸುವುದನ್ನು ಕಾಣಬಹುದಾಗಿದೆ. ಎಷ್ಟೋ ಜನ ಇದರಿಂದಾಗಿ ಮಾಂಸ ಊಟವನ್ನು ತ್ಯಜಿಸಿರುವುದುಂಟು. ಗುಡಾರದಲ್ಲಿ ಪೆಟ್ಟಿಗೆಯ ಪರಿಕರಗಳ ಬಗ್ಗೆ ಪೂಜೆ ಸಂಬಂಧಿತ ಆಚರಣೆಗಳು ಇಂದು ಮಾಯವಾಗುತ್ತಿವೆ. ಮೊದಲು ಭಿಕ್ಷಾಟನೆಗಾಗಿ ದೊಡ್ಡ ಪೆಟ್ಟಿಗೆ ತೆಗೆದುಕೊಂಡು ಹೋಗುತ್ತಿದ್ದರು. ಅವು ಈಗ ಕಾಣಿಸುತ್ತಿಲ್ಲ. ಈಗ ಕೇವಲ ಚಿಕ್ಕ ಬುಟ್ಟಿಯಲ್ಲಿ ದೇವತೆ ಗಳನ್ನು ಮಾತ್ರ ತೆಗೆದುಕೊಂಡು ಹೋಗುವರು. ಹೀಗಿರುವಾಗ ಅವರಲ್ಲಿ ಧಾರ್ಮಿಕ ಭಿಕ್ಷಾಟನೆಗೆ ಸಂಬಂಧಿಸಿದ ಆಚರಣೆಗಳು ಅನಿವಾರ್ಯವಾಗಿ ಮಾಯವಾಗುತ್ತಿವೆ.

ಗೃಹ ಪ್ರವೇಶ ಸಂದರ್ಭದಲ್ಲಿ ಬ್ರಾಹ್ಮಣ ಪುರೋಹಿತರನ್ನು ಕರೆಸಿ, ಪೂಜೆ ಮಾಡಿಸಿರುವ ಘಟನೆಗಳು ಇಂದಿಗೂ ನಡೆದುದಿಲ್ಲ. ಕುಲದ ಮುಖ್ಯಸ್ಥನೆ ಧಾರ್ಮಿಕ ವಿಷಯದಲ್ಲಿ ಸಾರಥ್ಯವಹಿಸಿಕೊಳ್ಳುವುದುಂಟು. ಆದರೂ ಧಾರ್ಮಿಕ ಆಚರಣೆಗಳಲ್ಲಿ ಅಲ್ಪಮಟ್ಟಿನ ಬದಲಾವಣೆಗಳು ಆಗಿರುವುದನ್ನು ಗಮನಿಸಬಹುದಾಗಿದೆ.

೪. ಶಿಕ್ಷಣದಲ್ಲಿ ಪರಿವರ್ತನೆ

ಒಂದು ಸಮುದಾಯದಲ್ಲಿ ಏನಾದರೂ ಪರಿವರ್ತನೆಗಳು ಸಂಭವಿಸಿವೆ ಎಂದರೆ ಅದಕ್ಕೆ ಶೈಕ್ಷಣಿಕ

ಕಾರಣ ಒಂದಾಗಿರುತ್ತದೆ ಎಂದು ಹೇಳಬಹುದು. ಶಿಕ್ಷಣದಿಂದಾಗಿ ಆಗುವ ಪರಿವರ್ತನೆ ಬಹಳ ಪರಿಣಾಮ ಕಾರಿಯಾಗಿರುವಂತಹದ್ದು. "ಶಿಕ್ಷಣಮಟ್ಟವು ಎಲ್ಲಿ ಉತ್ತಮವಾಗಿರುತ್ತದೆಯೋ ಅಲ್ಲಿ ಎಲ್ಲಾ ವಿಧಧ ದಲ್ಲಿಯೂ ಮುಂಬರುವ ಅವಕಾಶವಿದೆ".[೭] ಶಿಕ್ಷಣವು ಮಾನವನ ಜೀವನದಲ್ಲಿ ಬಹಳ ಸುಲಭವಾಗಿ ಪರಿವರ್ತನೆಯನ್ನು ತರುವ ಒಂದು ಮಾಧ್ಯಮವಾಗಿದೆ. ಈ ಹಿಂದೆ ಸಿಂಧೋಳ್ಳುರು ಶಿಕ್ಷಣ ಪಡೆಯುವಲ್ಲಿ ವಿಫಲರಾಗಿದ್ದಾರೆ. ಕಾರಣ ಅವರಲ್ಲಿರುವ ಧಾರ್ಮಿಕ ಭಿಕ್ಷಾಟನೆ, ಬೇಟೆ ಇತ್ಯಾದಿ ಕೊರತೆಗಳಿಂದ ಶಿಕ್ಷಣ ಪಡೆಯುವಲ್ಲಿ ಹಿಂದೆ ಬಿದ್ದಿದ್ದಾರೆ. ಆದರೆ ಇತ್ತೀಚಿನ ದಿನಗಳಲ್ಲಿ ಸಿಂಧೋಳ್ಳುರ ಮಕ್ಕಳ ಕೈಯಲ್ಲಿ ತಟ್ಟೆ, ಚಂಬು, ಭಿಕ್ಷೆಯ ಬುಟ್ಟಿಗಳು ಮಾಯವಾಗಿ, ಅವರ ಹೆಗಲಿಗೆ ಕೈಚೀಲ ಮತ್ತು ಪುಸ್ತಕಗಳು ಏರಿವೆ ಮತ್ತು ಶಿಕ್ಷಣ ಪಡೆಯಲು ಹೆಚ್ಚು ಆಸಕ್ತರಾಗಿದ್ದಾರೆ. ಸಾಂಸ್ಕೃತಿಕ ಚಟುವಟಿಕೆಗಳಲ್ಲಿ ತುಂಬಾ ಉತ್ಸಾಹದಿಂದ ಭಾಗವಹಿಸುತ್ತಿರುವುದು ಕಾಣಬರುತ್ತದೆ.

ಸಿಂಧೋಳ್ಳುರು ತಮ್ಮ ಮಕ್ಕಳು ಭಿಕ್ಷೆ ಬೇಡಬಾರದು, ಎಂಬ ಉದ್ದೇಶದಿಂದ ಭಿಕ್ಷೆಯನ್ನು ಬಿಡಿಸಿ, ತಾವು ವಾಸಿಸುವ ಪ್ರದೇಶದಲ್ಲಿ ಶಾಲೆಗೆ ಕಳಿಸುವುದುಂಟು. ಅವರು ವಾಸಿಸುವ ಸ್ಥಳದಲ್ಲಿ ಪ್ರಾಥಮಿಕ ಶಾಲೆ ದೂರವಿದ್ದರೆ ಅಲ್ಲಿಗೂ ಕಳಿಸುತ್ತಿದ್ದಾರೆ. ಎಷ್ಟೋ ಜನ ಹಣದ ತೊಂದರೆಯಿಂದ ಶಿಕ್ಷಣ ಪಡೆಯಲು ಸಾಧ್ಯವಾಗದೆ ಇರುವ ಸ್ಥಿತಿಯು ಕೂಡ ಈ ಸಮುದಾಯದಲ್ಲಿದೆ. ಆದರೂ ಅವರವರ ಪರಿಸರದಲ್ಲಿ ಮಕ್ಕಳು ಶಾಲೆಗೆ ಹೋಗುವುದನ್ನು, ಕಂಡು "ನಮ್ಮ ಮಕ್ಕಳನ್ನು ಶಾಲೆಗೆ ಕಳುಹಿಸಬೇಕು, ಅವರನ್ನು ವಿದ್ಯಾವಂತರನ್ನಾಗಿ ಮಾಡಬೇಕು ಎಂದು ಹಂಬಲಿಸುತ್ತಾರೆ".[೮]

**೫. ಸಾಂಸ್ಕೃತಿಕ ಪರಿವರ್ತನೆ**

ಸಿಂಧೋಳ್ಳು ಸಮುದಾಯವು ತನ್ನ ಪಾರಂಪರಿಕ ಮೌಲ್ಯಗಳನ್ನು ಉಳಿಸಿಕೊಂಡು ಬರುವಲ್ಲಿ ಇಂದು ಕೆಲಮಟ್ಟಿ ಚಲನೆಯನ್ನು ಹೊಂದುತ್ತಿದೆ. ಅಂದರೆ ಪರಂಪರೆಯಿಂದ ಬಂದಂತಹ ಸಂಪ್ರದಾಯ, ನಂಬಿಕೆ ನಿಷೇಧಗಳು, ಹಬ್ಬ ಆಚರಣೆ, ಪೂಜಾ ವಿಧಾನಗಳು, ಸಾಹಿತ್ಯ, ಕಲೆ ಇತ್ಯಾದಿಗಳಲ್ಲಿ ಸ್ಥಿತ್ಯಂತರ ಗಳಾಗತೊಡಗಿವೆ. ಪರಂಪರೆಯಿಂದ ಬಂದ ಕೆಲವೇ ಕೆಲವು ಸಾಂಸ್ಕೃತಿಕ ಅಂಶಗಳನ್ನು ಇವರು ಉಳಿಸಿ ಕೊಂಡಿದ್ದಾರೆ. ಇದಕ್ಕೆಲ್ಲಾ ಮೂಲ ಕಾರಣವೆಂದರೆ ಅವರು ವಾಸಿಸುವ ನಗರ ಪ್ರದೇಶ, ಟಿ.ವಿ. ಮಾಧ್ಯಮ ಮತ್ತು ಸಿನಿಮಾ ಮಾಧ್ಯಮದಿಂದ ಸಿಂಧೋಳ್ಳುರು ಬದಲಾವಣೆಗೊಂಡಿದ್ದಾರೆ. ಆದರೂ ಅನೇಕ ವಿಷಯಗಳಲ್ಲಿ ಈ ಸಮುದಾಯದ ಮೂಲ ಆಚರಣೆಗಳು ವೈಶಿಷ್ಟ್ಯತೆಯನ್ನು ಪಡೆದುಕೊಂಡಿವೆ. ಸಿಂಧೋಳ್ಳುರು ಪಾರಂಪರಿಕವಾಗಿ ಹರಿದು ಬಂದಿದ್ದ ಹಾಡುಗಳನ್ನು ನಿರ್ಭೀತಿಯಿಂದ ಮತ್ತು ತುಂಬಾ ರಾಗವಾಗಿ ಹಾಡುತ್ತಿದ್ದರು. ಆದರೆ ಅಂದಿನ ಹಾಡುಗಳನ್ನು ಹೇಳಲಿಕ್ಕೆ ಇಷ್ಟಪಡುವುದಿಲ್ಲ. ಅದರ ಬದಲಾಗಿ ಹೊಸ ಹೊಸ ಹಾಡುಗಳನ್ನು, ಸಿನಿಮಾ ಹಾಡುಗಳನ್ನು ಹಾಡುವ ಅಭ್ಯಾಸ ಮಾಡಿಕೊಂಡಿದ್ದಾರೆ. ನಾನು ಭದ್ರಾವತಿ ಕ್ಷೇತ್ರಕಾರ್ಯ ಹೋದಾಗ ಸಿಂಧೋಳ್ಳು ನವಯುವತಿ ತಮ್ಮ ಸಮುದಾಯದ ಸಾಂಪ್ರದಾಯಿಕ ಹಾಡುಗಳನ್ನು ಹಾಡುವಂತೆ ಕೇಳಿದನು. ಅದಕ್ಕೆ ಅವರು ಸಾಹೇಬ್ರೆ ನಮ್ಮಗೆ ಭಿಕ್ಷಾಟನೆ ಹಾಡುಗಳು ಬರುವುದಿಲ್ಲ. ನಾನು ತೆಲುಗು ಸಿನಿಮಾದ ಇತ್ತೀಚಿನ ಹೊಸ ಹಾಡುಗಳನ್ನು ಹೇಳುತ್ತೇನೆ. ಕೇಳ್ರಿ ಸಾಹೇಬ್ರೆ ಎಂದಳು. ಹೀಗೆ ಸಾಹಿತ್ಯದಲ್ಲಿ ಹಲವಾರು ಹೊಸ ಬದಲಾವಣೆಗಳು ಆಗಿರುವುದು ಕಂಡುಬರುತ್ತದೆ. ಇದಕ್ಕೆ ಜಾಗತೀಕರಣ, ಆಧುನೀಕರಣ ಮೊದಲಾದ ಅಂಶಗಳು ಕಾರಣವಾಗಿವೆ.

ಸಿಂಧೋಳ್ಳುರ ಕಲೆಯಲ್ಲಿ ಅನೇಕ ವೈವಿಧ್ಯತೆಗಳು ಕಂಡು ಬರುವುದುಂಟು. ಆದರೆ ಅವರು ವಾಸಿಸುವ ಗುಡಾರದ ಮುಂಭಾಗದಲ್ಲಿ ಮಹಿಳೆಯರು ರಂಗೋಲಿ ಹಾಕುತ್ತಾರೆ. ಆದರೂ ಮೇಲೆ ವಿವರಿಸಿದ ಪರಿವರ್ತನೆಗಳು ನಗರದಲ್ಲಿ ಪ್ರದೇಶಗಳಲ್ಲಿ ವಾಸಿಸುವವರಲ್ಲಿ ಅಧಿಕವಾಗಿದ್ದು, ಗ್ರಾಮೀಣ ಪರಿಸರದವರಲ್ಲಿ ವಿರಳವಾಗಿರುವುದು ಗಮನಾರ್ಹ ಸಂಗತಿಯಾಗಿದೆ. ಗ್ರಾಮೀಣ ಭಾಗದಲ್ಲಿ ತಮ್ಮ ಸಂಸ್ಕೃತಿಯ ಸೊಗಡನ್ನು ಉಳಿಸಿಕೊಂಡಿದ್ದಾರೆ. "ಗುಡಾರ ಮತ್ತು ಅವರಿಗಿರುವ ಸಂಬಂಧ ಹೊರ ಹೋಗುವುದೆಂದರೆ ನೀರಿನಲ್ಲಿದ್ದ ಮೀನು ತೆಗೆದು ಹೊರಗೆಸೆದಂತಾಗುತ್ತದೆ. ಅವರ ಸಂಪ್ರದಾಯ ಆಚಾರ, ವಿಚಾರ, ಸಂಸ್ಕೃತಿ, ವೃತ್ತಿ ಮತ್ತು ಸಾಹಿತ್ಯ ಕಲೆಗಳೊಂದಿಗೆ ಭಾವನಾತ್ಮಕ ಸಂಬಂಧವಿದ್ದು ಇಂದಿಗೂ ಜೀವಂತವಾಗಿದೆ.

**ಅಡಿ ಟಿಪ್ಪಣಿಗಳು**

೧. ಪ್ರಭಾಕರ ಎ.ಎಸ್., (ಲೇ) ಗಿರಿಜನ ಸಿರಿ, ಅಭಿನಂದನ ಸಂಪುಟ: ಸರ್ಕಾರ ಮತ್ತು ಬುಡಕಟ್ಟು, ಖಂಡೋಬಾ ಪಿ.ಕೆ., ಅಭಿನಂದನ ಸಮಿತಿ, ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ಪು.೪೭೪

೨. ವಕ್ತೃ: ಸುಂಕಪ್ಪ (೭೦) ತಂದೆ ಸಂಜೀವಪ್ಪ, ಕಾಲುವೆಕಲ್ಲಾಪುರ, ಹಾನಗಲ್ ತಾ. ಹಾವೇರಿ ಜಿಲ್ಲೆ

೩. ವಕ್ತೃ: ಜಂಬಯ್ಯ (೨೫) ತಂದೆ ಲೇ. ಜಂಬಯ್ಯ, ಸಿದ್ದೇಶ್ವರನಗರ, ಹುಬ್ಬಳ್ಳಿ, ಧಾರವಾಡ ಜಿಲ್ಲೆ

೪. ಪ್ರಭಾಕರ ಎ.ಎಸ್., (ಲೇ) ಗಿರಿಜನ ಸಿರಿ, ಅಭಿನಂದನ ಸಂಪುಟ: ಸರ್ಕಾರ ಮತ್ತು ಬುಡಕಟ್ಟು, ಖಂಡೋಬಾ ಪಿ.ಕೆ., ಅಭಿನಂದನ ಸಮಿತಿ, ಕನ್ನಡ ಅಧ್ಯಯನ ಸಂಸ್ಥೆ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ಪು.೪೭೧

೫. ಭೈರಪ್ಪ ಕೆ., ಸಮಾಜಶಾಸ್ತ್ರ ತತ್ವಗಳು, ಸುರೇಶ ಪಬ್ಲಿಕೇಷನ್, ಗದಗ, ೧೯೯೫, ಪು. ೨

೬. ವಕ್ತೃ: ನಾಗಪ್ಪ (೭೦) ತಂದೆ ಹುಸೇನಪ್ಪ, ಭಾಗ್ಯನಗರ, ಕೀರ್ತಿಕಾಲೋನಿ, ಕೊಪ್ಪಳ

೭. ಕೃಷ್ಣಮೂರ್ತಿ ಹನೂರು., ಮ್ಯಾಸಬೇಡರ ಸಂಸ್ಕೃತಿ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು, ೧೯೯೩, ಪು. ೨೦೦

೮. ವಕ್ತೃ: ಫಕ್ಕಿರಪ್ಪ (೧೮) ತಂದೆ ಕನಕಪ್ಪ, ನಂದಿಘಟ್ಟು, ಮುಂಡಗೋಳ್ ತಾ. ಉತ್ತರಕನ್ನಡ ಜಿಲ್ಲೆ.

ಅಧ್ಯಾಯ - ೮

# ಸಮಾರೋಪ

೧. ಅಧ್ಯಯನದ ಫಲಿತಗಳು

೨. ಸಲಹೆಗಳು

೩. ಮುಂದಿನ ಅಧ್ಯಯನದ ಸಾಧ್ಯತೆಗಳು



# ಸಮಾರೋಪ

ಜಗತ್ತಿನ ಪ್ರತಿಯೊಂದು ರಾಷ್ಟ್ರವು ತನ್ನದೆಯಾದ ಸಾಂಸ್ಕೃತಿಕ ಪರಂಪರೆಯನ್ನು ಹೊಂದಿದ್ದು ಅವು ಆ ದೇಶದ ಹೆಮ್ಮೆಯನ್ನು ಸಾರುತ್ತವೆ. ಭೂಮಿ ಮೇಲಿರುವ ಸಮುದಾಯಗಳು ಏಕರೀತಿಯಾಗಿಲ್ಲ. ಸಮುದಾಯಗಳಲ್ಲಿ ಮೇಲು-ಕೀಳು, ಸ್ಪೃಶ್ಯ-ಅಸ್ಪೃಶ್ಯ, ಮಾಲಿಕ-ಕಾರ್ಮಿಕ, ಬಡವ-ಶ್ರೀಮಂತ, ಪ್ರಭು-ಪ್ರಜೆ ಇತ್ಯಾದಿ ಅಂಶಗಳು ಕಂಡುಬರುವುದು ಸರ್ವೆಸಾಮಾನ್ಯವಾಗಿವೆ. ಕಾರಣ ಸಮುದಾಯಗಳಲ್ಲಿಯ ಸಾಮಾಜಿಕ, ಆರ್ಥಿಕ, ರಾಜಕೀಯ,ಧಾರ್ಮಿಕ ಇತ್ಯಾದಿ ಅಂಶಗಳು ವಿಭಿನ್ನವಾಗಿವೆ.

ದೇಶೀಯ ನೆಲೆಯಲ್ಲಿ ಅನೇಕ ಸಮುದಾಯಗಳು ವಾಸಿಸುತ್ತಿವೆ. ಇಲ್ಲಿನ ಸಮುದಾಯಗಳ ಕುಲ ಕಸುಬುಗಳು, ಧಾರ್ಮಿಕ ಭಿಕ್ಷಾಟನೆ, ಕಲೆ ಮತ್ತು ಸಾಹಿತ್ಯವು ವಿಭಿನ್ನವಾಗಿವೆ. ಬಹುಮುಖ ಸಂಸ್ಕೃತಿಯ ತವರುರಾದ ಭಾರತದಲ್ಲಿ ಅನೇಕ ಬಗೆಯ ಜೀವನ ಕ್ರಮಗಳು ಸಮ್ಮಿಲನಗೊಂಡಿವೆ. ಹಲವರು ಈ ವ್ಯವಸ್ಥೆಯನ್ನು ವೈವಿಧ್ಯತೆಯಲ್ಲಿ ಏಕತೆ ಎನ್ನುವುದುಂಟು. ಆದರೂ ಈ ಅಂಶಗಳು ಮೇಲ್ನೋಟದಲ್ಲಿ ಒಂದೇ ಅನ್ನಿಸಿದರೂ ಸೂಕ್ಷ್ಮವಾಗಿ ನೋಡಿದಾಗ ಅವು ಒಂದೇ ಅಲ್ಲ. ಹಲವು ರೂಪಗಳಿಂದ ಕೂಡಿದ ವ್ಯವಸ್ಥೆ ಎನ್ನಿಸುತ್ತದೆ. ಅಲಕ್ಷಿತ ಬುಡಕಟ್ಟು ಸಮುದಾಯಗಳು ಅಕ್ಷರ ಲೋಕದಿಂದ ಬಹುದೂರ ಉಳಿದಿದ್ದ ಕಾಲ ಒಂದಿತ್ತು. ಆದರೆ, ಈಗ ಸಮಾಜ ವಿಜ್ಞಾನಿಗಳು ಬುಡಕಟ್ಟು ಸಮುದಾಯಗಳ ಮೇಲೆ ಸಂಶೋಧನೆಯನ್ನು ಆರಂಭಿಸಿದ್ದಾರೆ. ಸಂಶೋಧಕರು ಕಾಶ್ಮೀರದಿಂದ ಕನ್ಯಾಕುಮಾರಿಯವರೆಗೂ ಸಮುದಾಯಗಳಲ್ಲಿಯ ವಾಸ್ತವಗಳ ಮೇಲ ಸಾಕಷ್ಟು ಅಧ್ಯಯನ ಮಾಡಿದ್ದಾರೆ. ಈಗಲೂ ಅವರ ಕುರಿತು ಸಾಕಷ್ಟು ಅಧ್ಯಯನಗಳು ಮುಂದುವರೆದಿವೆ.

ಕರ್ನಾಟಕದ ಬುಡಕಟ್ಟುಗಳೂ ಸಂಸ್ಕೃತೀಕರಣದ ಪ್ರಭಾವಕ್ಕೆ ಒಳಗಾಗಿವೆ. ಕೆಲವು ಬುಡಕಟ್ಟುಗಳು ತಮ್ಮ ಮೂಲ ಸಂಸ್ಕೃತಿಯ ಅಂಶಗಳನ್ನು ಉಳಿಸಿಕೊಳ್ಳಲು ಮುಂದಾಗಿವೆ. ಮೇಲ್ನೋಟಕ್ಕೆ ಹಲವು ಸಮುದಾಯಗಳ ಸಾಂಸ್ಕೃತಿಕ ಆಚರಣೆಗಳು ಒಂದೇ ತರಹ ಎನಿಸಿದರೂ ಆಂತರ್ಯದಲ್ಲಿ ವ್ಯತ್ಯಾಸಗಳಿವೆ. ಸಾಮಾಜಿಕ ವ್ಯವಸ್ಥೆಯೂ ಏಣಿ ಶ್ರೇಣಿಯಿಂದ ಕೂಡಿದೆ ಎಂಬುದಕ್ಕೆ ದಲಿತ, ಬುಡಕಟ್ಟು, ಎಂಬಿತ್ಯಾದಿ ಪದಗಳೇ ಸಾಕ್ಷಿ. ಇಂತಹ ಸಮುದಾಯಗಳ ಮೇಲೆ ಪ್ರತ್ಯೇಕ ಅಧ್ಯಯನಗಳು ಆಗಿವೆ. ಆದರೆ ಅವುಗಳಲ್ಲಿಯ ಅಲೆಮಾರಿ ಸಮುದಾಯಗಳ ಕುರಿತು ಸಮಗ್ರ ಅಧ್ಯಯನ ಆಗಿಲ್ಲವೆಂದರೆ ತಪ್ಪಾಗಲಾರದು. ಅಲೆಮಾರಿ ಸಮುದಾಯದ ಸಮಗ್ರ ಅಧ್ಯಯನ ದೃಷ್ಟಿಕೋನದಿಂದ ಪ್ರಸ್ತುತ "ಕರ್ನಾಟಕದ ಸಿಂಧೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ" ಮಾಡಲಾಗಿದೆ. ರಾಜ್ಯದ ನಾನಾ ಸ್ಥಳಗಳಲ್ಲಿ

ಸಿಂಧೋಳ್ಳುರು ವಾಸಿಸುತ್ತಿದ್ದಾರೆ. ಸಿಂಧೋಳ್ಳುರ ಪ್ರಮುಖ ನೆಲೆಯಾದ ಬಳ್ಳಾರಿ ಜಿಲ್ಲೆಯನ್ನು ಕೇಂದ್ರವಾಗಿಟ್ಟುಕೊಂಡು ೨೦ ಜಿಲ್ಲೆಗಳಲ್ಲಿ ಕ್ಷೇತ್ರಕಾರ್ಯ ಮಾಡಲಾಗಿದೆ. ಅವು ಬಾಗಲಕೋಟೆ, ಬಳ್ಳಾರಿ, ಬೆಳಗಾವಿ, ಬೀದರ, ಚಿಕ್ಕಮಗಳೂರು, ಚಿತ್ರದುರ್ಗ, ದಾವಣಗೆರೆ, ಧಾರವಾಡ, ಗದಗ, ಗುಲ್ಬರ್ಗಾ, ಹಾಸನ, ಹಾವೇರಿ, ಕೊಪ್ಪಳ, ಮಂಡ್ಯ, ಮೈಸೂರು, ರಾಯಚೂರು, ವಿಜಾಪುರ, ಶಿವಮೊಗ್ಗ ತುಮಕೂರು ಮತ್ತು ಉತ್ತರ ಕನ್ನಡ ಜಿಲ್ಲೆಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಲಾಗಿದೆ. ಅದರೆ ಇನ್ನು ೭ ಜಿಲ್ಲೆಗಳಲ್ಲಿ ಸಿಂಧೋಳ್ಳುರ ಜನ ವಸತಿಯ ಬಗ್ಗೆ ಯಾವುದೇ ಮಾಹಿತಿ ಲಭ್ಯವಿರುವುದಿಲ್ಲ.

ಕರ್ನಾಟಕ ಸಿಂಧೋಳ್ಳು ಸಮುದಾಯ ಎಂಬ ನಿಬಂಧವು ಹಲವು ಪೂರಕ ಗ್ರಂಥಗಳ ನೆರವು ಹಾಗೂ ಕ್ಷೇತ್ರ ಮಾಹಿತಿಯ ಸಹಾಯದಿಂದ ರೂಪಗೊಂಡಿದೆ.

ಪ್ರಥಮ ಅಧ್ಯಾಯವು ಪ್ರವೇಶ ಎಂಬ ಪೀಠಿಕಾ ಭಾಗದಿಂದ ಪ್ರಾರಂಭಿಸಲಾಗಿದೆ. ಈ ಅಧ್ಯಾಯದಲ್ಲಿ ಸಿಂಧೋಳ್ಳು ಸಮುದಾಯದ ಅಧ್ಯಯನದ ಪ್ರಾಮುಖ್ಯತೆಯನ್ನು ನಿರ್ಧರಿಸುತ್ತದೆ. ಪ್ರಸ್ತುತ ಸಂಶೋಧನೆಯ ಉದ್ದೇಶಗಳು, ವ್ಯಾಪ್ತಿ ಮತ್ತು ಅಳವಡಿಸಿಕೊಂಡ ವಿಧಾನಗಳ ಮೇಲೆ ಬೆಳಕು ಚೆಲ್ಲುತ್ತದೆ.

ದ್ವಿತೀಯ ಅಧ್ಯಾಯವು ಐತಿಹಾಸಿಕ ಹಿನ್ನೆಲೆ ಎಂಬ ಶೀರ್ಷಿಕೆ ಹೊಂದಿದೆ. ಈ ಅಧ್ಯಾಯದಲ್ಲಿ ಮೂಲ, ಪರಿಚಯ ಮತ್ತು ಪ್ರಸಾರ ಹಾಗೂ ಜನ ಸಂಖ್ಯೆಯನ್ನು ಕುರಿತು ಚರ್ಚಿಸಲಾಗಿದೆ. ಸಿಂಧೋಳ್ಳು ಸಮುದಾಯದ ಬಗೆಗಿನ ಸೃಷ್ಟಿ ಪುರಾಣಗಳು, ಸಾಂಸ್ಕೃತಿಕ ಚರಿತ್ರೆಯ ಬಗೆಗೆ ವಿಶ್ಲೇಷಿಸಲಾಗಿದೆ. ಭಾರತ ಮತ್ತು ಕರ್ನಾಟಕ ಬುಡಕಟ್ಟುಗಳ ಸಮೀಕ್ಷೆಯ ಬಗೆಗೆ, ಸೂಕ್ಷ್ಮವಾಗಿ ಗಮನಿಸಲಾಗಿದೆ.

ಮೂರನೆಯ ಅಧ್ಯಾಯವು ಸಮಾಜೋ-ಆರ್ಥಿಕ ಮತ್ತು ಶೈಕ್ಷಣಿಕ ಅಧ್ಯಯನ ಎಂಬ ಶೀರ್ಷಿಕೆಯನ್ನು ಹೊಂದಿದ್ದು, ಸಿಂಧೋಳ್ಳು ಸಮುದಾಯದ ಸಾಮಾಜಿಕ, ಆರ್ಥಿಕ ಮತ್ತು ಶೈಕ್ಷಣಿಕ ಅಂಶಗಳ ಬಗೆಗೆ ಚರ್ಚಿಸಲಾಗಿದೆ. ಇಲ್ಲಿ ಕೌಟುಂಬಿಕ ಪದ್ಧತಿ, ಆಹಾರ ಪದ್ಧತಿ, ವೈದ್ಯ ಪದ್ಧತಿ, ವೇಷ-ಭೂಷಣ, ಬೆಡುಗು ಮೊದಲಾದ ಅಂಶಗಳನ್ನು ವಿಶ್ಲೇಷಿಸಲಾಗಿದೆ.

ಕರ್ನಾಟಕ ಭೂ ಪ್ರದೇಶದಲ್ಲಿ ಸಿಂಧೋಳ್ಳು ಸಮುದಾಯ ವಾಸಿಸುವ ನೆಲೆಗಳನ್ನು ಗುರುತಿಸಲಾಗಿದ್ದು, ದತ್ತ ಮಾಹಿತಿಯನ್ನು ಆಧರಿಸಿ ಪ್ರಾದೇಶಿಕವಾರು ಜನಸಮುದಾಯದ ಅಂಕಿ-ಅಂಶಗಳನ್ನು ದಾಖಲಿಸಲಾಗಿದೆ. ಸಾಮಾನ್ಯವಾಗಿ ಗುಡಾರಗಳನ್ನು ತಮ್ಮ ವಾಸದ ಕೇಂದ್ರಗಳನ್ನಾಗಿಸಿಕೊಂಡು ಬಂದಿರುವ ಸಿಂಧೋಳ್ಳು ಸಮುದಾಯ ಕಾಲದ ಅವಶ್ಯಕತೆಗನುಗುಣವಾಗಿ ಅಥವಾ ಬದಲಾಗುತ್ತಿರುವ ಕಾಲದ ಗುಣ-ಧರ್ಮಕ್ಕನುಗುಣವಾಗಿ ತಮ್ಮ ವಾಸದ ನೆಲೆಗಳನ್ನು ಪರಿವರ್ತನೆ ಮಾಡಿಕೊಳ್ಳುವ ನಿಟ್ಟಿನಲ್ಲಿ ಸಾಗಿದೆ. ಇದೇ ಸಂದರ್ಭದಲ್ಲಿ ಸಿಂಧೋಳ್ಳುರು ಭಿಕ್ಷಾಟನೆಯಿಂದ ಬಂದಿರುವಂತಹ ಆಹಾರವನ್ನು ಸೇವಿಸುವುದರ ಜೋತೆಗೆ ಇತ್ತೀಚಿನ ದಿನಗಳಲ್ಲಿ ಗುಡಾರದ ಮುಂದೆ ಅಡಿಗೆ ಮಾಡಿಕೊಳ್ಳುತ್ತಲಿದ್ದಾರೆ.

ಆಧುನೀಕತೆಯ ಹಲವಾರು ಸೌಲಭ್ಯಗಳಿಂದ ದೂರ ಉಳಿದಿರುವ ಈ ಸಮುದಾಯ ಸಾಮಾನ್ಯವಾಗಿ ಈಗಲೂ ಪಾರಂಪರಿಕ ವೈದ್ಯ ಪದ್ಧತಿಯನ್ನೇ ನಂಬಿಕೊಂಡಿದೆ. ಭಿಕ್ಷಾಟನೆಯು ತಮ್ಮ ಮೂಲ ಮತ್ತು ಪ್ರಧಾನ ವೃತ್ತಿಯಾಗಿರುವುದರಿಂದ, ಭಿಕ್ಷಾಟನೆ ಸಂದರ್ಭದಲ್ಲಿ ಸಾಮಾನ್ಯ ದಿನಗಳಲ್ಲಿ ಧರಿಸುವ

ವೇಷಭೂಷಣಗಳಿಗಿಂತ ಭಿನ್ನವಾದ ಉಡುಪುಗಳನ್ನು ಧರಿಸಿಕೊಳ್ಳುವುದುಂಟು. ಭಿಕ್ಷಾಟನೆ ಸಮಯದಲ್ಲಿ ಪ್ರತೇಕ ಉಡುಪು ಧರಿಸುವುದು ಕಡ್ಡಾಯ.

ಆರ್ಥಿಕತೆಯಲ್ಲಿ ಸಿಂಧೋಳ್ಳು ಸಮುದಾಯ ಹಿಂದುಳಿದ ಅಸ್ಪೃಶ್ಯ ಸಮುದಾಯವಾಗಿದೆ. ಸಿಂಧೋಳ್ಳರ ಮೂಲ ಮತ್ತು ಪ್ರಧಾನ ಕಸುಬು ಭಿಕ್ಷಾಟನೆ. ಜೀವನ ನಿರ್ವಹಣೆಗಾಗಿ ಭಿಕ್ಷಾಟನೆಯನ್ನೇ ಅವಲಂಬಿಸಿದ್ದಾರೆ. ಹಿಂದೆಗಿಂತಲೂ ಇಂದು ಭಿಕ್ಷೆಯ ಬಗೆಗಿನ ಜನರ ಕಲ್ಪನೆಗಳು ಅಥವಾ ಧೋರಣೆಗಳು ಬದಲಾಗಿವೆ. ಪರಿಣಾಮವಾಗಿ ಭಿಕ್ಷೆ ನೀಡುವವರ ಸಂಖ್ಯೆ ಕಡಿಮೆಯಾಗಿರುವುದರಿಂದ ಭಿಕ್ಷೆ ಬೇಡುವವರ ಸಂಖ್ಯೆಯೂ ಇಳಿಮುಖವಾಗುತ್ತಿದೆ. ಜೀವನ ನಿರ್ವಹಣೆಗಾಗಿ, ಅನಿವಾರ್ಯವಾಗಿ ಬೇರೊಂದು ವೃತ್ತಿಯನ್ನು ಅವಲಂಬಿಸಬೇಕಾಗಿದೆ. ತತ್ಪರಿಣಾಮವಾಗಿ ಭಿಕ್ಷಾಟನೆ ಜೊತೆಯಲ್ಲಿ ಕೂಲಿ, ವ್ಯಾಪಾರ, ಮೊದಲಾದ ವೃತ್ತಿಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಬೇಟೆಯಾಡುವುದು ಸಿಂಧೋಳ್ಳು ಸಮುದಾಯದ ಮುಖ್ಯ ಕಸುಬುಗಳಲ್ಲಿ ಒಂದು. ಬೇಟೆಯಲ್ಲಿ ಎರಡು ವಿಧ. ಸಸ್ಯಹಾರಿ ಪ್ರಾಣಿಗಳನ್ನು ತಮ್ಮ ಆಹಾರಕ್ಕಾಗಿ ಬೇಟೆಯಾಡುವುದು ಒಂದು. ಗುಡ್ಡಗಾಡುಗಳಲ್ಲಿ ತಮ್ಮ ರಕ್ಷಣೆಗಾಗಿ ಮಾಂಸಹಾರಿ ಪ್ರಾಣಿಗಳನ್ನು ಬೇಟೆಯಾಡುವುದು ಇನ್ನೊಂದು. ಈ ಸಂದರ್ಭದಲ್ಲಿ ಹಲವು ಬಗೆಯ ತಂತ್ರಗಾರಿಕೆಗಳನ್ನು ಬಳಸುವುದು ಈ ಸಮುದಾಯಕ್ಕೆ ರಕ್ತಗತವಾಗಿದೆ. ಆದರೂ ಇಂದು ಬೇಟೆಯಾಡುವುದು ಕಡಿಮೆಯಾಗಿದೆ. ಇದಕ್ಕೆ ಸಾಮಾಜಿಕ, ಆರ್ಥಿಕ, ರಾಜಕೀಯ ಮತ್ತು ಧಾರ್ಮಿಕ ಅಂಶಗಳು ಮುಖ್ಯ ಕಾರಣವಾಗಿದೆ.

ಪಾರಂಪರಿಕ ಕಸುಬುಗಳನ್ನು ಬಿಟ್ಟಾಗ ಅಥವಾ ಹೊಸ ವೃತ್ತಿಗಳನ್ನು ಅನುಸರಿಸಿದಾಗ ಈ ಸಮುದಾಯಕ್ಕೆ ಎದುರಾದ ಸವಾಲುಗಳನ್ನು ಮತ್ತು ಜೀವನಕ್ರಮದಲ್ಲಾದ ಹೊಸ ಬದಲಾವಣೆಗಳನ್ನು ಕ್ಷೇತ್ರ ಅಧ್ಯಯನದ ಹಿನ್ನೆಲೆಯಲ್ಲಿ ಅಂಕಿಅಂಶಗಳ ಮುಖೇನ ವಿಶ್ಲೇಷಿಸಲಾಗಿದೆ.

ಶೈಕ್ಷಣಿಕತೆಯಲ್ಲಿ ಸಿಂಧೋಳ್ಳು ಸಮುದಾಯದ ಬಗೆಗೆ ಚರ್ಚಿಸಲಾಗಿದೆ. ಇತ್ತೀಚಿಗಷ್ಟೇ ಅಕ್ಷರ ಲೋಕಕ್ಕೆ ತೆರೆದುಕೊಂಡಿದ್ದಾರೆ ಇವರು. ಆದರೂ ಅಕ್ಷರ ಜ್ಞಾನ ಪಡೆದವರ ಸಂಖ್ಯೆ ತುಂಬ ಕಡಿಮೆ. ಅದರಲ್ಲೂ ಪುರುಷರಿಗಿಂತ ಮಹಿಳೆಯರ ಸಾಕ್ಷರತೆ ತುಂಬಾ ವಿರಳ. ಶಿಕ್ಷಣದತ್ತ ಮಾಹಿತಿಯನ್ನು ಆಧರಿಸಿ ಶಿಕ್ಷಣ ಪಡೆದವರ ಪ್ರಮಾಣವನ್ನು ಅಂಕಿ-ಸಂಖ್ಯೆ ಮತ್ತು ಸಾಕ್ಷರತೆ ಅಂಕಿ-ಸಂಖ್ಯೆಗಳ ಮುಖೇನ ಚರ್ಚಿಸಲು ಪ್ರಯತ್ನಿಸಲಾಗಿದೆ. ಹೀಗೆ ಈ ಬಗೆಯ ಮೂರನೇ ಅಧ್ಯಾಯವು ಹೃದಯದ ಭಾಗವಾಗಿದ್ದು, ಅನೇಕ ಅಂಶಗಳು ಕುರಿತು ಸಮಗ್ರವಾಗಿ ಚರ್ಚಿಸಲು ಪ್ರಯತ್ನಿಸಲಾಗಿದೆ.

ನಾಲ್ಕನೆಯ ಅಧ್ಯಾಯವು ಸಂಪ್ರದಾಯ ಮತ್ತು ಆಚರಣೆಗಳು ಈ ವಿಷಯದ ಮೇಲೆ ಕೇಂದ್ರೀಕರಿಸಲಾಗಿದೆ. ಪ್ರಧಾನವಾಗಿ ಜನನ ಪೂರ್ವ ಮತ್ತು ಜನನೋತ್ತರ ಕಾಲಘಟ್ಟದಲ್ಲಿ ಜರುಗಬಹುದಾದ ಸಂಸ್ಕಾರಗಳ ಬಗೆಗೆ ಗಮನಹರಿಸಲಾಗಿದೆ. ಅಂದರೆ ನಾಮಕರಣ, ತೊಟ್ಟಿಲುಶಾಸ್ತ್ರ, ಋತುಮತಿಶಾಸ್ತ್ರ, ವಿವಾಹ, ಮರಣ ಸಂಸ್ಕಾರ ಮತ್ತು ನ್ಯಾಯ ಪಂಚಾಯಿತಿ ಮೊದಲಾದ ಸಂದರ್ಭಗಳನ್ನು ವಿಶ್ಲೇಷಣೆಗೆ ಗುರಿ ಮಾಡಲಾಗಿದೆ. ಶುಭ ಕಾರ್ಯಕ್ರಮಗಳ ಸಂದರ್ಭದಲ್ಲಿ ಈ ಸಮುದಾಯ ಪಾರಂಪರಿಕವಾಗಿ ನಂಬಿಕೊಂಡು ಬಂದಿರುವ ನಂಬಿಕೆ-ನಿಷೇಧಗಳನ್ನು ಗುರುತಿಸಲು ಪ್ರಯತ್ನ ಮಾಡಲಾಗಿದೆ

ಹಾಗೂ ಪ್ರಾಸಂಗಿಕವಾಗಿ ಈ ನಂಬಿಕೆ ಮತ್ತು ನಿಷೇಧಗಳ ಈ ಸಮುದಾಯ ಇರಿಸಿಕೊಂಡಿರುವ ಧೋರಣೆಗಳನ್ನು ಅರಿಯಲು ಪ್ರಯತ್ನಿಸಲಾಗಿದೆ. ಸಿಂಧೋಳ್ಳು ಸಮುದಾಯ ಇತರ ಬುಡಕಟ್ಟು ಸಮುದಾಯಗಳಿಗಿಂತ ಭಿನ್ನವಾಗಿ ನಿಲ್ಲುವುದರ ಮೂಲಕ ವೈಶಿಷ್ಟತೆಯನ್ನು ಪಡೆಯುತ್ತದೆ ಎಂಬುದನ್ನು ಸೂಕ್ಷ್ಮವಾಗಿ ಅರಿಯಲು ಪ್ರಯತ್ನಿಸಿದೆ.

ಐದನೆಯ ಅಧ್ಯಾಯವು ಧಾರ್ಮಿಕ ಹಬ್ಬ ಆಚರಣೆಗಳು ಈ ವಿಷಯದ ವಿವರಣೆಯನ್ನು ನೀಡುತ್ತದೆ. ಈ ಅಧ್ಯಾಯದಲ್ಲಿ ಹಬ್ಬಗಳು, ಜಾತ್ರೆಗಳು, ಹರಕೆ ಮತ್ತು ಬಲಿ ಆಚರಣೆ ಅಂಶಗಳ ಬಗೆಗೆ ವಿಶ್ಲೇಷಿಸಲಾಗಿದೆ. ಜೊತೆಗೆ ತನ್ನ ಸುತ್ತಮುತ್ತಲಿನ ದೈವಗಳು ಈ ಸಮುದಾಯದ ಮೇಲೆ ಹೇಗೆ ಪ್ರಭಾವ ಬೀರಿದೆ ಎಂಬುದನ್ನು ಗುರುತಿಸಲು ಇಲ್ಲಿ ಪ್ರಯತ್ನಿಸಲಾಗಿದೆ. ದುರುಗಮ್ಮ, ಮರಗಮ್ಮ, ಕೂಗಮ್ಮ ಮತ್ತು ದ್ಯಾವಮ್ಮ ಮೊದಲಾದ ದೈವಗಳು ಈ ಸಮುದಾಯದ ಕುಲದೈವಗಳೆಂದು ಗುರುತಿಸಲ್ಪಟ್ಟಿವೆ.

ಭಿಕ್ಷಾಟನೆಯನ್ನೇ ತಮ್ಮ ಮೂಲವೃತ್ತಿ ಮಾಡಿಕೊಂಡಿರುವ ಸಿಂಧೋಳ್ಳುರು ಭಿಕ್ಷಾಟನೆಗೆ ದೈವ ಮತ್ತು ಧರ್ಮವನ್ನೇ ಪ್ರಧಾನ ಅಸ್ತ್ರವನ್ನಾಗಿ ಬಳಸುವುದುಂಟು. ಈ ಹಿನ್ನೆಲೆಯಲ್ಲಿ ಸಿಂಧೋಳ್ಳು ಸಮುದಾಯ ಹಾಗೂ ದೈವದ ನಡುವಿನ ಅನ್ಯೋನ್ಯತೆಯನ್ನು ಕೂಲಂಕುಶವಾಗಿ ಚರ್ಚಿಸಲು ಪ್ರಯತ್ನಿಸಲಾಗಿದೆ. ಸಿಂಧೋಳ್ಳುರು ತಮ್ಮ ದೈವದ ಮೂರ್ತಿಗಳನ್ನು ತಾವೇ ತಯಾರಿಸಿಕೊಳ್ಳುವುದುಂಟು. ಹೀಗೆ ದೈವಗಳನ್ನು ತಯಾರು ಮಾಡಿಕೊಳ್ಳುವಾಗ ಯಾವ ಬಗೆಯ ನಂಬಿಕೆಗಳನ್ನು ತಿಳಿದುಕೊಂಡಿದ್ದಾರೆ ಎಂಬುದನ್ನು ತಿಳಿಸಲಾಗಿದೆ. ಸೃಷ್ಟಿ ಮಾಡಿದ ದೈವಗಳಿಗೆ ತಾವೇ ವಸ್ತ್ರವಿನ್ಯಾಸವನ್ನು ಮಾಡುವುದುಂಟು. ಈ ವಸ್ತ್ರವಿನ್ಯಾಸ ಮಾಡುವಾಗ ಹಲವು ಬಗೆಯ ವಿಧಿ-ವಿಧಾನಗಳನ್ನು ಅಥವಾ ನಂಬಿಕೆಗಳನ್ನು ಅನುಸರಿಸುತ್ತಾರೆ. ಈ ಎಲ್ಲಾ ಸಂಗತಿಗಳು ಅಧ್ಯಯನದಲ್ಲಿ ತುಂಬಾ ಕುತೂಹಲಕಾರಿ ಎನಿಸುತ್ತದೆ.

ಆರನೆಯ ಅಧ್ಯಾಯದಲ್ಲಿ ಭಾಷೆ, ಸಾಹಿತ್ಯ ಮತ್ತು ಕಲೆ ಕುರಿತು ವಿಶ್ಲೇಷಣೆ ಮಾಡಲಾಗಿದೆ. ಸಿಂಧೋಳ್ಳುರ ಮಾತೃಭಾಷೆ ತೆಲುಗು. ವ್ಯವಹಾರಿಕ ಭಾಷೆ ಕನ್ನಡ. ಯಾವ ಯಾವ ಸಂದರ್ಭದಲ್ಲಿ ಮಾತೃಭಾಷೆಯನ್ನು ಹೇಗೆ ಪ್ರಯೋಗಿಸುತ್ತಾರೆ. ಇದರ ಸಂಬಂಧ ಕನ್ನಡಕ್ಕೂ ಇರುವ ಅನನ್ಯತೆ ಹೇಗಿದೆ ಎಂಬುದನ್ನು ಗುರುತಿಸಲಾಗಿದೆ.

ಸಿಂಧೋಳ್ಳು ಸಮುದಾಯ ತನ್ನದೇ ಆದ ಸಾಹಿತ್ಯವನ್ನು ಹೊಂದಿದೆ. ಜೀವನ ನಿರ್ವಹಣೆಯ ಪ್ರಧಾನ ವೃತ್ತಿಯಾದ ಭಿಕ್ಷಾಟನೆಯ ಸಮಯದಲ್ಲಿ ಹಾಡಿನ ಮೂಲಕವೇ ಭಾಷೆಯನ್ನು ಹೇಳುವುದುಂಟು. ಇಲ್ಲಿ ಮಾತಿಗಿಂತ ಹಾಡಿಗೆ ಹೆಚ್ಚು ಪ್ರಾಧಾನ್ಯತೆ. ಭಿಕ್ಷಾಟನೆ ಹೊರತುಪಡಿಸಿ ಇತರ ಕೆಲಸ-ಕಾರ್ಯಗಳ ಸಂದರ್ಭದಲ್ಲಿ ವೈವಿಧ್ಯಮಯ ಸಾಹಿತ್ಯವನ್ನು ಅಭಿವ್ಯಕ್ತಿಸುವುದು ಕಾಣಬರುತ್ತದೆ. ನಾಮಕರಣ, ಋತುಮತಿ, ಮದುವೆ ಮತ್ತು ಹಬ್ಬ-ಹರಿದಿನ ಉತ್ಸವ ಸಂಸ್ಕಾರಗಳ ಸಮಯದಲ್ಲಿ ಅಭಿವ್ಯಕ್ತಿಗೊಳಿಸಿರುವ ಸಾಹಿತ್ಯವನ್ನು ಸಂಗ್ರಹಿಸಲಾಗಿದೆ. ಅಲ್ಲದೆ ತಮ್ಮ ಕುಲದೈವಗಳ ಬಗೆಗೆ ಪಾರಂಪರಿಕವಾಗಿ ಮೌಖಿಕವಾಗಿ ಉಳಿದುಕೊಂಡು ಬಂದಿರುವ ಸಾಹಿತ್ಯವನ್ನು ಸಂಗ್ರಹಿಸಿ, ಅನುಬಂಧದಲ್ಲಿ ನೀಡಲಾಗಿದೆ.

ಸಿಂಧೋಳ್ಳುರು ತಮ್ಮ ಗುಡಾರಗಳ ಮುಂದೆ ದೇವರ ಬುಟ್ಟಿ ತಯಾರಿಸುವುದು, ಕಸೂತಿ, ಚಾಟಿ

ತಯಾರಿಕೆ, ಬುರ್ರ ಬುರ್ರವಾದ್ಯ, ತಮಟೆ ತಯಾರಿಕೆ ಇತ್ಯಾದಿ ಕಲೆಯ ತಂತ್ರಗಾರಿಕೆ ಹೊಂದಿದ್ದಾರೆ. ಚೌಕಬಾರ್, ಅಂಟಿಪಿಂಟಿ ಮುಂತಾದ ಮಕ್ಕಳ ಆಟಗಳನ್ನು ಈ ಅಧ್ಯಯದಲ್ಲಿ ವಿವರಿಸಲಾಗಿದೆ.

ಏಳನೆಯ ಅಧ್ಯಾಯದಲ್ಲಿ ಸಮಕಾಲೀನ ಸವಾಲುಗಳ ಬಗೆಗೆ ಗಮನಹರಿಸಲಾಗಿದೆ. ಸಿಂಧೋಳ್ಳುರು ಇಂದಿನ ದಿನದಲ್ಲಿ ಒಂದ್ಹೊತ್ತಿನ ಊಟಕ್ಕಾಗಿ ಪರದಾಡುವಂತಹವರು. ಒಂದು ದಿನ ಭಿಕ್ಷಾಟನೆ ಅಥವಾ ದುಡಿಯಲು ಹೋಗಿಲ್ಲವೆಂದರೆ ಅವರು ಅಂದು ಉಪವಾಸವೇ ಸರಿ. ಶಾಲೆ ಸೇರಬೇಕೆಂದರೆ ಮಕ್ಕಳಿಗೆ ಮೀಸಲಾತಿ ಪ್ರಮಾಣ ಪತ್ರ ಬೇಕಾಗಿರುವುದು ಕಡ್ಡಾಯವಾಗಿದೆ. ಆದರೆ ಮೀಸಲಾತಿ ಪ್ರಮಾಣ ಪತ್ರದ ಪರಿಕಲ್ಪನೆ ಇವರಿಗಿಲ್ಲ. ಜಾಗತೀಕರಣ ಮತ್ತು ಉದಾರೀಕರಣದಿಂದ ಈ ಸಮುದಾಯದ ಆರ್ಥಿಕ ಮತ್ತು ಶೈಕ್ಷಣಿಕ ಸ್ಥಿತಿ ತೀರಾ ಹಿಂದುಳಿದೆ. ಈ ಸವಾಲುಗಳಿಗೆ ಸಿಂಧೋಳ್ಳು ಸಮುದಾಯ ಹೇಗೆ ಪ್ರತಿಕ್ರಿಯಿಸಿದೆ. ಈ ದಿಸೆಯಲ್ಲಿ ಸರ್ಕಾರ ಎಷ್ಟರಮಟ್ಟಿಗೆ ಸಹಕಾರಿಯಾಗಿದೆ ಎಂಬುದನ್ನು ಇಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

ಸಿಂಧೋಳ್ಳುರು "ಸಿಂಧೋಳ್ಳು ಸಮಾಜ ಕಲ್ಯಾಣ ಸಂಘ" ರಾಜ್ಯಮಟ್ಟದಲ್ಲಿ ಸಂಘಟನೆ ಮಾಡಿಕೊಂಡು ತಮ್ಮ ಸಮಸ್ಯೆಗಳ ಪರಿಹಾರಕ್ಕಾಗಿ ಪ್ರಯತ್ನ ಮಾಡುತ್ತಿದ್ದಾರೆ. ಇತ್ತೀಚಿನ ದಿನಗಳಲ್ಲಿ ಸಿಂಧೋಳ್ಳುರ ಸಾಮಾಜ, ಅರ್ಥ, ಧರ್ಮ ಮತ್ತು ಸಂಸ್ಕೃತಿ ಇತ್ಯಾದಿ ಅಂಶಗಳಲ್ಲಿ ಹೇಗೆ ಬದಲಾವಣೆಗೊಳ್ಳುತ್ತಿದೆಂಬುದನ್ನು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ.

ಕೊನೆಯ ಅಧ್ಯಾಯವು ಮಹಾಪ್ರಬಂಧದ "ಸಮಾರೋಪ" ಎಂಬ ಶೀರ್ಷಿಕೆಯಿಂದ ಕೂಡಿದೆ. ಇದರಲ್ಲಿ ಎಲ್ಲಾ ಅಧ್ಯಾಯಗಳ ಸಾರಾಂಶ ಹಾಗೂ ಅವುಗಳಲ್ಲಿಯ ಸಂಶೋಧಿತ ವಿಷಯಗಳನ್ನು ಕೋಷ್ಟಗಳ ಮುಖಾಂತರ ವಿವರಿಸಲಾದ ವಿಷಯಗಳನ್ನು ಒಳಗೊಂಡಿದೆ. ಈ ಅಧ್ಯಾಯದಲ್ಲಿ ಅಧ್ಯಯನದ ಫಲಿತಗಳು, ಸಲಹೆಗಳು, ಮುಂದಿನ ಅಧ್ಯಯನದ ಸಾಧ್ಯತೆಗಳ ಮಾಹಿತಿಗಳು ಒಳಗೊಂಡಿವೆ.

ಅನುಬಂಧದಲ್ಲಿ ಕೋಷ್ಟಕಗಳ (ಜನಸಂಖ್ಯಾ ಮಾಹಿತಿ, ವೃತಿ, ವೈವಾಹಿಕ, ಶಿಕ್ಷಣ, ಅಂಕಿ-ಸಂಖ್ಯೆಗಳು) ಪಟ್ಟಿ ಕೊಡಲಾಗಿದೆ. ಗ್ರಂಥಋಣ, ಸಿಂಧೋಳ್ಳುರು ಬಳಸುವ ಪದಕೋಶ ನೀಡಲಾಗಿದೆ. ಸಂಘಟನೆಗಳ ಚಿತ್ರಣ ಮತ್ತು ಹಾಡುಗಳು ಒಳಗೊಂಡಿವೆ.

### ಅಧ್ಯಯನದ ಫಲಿತಗಳು

ಪ್ರಸ್ತುತ ಅಧ್ಯಯನದಿಂದ ಕಂಡುಕೊಂಡ ಫಲಿತಗಳನ್ನು ಹೀಗೆ ಪಟ್ಟಿಮಾಡಲಾಗಿದೆ.

೧. ಸಿಂಧೋಳ್ಳುರಲ್ಲಿ ಭಿಕ್ಷೆಯು ಹೊಟ್ಟೆ ಹೊರೆಯಬಲ್ಲದು ಎಂಬ ಮನೋಭಾವನೆ ಮುಂದುವರೆದಿದೆ.

೨. ಧಾರ್ಮಿಕ ಭಿಕ್ಷಾಟನೆಯ ಸಮುದಾಯವಾದ ಸಿಂಧೋಳ್ಳುರನ್ನು ವೃತ್ತಿಗಳ ಆಧಾರದ ಮೇಲೆ ದುರುಗಮ್ಮನ ಆಡಿಸುವರು, ಮರುಗಮ್ಮನ ಆಡಿಸುವರು, ಕೂಗಮ್ಮನ ಆಡಿಸುವರು, ದುರುಗಮುರುಗಿ ಯವರು, ಬುರ್ರಬುರ್ರಚ್ಚಾ, ಬುರ್ರಬುರ್ರ ಪೋಚಮ್ಮ, ಸುಂಕ್ಲಮ್ಮನ ಆಡಸುವರು, ಉರಿಮಾರಿಯವರು ಮತ್ತು ಪೋತರಾಜರು ಎಂಬಿತ್ಯಾದಿ ಹೆಸರುಗಳಿಂದ ಕರೆಯಲಾಗಿದೆ.

೩. ಕುಲದೈವಗಳಾದ, ಮರಗಮ್ಮ, ದುರುಗಮ್ಮ, ಕೂಗಮ್ಮ, ಸುಂಕಲಮ್ಮ ಮತ್ತು ಈರನಾಗಮ್ಮ

ಇತ್ಯಾದಿ ದೈವಗಳ ಆರಾಧನೆಯ ಜೊತೆಯಲ್ಲಿ ಧರ್ಮಸ್ಥಳ ಮಂಜುನಾಥಸ್ವಾಮಿ, ಈಶ್ವರ, ಲಕ್ಷ್ಮೀ, ಸರಸ್ವತಿ ಮತ್ತು ಆಂಜನೇಯ ದೇವರುಗಳನ್ನು ಆರಾಧಿಸುವುದು ಕಂಡುಬರುತ್ತದೆ.

೪. ಭಿಕ್ಷೆ ಬೇಡುವುದಕ್ಕೆ ವಲಸೆ ಹೋಗುವ ಪ್ರವೃತ್ತಿ ಕಂಡುಬರುವುದು ಸಾಮಾನ್ಯ ವಿಷಯವಾಗಿದೆ. ಇವರು ಬಾಂಬೆ, ಸೊಲ್ಲಾಪುರ, ಪುಣೆ, ಬೆಂಗಳೂರು, ಹೈದ್ರಾಬಾದ್ ಮತ್ತು ಆಂಧ್ರ ಪ್ರದೇಶದ ರಾಯಲಸೀಮೆಗೆ ಅತಿಹೆಚ್ಚು ಹೋಗುವುದುಂಟು. ಉಳಿದವರು ಭಿಕ್ಷೆಗೆ ಹೋಗದೆ, ಇತರ ವೃತ್ತಿಗಳಲ್ಲಿ ತೊಡಗಿರುವುದು ಕಾಣಬರುತ್ತದೆ.

೫. ಕರ್ನಾಟಕದಲ್ಲಿ ವಾಸಿಸುವ ಸಿಂಧೋಳ್ಳರು ಸಾಮಾನ್ಯವಾಗಿ ಊರಿನ ಕೊನೆಯ ಭಾಗ, ಶಾಲೆ ಮೈದಾನ, ಸ್ಮಶಾನ ಸ್ಥಳದಲ್ಲಿ, ಹಳ್ಳಕೊಳ್ಳ ಮತ್ತು ಕಾಡಿನ ಕೊನೆಯ ಭಾಗದಲ್ಲಿ ಗುಡಾರ ಮತ್ತು ಗುಡಿಸಲು ಗಳನ್ನು ನಿರ್ಮಿಸಿಕೊಂಡು ಜೀವಿಸುತ್ತಿದ್ದಾರೆ.

೬. ಸಿಂಧೊಳ್ಳು ಸಮುದಾಯದ ಸಾಮಾಜಿಕ ಸ್ಥಾನಮಾನಗಳು ದಲಿತರಂತಿವೆ.

೭. ಕುಲದೈವಗಳಲ್ಲಿ ಅತಿಯಾದ ನಂಬಿಕೆ ಮತ್ತು ದೈವಗಳನ್ನು ತಮ್ಮ ಜೀವನದ ಅವಿಭಾಜ್ಯ ಅಂಗವೆಂದು ಪರಿಗಣಿಸಿದ್ದಾರೆ.

೮. ಸಿಂಧೋಳ್ಳು ಸಮುದಾಯದ ಪುರುಷ ಮತ್ತು ಸ್ತ್ರೀಯರು ಧರಿಸುತ್ತಿದ್ದ ಪಾರಂಪರಿಕ ಉಡುಗೆ ತೊಡುಗೆಗಳು ಕ್ರಮೇಣ ಕಡಿಮೆಯಾಗುತ್ತಿದೆ.

೯. ಸಮುದಾಯದಲ್ಲಿ ಏನಾದರು ಸಮಸ್ಯೆಗಳು ಎದುರಾದಾಗ ಅವುಗಳನ್ನು ಬಗೆಹರಿಸಿಕೊಳ್ಳಲು ಮುಖಂಡನ ನೇತೃತ್ವದಲ್ಲಿ ನ್ಯಾಯ ಪಂಚಾಯಿತಿ ಮಾಡಲಾಗುವುದು. ಹೀಗೆ ನ್ಯಾಯ ಪಂಚಾಯ್ತಿಯನ್ನು ಇತರ ಸಮುದಾಯಗಳ ಹಾಗೆ ಗ್ರಾಮದಲ್ಲಿ ಮಾಡದೆ, ಸ್ಮಶಾನದಲ್ಲಿ ನಡೆಸಲಾಗುವುದು. ಇಲ್ಲಿ ಕೊಡುವ ತೀರ್ಪೇ ಸುಪ್ರೀಮ್‌ಕೋರ್ಟ್ ಕೊಡುವ ತೀರ್ಪಿನಂತೆ ಅಂತಿಮ ತೀರ್ಪು ಆಗಿರುತ್ತದೆ.

೧೦. ಬೇಟೆಯ ಸಂದರ್ಭದಲ್ಲಿ ದೊರೆಯುವ ಪ್ರಾಣಿ ಪಕ್ಷಿಗಳಿಗೆ ಕೆಲವೊಮ್ಮೆ ಪೂಜೆಮಾಡಲಾಗುವುದು. ಹೀಗೆ ಪೂಜೆ ಮಾಡುವುದರಿಂದ ಬೇಟೆಯಾಡುವುದರ ಬಗೆಗೆ ಸಮುದಾಯಚಲ್ಲಿ ಜಾಗೃತಿ ಮೂಡುತ್ತದೆ ಮತ್ತು ಈ ವೃತ್ತಿ ತಮ್ಮ ಸಮುದಾಯಕ್ಕೆ ವಂಶಪಾರಂಪರ್ಯವಾಗಿ ಬಂದಿದ್ದು. ಅದನ್ನು ಮುಂದುವರೆಸಿಕೊಂಡು ಹೋಗಬೇಕೆಂಬುದು ಈ ಆಚರಣೆ ಹಿಂದಿರುವ ಆಶಯವಾಗಿದೆ.

೧೧. ಸಿಂಧೋಳ್ಳುರ ಬೆಡಗುಗಳು ತೆಲುಗು ಭಾಷೆಯಾಗಿರುತ್ತದೆ.

೧೨. ಕರ್ನಾಟಕದಲ್ಲಿ ಸಿಂಧೋಳ್ಳುರ ವಸತಿಗಳಾದ ೪೯ ಗುಡಾರ, ೨೨ ಗುಡಿಸಲುಗಳು, ೯೫ ಟಿನ್, ೩೩ ದಾಬಾಮಾಳಿಗೆ, ೧೮೯ ಹಂಚಿನ ಮತ್ತು ೧೦೬ ಜನತಾಆಶ್ರಯ ಮನೆಗಳಿರುವುದು ಕಂಡುಬರುತ್ತದೆ.

೧೩. ಬಳ್ಳಾರಿ ಜಿಲ್ಲೆಯಲ್ಲಿ ಮೀನುಗಾರಿಕೆ ಇಲಾಖೆಯ ವಸತಿ ಯೋಜನೆಯಡಿಯಲ್ಲಿ ನಿವೇಶನ ಮತ್ತು ಮನೆಗಳನ್ನು ನಿರ್ಮಿಸಿ ಕೊಡಲಾಗಿವೆ.

೧೪. ಸಿಂಧೋಳ್ಳು ಸಮುದಾಯದಲ್ಲಿ ಗಿಡಮೂಲಿಕೆ ವೈದ್ಯ ಪದ್ಧತಿಯು ವಂಶಪಾರಂಪರಿಕವಾಗಿ ಬೆಳೆದು ಬಂದಿರುವುದಾಗಿದೆ.

೧೫. ಪಾರಂಪರಿಕ ವೈದ್ಯಪದ್ಧತಿ ಜೀವಂತವಿದ್ದಾಗ್ಯೂ ಇತ್ತೀಚಿಗೆ ಕೆಲವರು ಸಾರ್ವಜನಿಕ ಅಥವಾ ಖಾಸಗಿ ಆಸ್ಪತ್ರೆಗಳಲ್ಲಿ ಚಿಕಿತ್ಸೆ ಪಡೆಯುವುದರ ಕಡೆಗೆ ಒಲವು ತೋರಿಸುತ್ತಿದ್ದಾರೆ.

೧೬. ಸಿಂಧೋಳ್ಳುರು ಮೀನುಗಾರಿಕೆ, ಕೃಷಿ ಕೂಲಿಗಳಾದ ಸಸಿ ನಾಟಿ, ಕಳೆ ತೆಗೆಯುವುದು, ಭತ್ತ ಕೊಯ್ಯುವುದು, ಇತರೆ ಕೆಲಸಗಳಾದ ಮನೆ ಕಟ್ಟುವ ಕೆಲಸ, ಬಕೇಟ್ ರಿಪೇರಿ ಮುಂತಾದ ವೃತ್ತಿಗಳನ್ನಾಗಿ ಮಾಡುವುದು ಕಂಡುಬರುತ್ತದೆ.

೧೭. ಸಣ್ಣ ವ್ಯಾಪಾರಗಳಾದ ಅಲಂಕಾರಿಕ ವಸ್ತುಗಳು, ಪ್ಲಾಸ್ಟಿಕ್ ಸಾಮಾನು ಮಾರಾಟ ಮಾಡುವ ೧೧೪ ಸ್ತ್ರೀಯರು ಮತ್ತು ೧೪೬ ಪುರುಷರು ಈ ಉದ್ಯೋಗದಲ್ಲಿ ನಿರತರಾಗಿದ್ದಾರೆ.

೧೮. ಕರ್ನಾಟಕ ರಾಜ್ಯದಲ್ಲಿ ವಾಸಿಸುತ್ತಿರುವ ಸಿಂಧೋಳ್ಳುರು ಆರ್ಥಿಕವಾಗಿ ಅತ್ಯಂತ ದುರ್ಬಲರಾಗಿದ್ದು, ಬಡತನ ರೇಖೆಯ ಕೆಳಗಿನವರಾಗಿದ್ದಾರೆ. ಭಿಕ್ಷಾಟನೆ ಜೊತೆಯಲ್ಲಿ ವ್ಯಾಪಾರ, ಕೂಲಿ ಕೆಲಸಗಳನ್ನು ಮಾಡಿಕೊಂಡು ಜೀವನ ನಿರ್ವಹಿಸುತ್ತಿದ್ದಾರೆ.

೧೯. ಶುಭ ಮತ್ತು ಅಶುಭ ಕಾರ್ಯಕ್ರಮಗಳಾದ ನಾಮಕರಣ, ಮದುವೆ, ಹಬ್ಬ, ಜಾತ್ರೆ ಹಾಗೂ ಋತುಮತಿ, ನ್ಯಾಯ ಪಂಚಾಯ್ತಿ, ಶವಸಂಸ್ಕಾರ ಇತ್ಯಾದಿ ಕಾರ್ಯಗಳಲ್ಲಿ ಸಮುದಾಯ ಮುಖ್ಯಸ್ಥನಾದ ಪೂಜಾರಿ ಮುಖ್ಯ ಪಾತ್ರವಹಿಸುತ್ತಾನೆ.

೨೦. ಸಿಂಧೋಳ್ಳು ಸಮುದಾಯದಲ್ಲಿ ಮಗುವಿಗೆ ನಾಮಕರಣ ಮಾಡುವ ಸಂದರ್ಭದಲ್ಲಿ ಬೆಡಗು ಮತ್ತು ಕುಲದೈವಗಳ ಹೆಸರನ್ನು ಇಡುವುದಾಗಿದೆ.

೨೧. ಯುಗಾದಿ, ದಸಾರ ಹಬ್ಬಗಳಲ್ಲಿ ಬಲಿ ಆಚರಣೆ ಚಾಲ್ತಿಯಲ್ಲಿರುವುದಾಗಿದೆ.

೨೨. ಸಿಂಧೋಳ್ಳುರು ವ್ಯವಹಾರಿಕವಾಗಿ ಕನ್ನಡ ಭಾಷೆ ಬಳಸಿದರೂ, ಈ ಸಮುದಾಯದ ಮಾತೃಭಾಷೆ ತೆಲುಗಾಗಿರುವುದು.

೨೩. ಸಿಂಧೋಳ್ಳುರಲ್ಲಿ ಕುಲದೈವಗಳ ಮೇಲೆ ಸಾಹಿತ್ಯ ಮತ್ತು ಪೌರಾಣಿಕ ಹಿನ್ನೆಲೆ ಹೆಚ್ಚಾಗಿದೆ.

೨೪. ಕಲೆ ಸಂಸ್ಕೃತಿ ಬಗ್ಗೆ ಅಪಾರವಾದ ಕಾಳಜಿ ಇದೆ. ಕೌದಿ ಹೊಲೆಯುವುದು, ಮುಖವಾಡ, ಬುರ್ರಬುರ್ರವಾದ್ಯಗಳನ್ನು ಈಗಲೂ ಸ್ವತಃ ತಾವೇ ತಯಾರುಮಾಡುತ್ತಾರೆ.

೨೫. ಇತ್ತೀಚಿನ ಗ್ರಾಮ ಪಂಚಾಯಿತಿ ಚುನಾವಣೆಗಳಲ್ಲಿ ಸ್ಪರ್ಧಿಸುವುದರ ಮುಖೇನ ರಾಜಕೀಯ ಕ್ಷೇತ್ರಕ್ಕೆ ಅಥವಾ ಜೀವನಕ್ಕೆ ಪಾದಾರ್ಪಣೆ ಮಾಡಿದ್ದಾರೆ.

೨೬. ಕರ್ನಾಟಕದಲ್ಲಿ ವಾಸಿಸುವ ಸಿಂಧೋಳ್ಳುರ ಮೂಲಭೂತ ಸಮಸ್ಯೆಗಳಾದ ವಸತಿ, ಪಡಿತರ ಚೀಟಿ, ಆರೋಗ್ಯ, ಶಿಕ್ಷಣ, ಆರ್ಥಿಕ, ರಾಜಕೀಯ, ನಿರುದ್ಯೋಗ, ಇತ್ಯಾದಿ ಸಮಸ್ಯೆಗಳಿರುವುದು ಕಂಡುಬರುತ್ತದೆ.

೨೭. ಗುಡಾರ ಸಂಸ್ಕೃತಿಯನ್ನು ಉಳಿಸಿಕೊಂಡಿರುವ ಸಿಂಧೋಳ್ಳುರು ಹಂತ ಹಂತವಾಗಿ ಬದಲಾಗುತ್ತಿದ್ದಾರೆ. ಅವರ ಜೀವನದಲ್ಲಿ ಆಧುನಿಕತೆಯ ಗಾಳಿ ಬೀಸಿ, ನೂರಾರು ವರ್ಷಗಳಿಂದ ಬೇರು ಬಿಟ್ಟುಕೊಂಡಿದ್ದ ಇವರ ಸಾಂಸ್ಕೃತಿಕ ವಿಚಾರಗಳು ಸಡಿಲಗೊಳ್ಳುತ್ತಿವೆ. ಲೋಕರೂಢಿಗಳು, ಸಂಪ್ರದಾಯಗಳು ಮತ್ತು ನೈತಿಕ ನಿಯಮಗಳಲ್ಲಿ ಅನೇಕ ಬದಲಾವಣೆಗಳಾಗಿವೆ.

**ಸಲಹೆಗಳು**

ಕರ್ನಾಟಕ ಸಿಂಧೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ ಹಿನ್ನೆಲೆಯಲ್ಲಿ ಈ ಸಮುದಾಯ ಅನೇಕ ಸಮಸ್ಯೆಗಳನ್ನು ಎದುರಿಸುತ್ತಿರುವುದನ್ನು ಗುರುತಿಸಲಾಗಿದೆ. ಸಮಸ್ಯೆಗಳ ಪರಿಹಾರಕ್ಕಾಗಿ ಈ ಕೆಳಗಿನ ಸೂಕ್ತ ಸಲಹೆಗಳನ್ನು ನೀಡಲಾಗಿದೆ. ಸಮಾಜ, ಸರ್ಕಾರ, ಸಂಘ ಸಂಸ್ಥೆಗಳು ಈ ಕುರಿತು ಗಂಭೀರವಾಗಿ ಚಿಂತಿಸಿ ಸಹಾಯ ಹಸ್ತ ನೀಡಬೇಕಾಗಿದೆ.

- ಕರ್ನಾಟಕದಲ್ಲಿ ಸಿಂಧೋಳ್ಳು ಸಮುದಾಯದವರು ಬಹುತೇಕವಾಗಿ ಗುಡಾರ, ಗುಡಿಸಲುಗಳಲ್ಲಿ ವಾಸಿಸುತ್ತಿದ್ದಾರೆ. ಅವರಿಗೆ ಸರ್ಕಾರದ ವತಿಯಿಂದ ಸಂಪೂರ್ಣವಾಗಿ ವಸತಿ ಸೌಕರ್ಯಗಳನ್ನು ಕಲ್ಪಿಸುವುದು.
- ಈ ಸಮುದಾಯ ವಾಸಿಸುವ ಕಡೆಗಳಲ್ಲಿ ಪ್ರಾಥಮಿಕ ಶಾಲೆಗಳು ಇರುವುದಿಲ್ಲ. ಆದಕಾರಣ ಇವರ ವಾಸಸ್ಥಳಗಳಲ್ಲಿ ವಸತಿ ಶಾಲೆಗಳನ್ನು ಸ್ಥಾಪಿಸುವುದು.
- ಸಿಂಧೋಳ್ಳು ಸಮುದಾಯ ವಾಸಿಸುವ ಕಾಲೋನಿಗಳಲ್ಲಿ ಭಾಗ್ಯಜ್ಯೋತಿ ವಿದ್ಯುತ್ ಸೌಲಭ್ಯ ಇರುವುದಿಲ್ಲ. ಕಾರಣ ಪ್ರತಿಯೊಂದು ಗುಡಿಸಲು ಮನೆಗಳಿಗೂ ವಿದ್ಯುತ್ ಸೌಲಭ್ಯ ಒದಗಿಸುವುದು.

  ಹಾಗೂ ಇವರು ವಾಸಿಸುವ ಸ್ಥಳಗಳು ಕತ್ತಲೆ ಪ್ರದೇಶಗಳಾಗಿರುವುದರಿಂದ ಅಲ್ಲಿ ಬೀದಿ ದೀಪಗಳ ವ್ಯವಸ್ಥೆ ಮಾಡುವುದು.
- ಅಂತ್ಯೋದಯ ಪಡಿತರ ಚೀಟಿ ಪ್ರತಿಯೊಂದು ಕುಟುಂಬಗಳಿಗೂ ದೊರಕಿಸುವುದು.
- ಮತದಾನಕ್ಕಾಗಿ ಸಿಂಧೋಳ್ಳುರಿಗೆ ಮತದಾನದ ಗುರುತಿನ ಚೀಟಿ ನೀಡುವುದು.
- ಇವರು ವಾಸಿಸುವ ಪ್ರದೇಶಗಳಲ್ಲಿ ಸರ್ಕಾರ ತುರ್ತಾಗಿ ನಿವೇಶನಗಳನ್ನು ನೀಡಿ ಆಶ್ರಯ ಯೋಜನೆಗಳಲ್ಲಿ ಮನೆಗಳನ್ನು ನಿರ್ಮಿಸಿ ಕೊಡುವುದು.
- ಇತ್ತೀಚಿನ ದಿನಗಳಲ್ಲಿ ಸಿಂಧೋಳ್ಳುರು ಕೃಷಿಯೇತರ ಕೂಲಿಗಾಗಿ ಕೆಲಸ ಮಾಡಲಿಕ್ಕೆ ಹೋಗುತ್ತಿದ್ದಾರೆ. ಆದಕಾರಣ ಈ ಸಮುದಾಯಕ್ಕೆ ಸರ್ಕಾರವು ವ್ಯವಸಾಯಕ್ಕಾಗಿ ಭೂಮಿಯನ್ನು ಒದಗಿಸುವುದು.
- ಇತ್ತಿಚಿಗೆ ಇವರು ಪ್ಲಾಸ್ಟಿಕ್ ಕೊಡಪಾನ ಮೊದಲಾದ ವ್ಯಾಪಾರ ಮಾಡುತ್ತಿದ್ದು ಇಂತಹ ಕಸುಬುಗಳಿಗೆ ಬಂಡವಾಳದ ಅವಶ್ಯಕತೆ ಇದೆ. ಅದಕ್ಕಾಗಿ ಸರಕಾರ ಸಾಲ ಸೌಲಭ್ಯವನ್ನು ಕಲ್ಪಿಸುವುದು.
- ಪುರುಷರು ಮತ್ತು ಸ್ತ್ರೀಯರು ಏಕ ರೀತಿಯಲ್ಲಿ ಕೂಲಿಕೆಲಸ ಮಾಡುವುದುರಿಂದ ಅಲ್ಲಿನ ಮಾಲೀಕರು ಸಮ ಪ್ರಮಾಣದಲ್ಲಿ ಕೂಲಿ ಮತ್ತು ಊಟದ ವ್ಯವಸ್ಥೆಯನ್ನು ಕಲ್ಪಿಸಿಕೊಡುವುದು.

- ಇವರು ವಾಸಿಸುವಂತಹ ಕಡೆಗಳಲ್ಲಿ ಅಂಗನವಾಡಿ ಕೇಂದ್ರಗಳು ಇಲ್ಲದೆ ಇರುವುದರಿಂದ ಸರ್ಕಾರವು ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಅಂಗನವಾಡಿ ಕೇಂದ್ರಗಳನ್ನು ಸ್ಥಾಪನೆ ಮಾಡಲು ಮುಂದಾಗುವುದು.
- ಸಿಂಧೋಳ್ಳು ಸಮುದಾಯದವರನ್ನು ಜನಪದರು ದುರುಗಮುರುಗಿ, ಬುರ್ರಬುರ್ರಚ್ಚಾ, ಕೂಗಮ್ಮನ ಆಡಿಸುವರು, ಸುಂಕ್ಲಮ್ಮನ ಆಡಿಸುವರು, ಪೋತರಾಜ, ಊರಮಾರಿಯರು, ಬುರ್ರ ಮಾರಿಯರು, ಬೆಂಕಿ ಮಾರಿಯರು ಇತ್ಯಾದಿ ಹೆಸರುಗಳಿಂದ ಗುರುತಿಸುವರು. ಕರ್ನಾಟಕ ಸರಕಾರ ಇನ್ನು ಮುಂದೆ ಈ ಪದಗಳನ್ನು ಸಿಂಧೋಳ್ಳು ಸಮುದಾಯದ ಪರ್ಯಾಯ ಪದಗಳೆಂದು ಪರಿಗಣಿಸಿ ಈ ಹೆಸರಿನಲ್ಲಿ ಕರೆಯುವವರಿಗೆ ಸಿಂಧೋಳ್ಳು ಪರಿಶಿಷ್ಟ ಜಾತಿಯ ಪ್ರಮಾಣ ಪತ್ರ ನೀಡಿ ಸಂವಿಧಾನಬದ್ಧ ಸೌಲಭ್ಯಗಳನ್ನು ನೀಡಲು ಮುಂದಾಗುವುದು.
- ಶಿಕ್ಷಣದಲ್ಲಿ ಪ್ರಗತಿಸಾಧಿಸಿದ ಸಿಂಧೋಳ್ಳು ಮಕ್ಕಳಿಗೆ ಕಾರ್ಖಾನೆ ಮತ್ತು ಸರ್ಕಾರಿ ಕಛೇರಿಗಳಲ್ಲಿ ಉದ್ಯೋಗ ಕಲ್ಪಿಸುವುದು.
- ಸ್ವಯಂ ಸೇವಾ ಸಂಸ್ಥೆಗಳು ಸರಕಾರ ಮತ್ತು ಸಮುದಾಯದ ನಡುವೆ ಕೊಂಡಿಯಾಗಿ ಸರಕಾರದ ಯೋಜನೆಗಳನ್ನು ಕಾರ್ಯಗತಗೊಳಿಸಲು ಮುಂದಾಗುವುದು
- ರಾಜ್ಯದ ಪದವಿ ವಿದ್ಯಾರ್ಥಿಗಳು ತಮ್ಮ ಶೈಕ್ಷಣಿಕ ಪ್ರವಾಸಕ್ಕಾಗಿ ಐತಿಹಾಸಿಕ ಸ್ಥಳಗಳಿಗೆ ಹೋಗುವುದುಂಟು. ಅದರ ಬದಲು ಕರ್ನಾಟಕದಲ್ಲಿ ಸಿಂಧೋಳ್ಳರು ನಾನಾ ಕಡೆಗಳಲ್ಲಿ ವಾಸಿಸುತ್ತಿದ್ದಾರೆ. ಅವರು ಇರುವ ಕಡೆಗಳಲ್ಲಿ ಪ್ರವಾಸ ಹಮ್ಮಿಕೊಂಡರೆ, ಸಿಂಧೋಳ್ಳರ ಪರಿಚಯವಾಗುತ್ತದೆ.
- ಸಿಂಧೋಳ್ಳರು ವಾಸಿಸುವ ಕಡೆಗಳಲ್ಲಿ ಅಲ್ಲಿನ ಶಾಸಕರು ಮತ್ತು ಲೋಕಸಭೆ ಸದಸ್ಯರು ತಿಂಗಳಿಗೊಮ್ಮೆ ಭೇಟಿನೀಡಿ ಅವರ ಕುಂದುಕೊರತೆಗಳ ಬಗ್ಗೆ ವಿಚಾರಣೆ ಮಾಡಲು ಮುಂದಾಗುವುದು.
- ಸಿಂಧೋಳ್ಳರ ಕಾಲೋನಿಯಲ್ಲಿ ಕುಡಿಯುವ ನೀರಿನ ಸೌಲಭ್ಯ ಒದಗಿಸುವುದು.
- ಸಿಂಧೋಳ್ಳರ ಕಾಲೋನಿಯಲ್ಲಿ ಸಮುದಾಯ ಭವನ ನಿರ್ಮಾಣ ಮಾಡಿ ಟಿ ವಿ, ದಿನಪತ್ರಿಕೆ ಸೌಲಭ್ಯವನ್ನು ಕಲ್ಪಿಸಿ ಗುಡಿ ಕೈಗಾರಿಕೆಗಳ ತರಬೇತಿಯನ್ನು ನೀಡುವುದು.
- ಮಹಿಳೆಯರನ್ನು ಸ್ವ-ಸಹಾಯ ಗುಂಪಿನಲ್ಲಿ ಸೇರುವಂತೆ ಪ್ರೇರೆಪಣೆ ಮಾಡಿ, ಅವರಿಗೆ ಅನೇಕ ಬಗೆಯ ಪುಸ್ತಕಗಳನ್ನು ಪರಿಚಯಿಸಿ ಮಾಹಿತಿ ಒದಗಿಸುವುದು.
- ವ್ಯಾಪಾರದಲ್ಲಿ ನಿರತ ಪುರುಷ ಮತ್ತು ಮಹಿಳೆಯರಿಗೆ ಐ.ಆರ್.ಡಿ.ಪಿ. ಯೋಜನೆಯ ವಿಶೇಷ ಸಾಲ ಸೌಲಭ್ಯಗಳನ್ನು ಬ್ಯಾಂಕ್‌ಗಳಿಂದ ದೊರೆಯುವಂತೆ ಮಾಡಿ, ಉಳಿತಾಯ ಮನೋಭಾವನೆ ಬೆಳೆಸುವುದು.
- ಸಿಂಧೋಳ್ಳರ ನಿರ್ಲಕ್ಷಿತ ವೃದ್ಧರಿಗೆ, ಅಂಗವಿಕಲರಿಗೆ ಮತ್ತು ವಿಧವೆಯರಿಗೆ ಮಾಸಿಕ ವೇತನ ಕಲ್ಪಿಸುವುದು.

- ಸಿಂಧೋಳ್ಳರು ಕೃಷಿಯ ಕಡೆಗೆ ಗಮನ ಹರಿಸುವುದರಿಂದ ಅವರಿಗೆ ಕೃಷಿಗೆ ಸಹಾಯಕ ವಸ್ತುಗಳನ್ನು ಮತ್ತು ಪಶುಸಂಗೋಪನೆಗೆ ಪ್ರೋತ್ಸಾಹ ನೀಡುವುದು.
- ಸ್ತ್ರೀ ಶಿಕ್ಷಣಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡುವುದು.

**ಮುಂದಿನ ಅಧ್ಯಯನದ ಸಾಧ್ಯತೆಗಳು**

ಸಿಂಧೋಳ್ಳರ ಸಂಸ್ಕೃತಿ ಮರೆಮಾಚುವ ಸಂದರ್ಭದಲ್ಲಿ ರಾಜ್ಯದ ವಿಶ್ವವಿದ್ಯಾಲಯದ ಸಂಶೋಧಕರು, ಅಧ್ಯಯನಕಾರರು, ಸಿಂಧೋಳ್ಳು ಸಮುದಾಯದ ಬಗ್ಗೆ, ಸಾಮಾಜಿಕ, ರಾಜಕೀಯ, ಆರ್ಥಿಕ, ಮಹಿಳಾ ಮತ್ತು ಮಾನವಶಾಸ್ತ್ರೀಯ ದೃಷ್ಟಿಕೋನಗಳಲ್ಲಿ ಅಧ್ಯಯನ ಮಾಡಬಹುದಾಗಿದೆ.

ಈ ರೀತಿಯಲ್ಲಿ ಕರ್ನಾಟಕದ ಉದ್ದಗಲಕ್ಕೂ ಹರಡಿಕೊಂಡಿರುವ ಸಿಂಧೋಳ್ಳು ಸಮುದಾಯ ಕುರಿತು ಅಧ್ಯಯನ ಮಾಡುವವರಿಗೆ ಪ್ರಸ್ತುತ ಈ ಮಹಾಪ್ರಬಂಧ ಮಾರ್ಗಸೂಚಿಯಾಗಬಹುದು. ಒಟ್ಟಿನಲ್ಲಿ ಕರ್ನಾಟಕ ಸಿಂಧೋಳ್ಳು ಸಮುದಾಯದ ಸಮಾಜಶಾಸ್ತ್ರೀಯ ಅಧ್ಯಯನ ಎಂಬೀ ವಿಷಯದ ನಿಬಂಧ ಈ ಸಮುದಾಯದ ವಿವಿಧ ಅಂಶಗಳ ಕುರಿತು ಮಾಹಿತಿ ದೊರಕಿಸಿಕೊಡಬಲ್ಲ ಒಂದು ಪ್ರಯತ್ನವಾಗಿದೆ. ಆದಾಗ್ಯೂ ನನ್ನ ಗಮನಕ್ಕೆ ಬರದೆ ಇರುವ ಸಂಶೋಧನಾಂಶಗಳು ಉಳಿದಿರುವ ಸಾಧ್ಯತೆಗಳಿವೆ. ಆಸಕ್ತಿ ಇರುವ ಅಧ್ಯಯನಕಾರರು ಆ ಬಗೆಗೆ ಹೆಚ್ಚಿನ ಅಧ್ಯಯನವನ್ನು ಮಾಡ ಬಹುದಾಗಿದೆ.

# ಅನುಬಂಧಗಳು

೧. ಹಾಡುಗಳು

೨. ಸಂಘಟನೆಗಳ ಚಿತ್ರಣ

೩. ಸಮೀಕ್ಷೆ ಮಾಡಿದ ಕರ್ನಾಟಕದ ನಕ್ಷೆ

೪. ಅಂಕಿ ಅಂಶಗಳು

೫. ಪರಮಾರ್ಶನ ಗ್ರಂಥಗಳು

೬. ಪ್ರಮುಖ ಮಾಹಿತಿದಾರರು

೭. ಪದಕೋಶ

೮. ಪ್ರಶ್ನಾವಳಿ

೯. ಛಾಯಾಚಿತ್ರಗಳು



## ೧. ಹಾಡುಗಳು

### ಈರನಾಗಮ್ಮ

ಗಂಡು : ಕೊಂಡೆ ಮೆ..........

ಹೆಣ್ಣು : ಹಾಹಾಹಾಹಾ ದೇವಿ ಕೇಳಮ್ಮ

ಗಂಡು : ಸಿಕಮಲೆ ಈರನಾಗಮ್ಮ

ಹೆಣ್ಣು : ದೇವಿ ಕೇಳಮ್ಮ

ಗಂಡು : ಮಾಡರೇ ಎಲ್ಲಾಕತ್

ಹೆಣ್ಣು : ದೇವಿ ಕೆಳಮ್ಮ

ಗಂಡು : ದೇವರಿಗೆ ಧರ್ಮಮಾಡುಬೇಕಾಗಿತ್

ಹೆಣ್ಣು : ಕೊಡು ತಾಯಿ, ನನ್ನ ತಾಯಿ

ಗಂಡು : ದೇವರು ಪೂಜೆ ಮಾಡಬೇಕಾಗಿತ್

ಹೆಣ್ಣು : ದೇವರ ವರವ ಕೊಡಾವ್ವ

ಗಂಡು : ನಿನ್ನ ವರವನ್ನು ಮಂದಿಗೆಲ್ಲಾ ತೋರಿಸು

ಹೆಣ್ಣು : ತಾಯಿ ಕೊಡಮ್ಮ............

ಗಂಡು : ನಿನ್ನ ಮಂದಿಗೆಲ್ಲಾ ತೋರಿಸು

ಹೆಣ್ಣು : ತಾಯಿ ಕೊಡಮ್ಮ

ಗಂಡು : ಮಕ್ಕಳ ಕಷ್ಟ ಬೇಡಿಕೊಂಡರಾಯತ್

ಹೆಣ್ಣು : ದೇವರ ಪೂಜೆ ಮಾಡವ್ವ

ಗಂಡು : ಪೂಜೆ ಮಂಗಳ ನೀಡವ್ವ

ಹೆಣ್ಣು : ಪೂಜೆ ನೀಡಮ್ಮ.................

ಗಂಡು : ಹರಕೆ ಮಾಡಿರಾ ಊರುಗತ್

ಹೆಣ್ಣು : ದೇವರ ಪೂಜೆ ಮಾಡಾವ್ವ

ಗಂಡು : ನೂರು ದೇವರು ಒಂದು ದೇವರಲ್ಲ

ಹೆಣ್ಣು : ನಮ್ಮ ತಾಯಿ ದಡಾರದಮ್ಮ.......

ಗಂಡು : ನನ್ನ ಭಕ್ತಿ ನೋಡ್

ಹೆಣ್ಣು : ಕೊಡ್ಡಗುಡ್ಡದ ಮಾರಮ್ಮ

ಗಂಡು : ಹರಕೆ ಪೂಜೆಮಾಡವ್ವ

ಹೆಣ್ಣು : ನಿನ್ನ ಪೂಜೆ ಮಾಡಿರೇ

ಗಂಡು : ನಿನ್ನ ನೋಡಲಾರೆ ಕೈ, ಯಲಾತ್
ಹೆಣ್ಣು : ದೇವಿ ಕೇಳಮ್ಮ
ಗಂಡು : ಅವಳು ಕಣ್ಣಿಗೆ ತೋರಿಸಬೇಕಿತ್
ಹೆಣ್ಣು : ಭಕ್ತ ಧಾನ್ಯ ಕೊಟ್ಟರೆ ನೋಡವ್ವ ತಾಯಿ
ಗಂಡು : ನಿನ್ನ ಕನಸಿನಾಗ ಕುಂತು, ಮನಸ್ಸನಾಗ್ ಮಾತ್‌ನಾಡಿ ಬೇಕಿತ್
ಹೆಣ್ಣು : ದೇವಿ ಮಹಾಸತಿ
ಗಂಡು : ಈರನಾಗಮ್ಮ ಬಂದವಳು ಪ್ರಪಂಚಕ್ಕೆ
ಹೆಣ್ಣು : ಕೊಡಬೇಕು ತಾಯಿವ್ವ
ಗಂಡು : ಕೋಳಿಯಂತೆ ಕೂಗುಬೇಡ ತಾಯಿ
ಹೆಣ್ಣು : ದೇವಿ ಮಹಾದೇವಿ
ಗಂಡು : ಬೆಂಕಿಹ್ಯಾಂಗ್ ಹುರಿಯಬೇಡ ತಾಯಿ
ಹೆಣ್ಣು : ಬಡವರ ಸ್ಥಾನ ನೀಡವ್ವ
ಗಂಡು : ಮಕ್ಕಳ ಪೂಜೆ ಮಾಡಿ
ಹೆಣ್ಣು : ತಾಯಿಗೆ ಪೂಜೆ ನೀಡುತ್ತಾರೆ
ಗಂಡು : ಹರಕೆಯನ್ನು ಪಾರು ಮಾಡುವ್ವ
ಹೆಣ್ಣು : ದೇವಿ ಮಹಾದೇವಿ
ಗಂಡು : ನಿನ್ನ ಭಕ್ತರ ನೋಡುರೆಲ್ಲಾ
ಹೆಣ್ಣು : ನೀಡಿರೇ ನೋಡಮ್ಮ
ಗಂಡು : ಓಹೋ..... ಈ ಊರುಗೌಡ ಯಾರು ಈರನಾಗಮ್ಮ ಬಂದ ಇಳಿಸಿದಾಗ
ಭೇರಮನ್ ಬಸಣ್ಣ
ಹೆಣ್ಣು : ಹಾಹಾಹಾಹಾ
ಗಂಡು : ಭೇರಮನ್ ಲಿಂಗಪ್ಪ
ಹೆಣ್ಣು : ಹಾಹಾಹಾಹಾ
ಗಂಡು : ಈರಪ್ಪನ ಹೆಂಡತಿ ಯಾರು?
ಹೆಣ್ಣು : ಹಾಹಾಹಾಹಾ
ಗಂಡು : ಬಸಲಿಂಗಮ್ಮ, ಹೊಸಸೀರೆ ತಗೊಂಡು
ಹೆಣ್ಣು : ಹಾಹಾಹಾಹಾ
ಗಂಡು : ದಿನ ಗುಡಿಗೆ ಕೊಟ್ಟಾರೆ ನೋಡತಾಯಿ
ಹೆಣ್ಣು : ಮುದಕರು ನೋಡವ್ವ
ಗಂಡು : ಅವರಿಗೆ ಸುಖ ಕೊಡವ್ವಾ
ಹೆಣ್ಣು : ಕಾಪಾಡು ತಾಯಿ.....
ಗಂಡು : ಮಾ ತಾಯಿ ಈರನಾಗಮ್ಮ
ಹೆಣ್ಣು : ಹಾ ಹಾ ಹಾ ಬೇಕು ತಾಯಮ್ಮ

ಗಂಡು : ಗೌರಸಂದ್ರ ಮಾರವ್ವ

ಹೆಣ್ಣು : ಹಾ ಹಾ ಹಾ ಬೇಕು ತಾಯಮ್ಮ

ಗಂಡು : ಹೊಸಪೇಟೆ ಗಾಳೆಮ್ಮ

ಹೆಣ್ಣು : ಹಾಹಾಹಾ ಬೇಕು ತಾಯಮ್ಮ

ಗಂಡು : ಸುಂಕಲಮ್ಮ ದೇವಿತ್

ಹೆಣ್ಣು : ಸುಂಕಲಮ್ಮ ಮಕ್ಕಳಿಗೆ ಕಾಪಾಡಮ್ಮ ತಾಯಿ

ಗಂಡು : ನೋಡ್ ತಾಯತ್

ಹೆಣ್ಣು : ಬಡವರನ್ನು ಕೈ ಮಾಡು

ಗಂಡು : ಹೋದಲ್ಲಿ, ಬಂದಲ್ಲಿ

ಹೆಣ್ಣು : ಕಾಪಾಡಮ್ಮ ತಾಯಿ

ಗಂಡು : ನಿನ್ನ ಭಕ್ತರ ನಿಂತರೆ

ಹೆಣ್ಣು : ದೇವಿಗೆ ಪೂಜೆ ಮಾಡಬೇಕ್

ಗಂಡು : ನಿನ್ನ ಭಕ್ತಿ ಕೊಡೆ.....

ಹೆಣ್ಣು : ಮಾ ದೇವಿ ನೀಡಮ್ಮ

ಗಂಡು : ಈ ಗುಂಪಿಗೆ ಸಿಂಗಾರೆಪ್ಪ

ಹೆಣ್ಣು : ದೊಡ್ಡವನು ತಾಯಿಯ್ಯು

ಗಂಡು : ದೊಡ್ಡವನೇ ನೋಡೆ

ಹೆಣ್ಣು : ಹೌದು ತಾಯಿ

ಗಂಡು : ಇಲ್ಲಿ ಪಂಚಾಯಿತಿ ಆಗಲಿ

ಹೆಣ್ಣು : ಹೌದು ತಾಯಿ

ಗಂಡು : ಅವನು ಮುಂದೆ ದಾಟಬಾರದು

ಹೆಣ್ಣು : ಹೌದು ತಾಯಿ

ಗಂಡು : ಯಾರು ಮಾತುಕೇಳಿಲ್ಲ

ಹೆಣ್ಣು : ಹೌದು ತಾಯಿ

ಗಂಡು : ನಮ್ಮ ತಾತನಿಂದ

ಹೆಣ್ಣು : ಹೌದು ತಾಯಿ

ಗಂಡು : ನಮ್ಮ ಕಡೆ ಪಂಚಾಯ್ತಿ ಇಲ್ಲ

ಹೆಣ್ಣು : ಹೌದು ತಾಯಿ

ಗಂಡು : ಸರ್ಕಾರಿ ಪಂಚಾಯ್ತಿ ನಮ್ಮದು ಅಲ್ಲ

ಹೆಣ್ಣು : ಹೌದು ತಾಯಿ

ಗಂಡು : ಇದೇ ನಮ್ಮ ತಿರಮಾನ ಆಗಬೇಕೆ ನಮ್ಮದು

ಹೆಣ್ಣು : ಹೌದು ತಾಯಿ

ಗಂಡು : ಯಾವನಾಗಲಿ ಕೋರ್ಟಿಗೆ ಹೋದರೆ

ಹೆಣ್ಣು : ಹೌದು ತಾಯಿ

ಗಂಡು : ೨೫ ದಂಡ ಹಾಕ್ತೀವಿ

ಹೆಣ್ಣು : ಹೌದು ತಾಯಿ

ಗಂಡು : ನಮ್ಮ ಜಾತಿಯಲ್ಲಿ ಹೆಂಡತಿ ಹೊತ್ತು ಕೊಂಡು ಹೋದರೆ

ಹೆಣ್ಣು : ಹೌದು ತಾಯಿ

ಗಂಡು : ಅವನ ಕುಲಕ್ಕೆ ದಂಡ ಕೊಡಬೇಕು

ಹೆಣ್ಣು : ಹೌದು ತಾಯಿ

ಗಂಡು : ಕುಲದಲ್ಲಿ ಕರೆದುಕೊಳ್ಳುತ್ತೇವೆ

ಹೆಣ್ಣು : ಹೌದು ತಾಯಿ

ಗಂಡು : ಇಲ್ಲ ಅಂದ್ರೆ ಕುಲ ಬಹಿಷ್ಕಾರ

ಹೆಣ್ಣು : ಹೌದು ತಾಯಿ

ಗಂಡು : ಕೊಡು ತಾಯಿ.......

ಹೆಣ್ಣು : ಹೌದು ತಾಯಿ

ಗಂಡು : ಕಾಪಾಡವ್ವ

ಹೆಣ್ಣು : ಹೌದು ತಾಯಿ

ಗಂಡು : ಓಹೋ..... ಮಾರಕ್ಕ ನಿನ್ನ ಉಟ್ಟಿದ ಸೀರೆ ಕೊಡಮ್ಮ

ಹೆಣ್ಣು : ಹಾ ಹಾ ಹಾ ಹಾ

ಗಂಡು : ಯಪ್ಪ ಗಾದಿಲಿಂಗಪ್ಪ ನಿನ್ನ ಉಟ್ಟಿದ ವಸ್ತ್ರ ಕೊಡಪ್ಪ

ಹೆಣ್ಣು : ಹಾ ಹಾ ಹಾ ಹಾ

ಗಂಡು : ನಿನ್ನ ಹೆಸರು ಕೊಂಡಿ ಹಾಕುತೀನಿ

ಹೆಣ್ಣು : ಹಾ ಹಾ ಹಾ ಹಾ

ಗಂಡು : ಬಸವಲಿಂಗಪ್ಪ ತಂದು

ಹೆಣ್ಣು : ಹಾ ಹಾ ಹಾ ಹಾ

ಗಂಡು : ಲಿಂಗಪ್ಪ ತಂದು

ಹೆಣ್ಣು : ಹಾ ಹಾ ಹಾ ಹಾ

ಗಂಡು : ಮಾರಕ್ಕ ತಂದು

ಹೆಣ್ಣು : ಹಾ ಹಾ ಹಾ ಹಾ

ಗಂಡು : ಗುಂಡಮ್ಮ ತಂದು

ಹೆಣ್ಣು : ಹಾ ಹಾ ಹಾ ಹಾ

ಗಂಡು : ವೆಂಕಮ್ಮ ತಂದು

ಹೆಣ್ಣು : ಹಾ ಹಾ ಹಾ ಹಾ

ಗಂಡು : ಈರಮ್ಮ ತಂದು

ಹೆಣ್ಣು : ಹಾ ಹಾ ಹಾ ಹಾ

ಗಂಡು : ಹುಟ್ಟಿದಣ್ಣ ಹೆಸರು

ಹೆಣ್ಣು : ಹಾ ಹಾ ಹಾ ಹಾ

ಗಂಡು : ಪೆದ್ದೆ ಗಾಳೆಪ್ಪ ಹೆಸರು

ಹೆಣ್ಣು : ಹಾ ಹಾ ಹಾ ಹಾ

ಗಂಡು : ಗಾಳೆಪ್ಪ ಹೆಸರು

ಹೆಣ್ಣು : ಹಾ ಹಾ ಹಾ ಹಾ

ಗಂಡು : ಮಾರಪ್ಪನ ಹೆಸರು

ಹೆಣ್ಣು : ಹಾ ಹಾ ಹಾ ಹಾ

ಗಂಡು : ಹಾ ನೋಡಪ್ಪ ಈ ಮೂರು ಹೆಸರು ಕೊಂಡು ಹಾಡಿದ್ದೇನೆ

ಹೆಣ್ಣು : ಹಾ ಹಾ ಹಾ ಹಾ

ಗಂಡು : ನಮ್ಮ ಜಾತಿಗೆ ಇಷ್ಟದೆ ನೋಡಪ್ಪ

## ಎಳುಕೊಳ್ಳದ ದುರ್ಗಾದೇವಿ

ಗಂಡು : ಗಾಸಿ ಒಳಗೆ.....

ಹೆಣ್ಣು : ಗಾಸಿ ಒಳಗೆ.....

ಗಂಡು : ಎಳುಕುಂದದ ಹುಟ್ಟಿದ ನಮ್ಮಪ್ಪನ ಜೀವ ಉಳಿಸು

ಹೆಣ್ಣು : ಎಳುಕಂದದ ಹುಟ್ಟಿದ ನಮ್ಮಪ್ಪನ ಜೀವ ಉಳಿಸು

ಗಂಡು : ನಿನಗೆ ಬೇಡಿದ ವಸ್ತ್ರ ಕೊಡುತ್ತೀನಿ

ಹೆಣ್ಣು : ನಿನಗೆ ಬೇಡಿದ ವಸ್ತ್ರ ಕೊಡುತ್ತೀನಿ

ಗಂಡು : ನಮ್ಮಪ್ಪನ ನನಗೆ ಕೊಡುವ್ವ

ಹೆಣ್ಣು : ನಮ್ಮಪ್ಪನ ನನಗೆ ಕೊಡುವ್ವ

ಗಂಡು : ತಾಯಿ ನಿನಗೆ ಬ್ಯಾಟಿ ಕೊಡಿತಿನಿ

ಹೆಣ್ಣು : ತಾಯಿ ನಿನಗೆ ಬ್ಯಾಟಿ ಕೊಡಿತಿನಿ

ಗಂಡು : ಊರು ಅಡಿಗೆ ಗುಡಿಗೆ ಮುಟಸಿಸ್ತೀದಿನಿ

ಹೆಣ್ಣು : ಊರು ಅಡಿಗೆ ಗುಡಿಗೆ ಮುಟಸಿಸ್ತೀದಿನಿ

ಗಂಡು : ನಮ್ಮ ಭುಜ ಬಲದ ನಿನಗೆ ತೋರಿಸಿತ್ತೀದಿನಿ

ಹೆಣ್ಣು : ನಮ್ಮ ಭುಜ ಬಲದ ನಿನಗೆ ತೋರಿಸಿತ್ತೀದಿನಿ

ಗಂಡು : ನಮ್ಮ ಹರಕೆಗಳು ನಿಮ್ಮ ಗುಡಿಮುಂದೆ ತೋರಿಸಿದಿವೆ

ಹೆಣ್ಣು : ನಮ್ಮ ಹರಕೆಗಳು ನಿಮ್ಮ ಗುಡಿಮುಂದೆ ತೋರಿಸಿದಿವೆ

ಗಂಡು : ಊರು ಹಂದರ ಹಾಕಿ, ಒಳಗೂ

ಹೆಣ್ಣು : ಊರು ಹಂದರ ಹಾಕಿ, ಒಳಗೂ

ಗಂಡು : ಹಳ್ಳಿದಂಡಗೆ ನಮ್ಮಪ್ಪನ ಕರೆದು ಕೊಂಡು ಬಂದು

ಹೆಣ್ಣು : ಹಳ್ಳಿದಂಡಗೆ ನಮ್ಮಪ್ಪನ ಕರೆದು ಕೊಂಡು ಬಂದು

ಗಂಡು : ನಿನ್ನ ನೇತ್ರ ಹೊಳಗೆ ಉಳಿಸಿಕೊಂಡು

ಹೆಣ್ಣು : ನಿನ್ನ ನೇತ್ರ ಹೊಳಗೆ ಉಳಿಸಿಕೊಂಡು
ಗಂಡು : ನಿನ್ನ ಕೈಯಲ್ಲಿ ಹರಗೋಲ ಇಸ್ಕೊಂಡು
ಹೆಣ್ಣು : ನಿನ್ನ ಕೈಯಲ್ಲಿ ಹರಗೋಲ ಇಸ್ಕೊಂಡು
ಗಂಡು : ನಿನ್ನ ಗುಡಿಯ ದೋಣಿ ಮೇಲೆ ಕೂಡಿಸಿ ಕೊಂಡು
ಹೆಣ್ಣು : ನಿನ್ನ ಗುಡಿಯ ದೋಣಿ ಮೇಲೆ ಕೂಡಿಸಿ ಕೊಂಡು
ಗಂಡು : ನಿನ್ನ ಹಂದರ ಒಳಕಾ ಬಾ
ಹೆಣ್ಣು : ನಿನ್ನ ಹಂದರ ಒಳಕಾ ಬಾ
ಗಂಡು : ನಿನ್ನ ಗುಡಿಕಾರ ಬಣ್ಣ ಗುಡಿಗೆ ಮುಟ್ಟಿಸಿತಿನಿ
ಹೆಣ್ಣು : ನಿನ್ನ ಗುಡಿಕಾರ ಬಣ್ಣ ಗುಡಿಗೆ ಮುಟ್ಟಿಸಿತಿನಿ
ಗಂಡು : ನಿನ್ನ ಒಂದು ಕಡೆಗೆ ಬಾಗಿಲಿಗೆ ಮುಟ್ಟಿಸಿತಿವೆ
ಹೆಣ್ಣು : ನಿನ್ನ ಒಂದು ಕಡೆಗೆ ಬಾಗಿಲಿಗೆ ಮುಟ್ಟಿಸಿತಿವೆ
ಗಂಡು : ಜಿನಗಾರ ಒಳಗೆ ದೋಣಿ ಬಾಗಿಲಿನಲ್ಲಿ
ಹೆಣ್ಣು : ಜಿನಗಾರ ಒಳಗೆ ದೋಣಿ ಬಾಗಿಲಿನಲ್ಲಿ
ಗಂಡು : ನಿನ್ನ ಹಂದರ ಒಳಗೆ ದೋಣಿ ಬಾಗಿಲಿನಲ್ಲಿ
ಹೆಣ್ಣು : ನಿನ್ನ ಹಂದರ ಒಳಗೆ ದೋಣಿ ಬಾಗಿಲಿನಲ್ಲಿ
ಗಂಡು : ಎಳ್ಳುಕೊಳ್ಳದ ದೇವರು ಶ್ರೀದುರ್ಗಾದೇವಿ
ಹೆಣ್ಣು : ಎಳ್ಳುಕೊಳ್ಳದ ದೇವರು ಶ್ರೀದುರ್ಗಾದೇವಿ
ಗಂಡು : ದೇವಿಗೆ ಅರವತ್ತಾರು ಎಂಬುದು ಬಣ್ಣಬಡಿಸಿ
ಹೆಣ್ಣು : ದೇವಿಗೆ ಅರವತ್ತಾರು ಎಂಬುದು ಬಣ್ಣಬಡಿಸಿ
ಗಂಡು : ಅಮ್ಮನ ಮೇಲೆ ದೃಷ್ಟಿ ಬೀಳಿಸಿ
ಹೆಣ್ಣು : ಅಮ್ಮನ ಮೇಲೆ ದೃಷ್ಟಿ ಬೀಳಿಸಿ
ಗಂಡು : ಮಾರೆಗೆ, ಮರಿಟ್ಟು ಬಿಳಿಸಬೇಡ
ಹೆಣ್ಣು : ಮಾರೆಗೆ, ಮರಿಟ್ಟು ಬಿಳಿಸಬೇಡ
ಗಂಡು : ಅಮ್ಮನವರ ಬರಿಕೈಯಲ್ಲಿ ಮುಟ್ಟಾಬೇಡ
ಹೆಣ್ಣು : ಅಮ್ಮನವರ ಬರಿಕೈಯಲ್ಲಿ ಮುಟ್ಟಾಬೇಡ
ಗಂಡು : ನಿನ್ನ ದುರ್ಗಾದೇವಿ ಬಾಗಿಲಿಗೆ ಬಿದ್ದೇನೆ
ಹೆಣ್ಣು : ನಿನ್ನ ದುರ್ಗಾದೇವಿ ಬಾಗಿಲಿಗೆ ಬಿದ್ದೇನೆ
ಗಂಡು : ನಮ್ಮಪ್ಪನ ನಮ್ಮಗೆ ಕೊಡಮ್ಮ
ಹೆಣ್ಣು : ನಮ್ಮಪ್ಪನ ನಮ್ಮಗೆ ಕೊಡಮ್ಮ
ಗಂಡು : ಅಣ್ಣ ತಾಳಿ ತೆಗೆಯುವುದಕ್ಕೆ ಹೋಗಬ್ಯಾಡ
ಹೆಣ್ಣು : ಅಣ್ಣ ತಾಳಿ ತೆಗೆಯುವುದಕ್ಕೆ ಹೋಗಬ್ಯಾಡ
ಗಂಡು : ಮೂಗಿನ ಮುತ್ತು ತೆಗೆಯಾಕಿ ಹೋಗಬೇಡ
ಹೆಣ್ಣು : ಮೂಗಿನ ಮುತ್ತು ತೆಗೆಯಾಕಿ ಹೋಗಬೇಡ

ಗಂಡು : ಕಾಲಿಗೆ ಚೈನಾ ಬಿಚ್ಚು ಬಿಡಬ್ಯಾಡ

ಹೆಣ್ಣು : ಕಾಲಿಗೆ ಚೈನಾ ಬಿಚ್ಚು ಬಿಡಬ್ಯಾಡ

ಗಂಡು : ಮುತ್ತೈದೆ ಬಳೆ ಹಾರಿಸಬ್ಯಾಡ

ಹೆಣ್ಣು : ಮುತ್ತೈದೆ ಬಳೆ ಹಾರಿಸಬ್ಯಾಡ

ಗಂಡು : ಹೊಸಪೇಟೆಗೆ ಹೋಗಿ ನಾನು ಬರುತ್ತೀನಿವ್ವ

ಹೆಣ್ಣು : ಹೊಸಪೇಟೆಗೆ ಹೋಗಿ ನಾನು ಬರುತ್ತೀನಿವ್ವ

ಗಂಡು : ಪಂಚಮರ ಸೇರಿಸಿಕೊಂಡು

ಹೆಣ್ಣು : ಪಂಚಮರ ಸೇರಿಸಿಕೊಂಡು

ಗಂಡು : ತಾಳಿ ಒಳಗೂ ಶ್ರೀದುರ್ಗಾದೇವಿ

ಹೆಣ್ಣು : ತಾಳಿ ಒಳಗೂ ಶ್ರೀದುರ್ಗಾದೇವಿ

ಗಂಡು : ಎಳ್ಳುಕೊಳ್ಳದ ಶ್ರೀದುರ್ಗಾದೇವಿ

ಹೆಣ್ಣು : ಎಳ್ಳುಕೊಳ್ಳದ ಶ್ರೀದುರ್ಗಾದೇವಿ

ಗಂಡು : ಬಂದಾನಮ್ಮ ದುರ್ಗಾದೇವಿ ನಿನ್ನ ಪಾದಕೆ

ಹೆಣ್ಣು : ಬಂದಾನಮ್ಮ ದುರ್ಗಾದೇವಿ ನಿನ್ನ ಪಾದಕೆ

ಗಂಡು : ಬಂದಾಳೆ ಕೂಗಮ್ಮ ನಿನ್ನ ಪಾದಗೆ

ಹೆಣ್ಣು : ಬಂದಾಳೆ ಕೂಗಮ್ಮ ನಿನ್ನ ಪಾದಗೆ

ಗಂಡು : ಬಂದಾಳೆ ದುರಗಮ್ಮ ನಿನ್ನ ಪಾದಗೆ

ಹೆಣ್ಣು : ಬಂದಾಳೆ ದುರಗಮ್ಮ ನಿನ್ನ ಪಾದಗೆ

ಗಂಡು : ಭಂಡಾರಿ ಕೂಗಮ್ಮ ನಿನ್ನ ಪಾದಗೆ

ಹೆಣ್ಣು : ಭಂಡಾರಿ ಕೂಗಮ್ಮ ನಿನ್ನ ಪಾದಗೆ

ಗಂಡು : ಊರು ಮೆರವಣಿಗೆ ನಾನು ಮಾಡಬೇಕು

ಹೆಣ್ಣು : ಊರು ಮೆರವಣಿಗೆ ನಾನು ಮಾಡಬೇಕು

ಗಂಡು : ಐದು ಉಂಗುರ ಗುಡಿಯಲ್ಲಿ ತೂಗುಹಾಕಿ

ಹೆಣ್ಣು : ಐದು ಉಂಗುರ ಗುಡಿಯಲ್ಲಿ ತೂಗುಹಾಕಿ

ಗಂಡು : ಅಣ್ಣ:ತಂಗಿ ಗುಡಿಯಲ್ಲಿ ಕುಳಿತು ಕೊಂಡು

ಹೆಣ್ಣು : ಅಣ್ಣ:ತಂಗಿ ಗುಡಿಯಲ್ಲಿ ಕುಳಿತು ಕೊಂಡು

ಗಂಡು : ಶ್ರೀ ದುರುಗಮ್ಮ ಹಳ್ಳದ ದಂಡಿಯಲ್ಲಿ ಕೂಳಿತಳು

ಹೆಣ್ಣು : ಶ್ರೀ ದುರುಗಮ್ಮ ಹಳ್ಳದ ದಂಡಿಯಲ್ಲಿ ಕೂಳಿತಳು

ಗಂಡು : ಊರ ದುರುಗಮ್ಮ ಮೆರವಣಿಗೆ ಹಾಕಿ

ಹೆಣ್ಣು : ಊರ ದುರುಗಮ್ಮ ಮೆರವಣಿಗೆ ಹಾಕಿ

ಗಂಡು : ನಿನ್ನ ಗಂಡನ ಕರೆದುಕೊಂಡು ಬಾರವ್ವ

ಹೆಣ್ಣು : ನಿನ್ನ ಗಂಡನ ಕರೆದುಕೊಂಡು ಬಾರವ್ವ

ಗಂಡು : ಮೈಲಿ ಕುಂಚಿ ಹಾಗಿ, ನೀನು ತೆಗೆದುಹಾಕಿ

ಹೆಣ್ಣು : ಮೈಲಿ ಕುಂಚಿ ಹಾಗಿ, ನೀನು ತೆಗೆದುಹಾಕಿ
ಗಂಡು : ಹುಟ್ಟಿದ ಬೇವಿನ ತಪ್ಪಲ ಕಟ್ಟಿಸಿಕೊಂಡು
ಹೆಣ್ಣು : ಹುಟ್ಟಿದ ಬೇವಿನ ತಪ್ಪಲ ಕಟ್ಟಿಸಿಕೊಂಡು
ಗಂಡು : ನಿನ್ನ ಹಂದರ ಹಾಕಿ
ಹೆಣ್ಣು : ನಿನ್ನ ಹಂದರ ಹಾಕಿ
ಗಂಡು : ಮದ್ಯರಾತ್ರಿ ನೀನು ಬಂದು
ಹೆಣ್ಣು : ಮದ್ಯರಾತ್ರಿ ನೀನು ಬಂದು
ಗಂಡು : ಎಳುಕೊಳ್ಳದ ಪಟೇಲ ಕರೆದುಕೊಂಡು
ಹೆಣ್ಣು : ಎಳುಕೊಳ್ಳದ ಪಟೇಲ ಕರೆದುಕೊಂಡು
ಗಂಡು : ಐದು ಮಂದಿ ಅಕ್ಕ:ತಂಗಿಯರು
ಹೆಣ್ಣು : ಐದು ಮಂದಿ ಅಕ್ಕ:ತಂಗಿಯರು
ಗಂಡು : ಕುರಿ ಶಾಂತಿ ತೆಗೆದುಕೊಂಡು
ಹೆಣ್ಣು : ಕುರಿ ಶಾಂತಿ ತೆಗೆದುಕೊಂಡು
ಗಂಡು : ಬಿಳಿಸೀಮೆ ಎಂಬುದು ಕಳಸ ತೆಗೆದುಕೊಂಡು
ಹೆಣ್ಣು : ಬಿಳಿಸೀಮೆ ಎಂಬುದು ಕಳಸ ತೆಗೆದುಕೊಂಡು
ಗಂಡು : ಮುತ್ತೈದೆ ಬಳೆ ಮೊರದಲ್ಲಿ ತೆಗೆದು ಕೊಂಡು
ಹೆಣ್ಣು : ಮುತ್ತೈದೆ ಬಳೆ ಮೊರದಲ್ಲಿ ತೆಗೆ ು ಕೊಂಡು
ಗಾಡು : ಕುರಿ ಕೊಡಲಿ ನಾನು ಕೊಡಿತಿನಿ
ಹೆಣ್ಣು : ಕುರಿ ಕೊಡಲಿ ನಾನು ಕೊಡಿತಿನಿ
ಗಾಡು : ಕುರಿ ಕೊಟ್ಟು ಬ್ಯಾನೆ ಕಳೆದುಕೊಳ್ಳುತ್ತೇನೆ
ಹೆಣ್ಣು : ಕುರಿ ಕೊಟ್ಟು ಬ್ಯಾನೆ ಕಳೆದುಕೊಳ್ಳುತ್ತೇನೆ
ಗಾಡು : ನಿನ್ನ ಮೆರವಣಿಗೆ ನಾನು ಮಾಡಿತಿನಿ
ಹೆಣ್ಣು : ನಿನ್ನ ಮೆರವಣಿಗೆ ನಾನು ಮಾಡಿತಿನಿ
ಗಂಡು : ಪಾಪ ಕರ್ಮ ಕಳಿತಮ್ಮ
ಹೆಣ್ಣು : ಪಾಪ ಕರ್ಮ ಕಳಿತಮ್ಮ
ಗಂಡು : ಎಳುಕೊಳ್ಳದ ಶ್ರೀದುರ್ಗಾದೇವಿ
ಹೆಣ್ಣು : ಎಳುಕೊಳ್ಳದ ಶ್ರೀದುರ್ಗಾದೇವಿ
ಗಂಡು : ಹಿಂದಕ್ಕೆ ಮೂರು ಹೆಜ್ಜೆ ನಿನ್ನ ಹಿಡಿಸಲಿಲ್ಲ
ಹೆಣ್ಣು : ಹಿಂದಕ್ಕೆ ಮೂರು ಹೆಜ್ಜೆ ನಿನ್ನ ಹಿಡಿಸಲಿಲ್ಲ
ಗಂಡು : ನಾಲ್ಕು ಕಾಲು ಕೊಡು ಬಸವಣ್ಣ
ಹೆಣ್ಣು : ನಾಲ್ಕು ಕಾಲು ಕೊಡು ಬಸವಣ್ಣ
ಗಂಡು : ಕರಿದಿನಿ ಮಾವನರ ಉಡುಪಾಪ
ಹೆಣ್ಣು : ಕರಿದಿನಿ ಮಾವನರ ಉಡುಪಾಪ

ಗಂಡು : ಜಾರಿ ಮೇಲೆ ಗಾಡಿ ಇದೆ

ಹೆಣ್ಣು : ಜಾರಿ ಮೇಲೆ ಗಾಡಿ ಇದೆ

ಗಂಡು : ಭಿಕ್ಷೆಯ ಮೇಲೆ ಆಟ ಆಡಿಸಿತಿನಿ

ಹೆಣ್ಣು : ಭಿಕ್ಷೆಯ ಮೇಲೆ ಆಟ ಆಡಿಸಿತಿನಿ

ಗಂಡು : ನೀನು ಎಷ್ಟು ಮಂದಿ ಕಳಿಸಿದವ್ವ

ಹೆಣ್ಣು : ನೀನು ಎಷ್ಟು ಮಂದಿ ಕಳಿಸಿದವ್ವ

ಗಂಡು : ಮೈಲಾರ ಗಿಳಿಗ ಕಳಿಸಿದೀನಿ

ಹೆಣ್ಣು : ಮೈಲಾರ ಗಿಳಿಗ ಕಳಿಸಿದೀನಿ

ಗಂಡು : ತುಂಬಿದ ಪಾಪ ಗಿಂಡಿಯ ನೀರಿಲ್ಲ

ಹೆಣ್ಣು : ತುಂಬಿದ ಪಾಪ ಗಿಂಡಿಯ ನೀರಿಲ್ಲ

ಗಂಡು : ಅಕ್ಕಿಯ ಮನೆ ಸೊಸೆ ಇರಬಾರದು

ಹೆಣ್ಣು : ಅಕ್ಕಿಯ ಮನೆ ಸೊಸೆ ಇರಬಾರದು

ಗಂಡು : ಮನೆಗೆ ಹಿರಿಯ ಸೊಸೆ ಹಂತ ಒಡವೆ ಕೊಡಿತಿನಿ

ಹೆಣ್ಣು : ಮನೆಗೆ ಹಿರಿಯ ಸೊಸೆ ಹಂತ ಒಡವೆ ಕೊಡಿತಿನಿ

ಗಂಡು : ಆ ಸೊಸೆ ನಿಂತು ಶ್ರೀದುರ್ಗಾದೇವಿ ಆಜ್ಞೆ ತೆಗೆದುಕೊಳ್ಳುತ್ತಾಳೆ

ಹೆಣ್ಣು : ಆ ಸೊಸೆ ನಿಂತು ಶ್ರೀದುರ್ಗಾದೇವಿ ಆಜ್ಞೆ ತೆಗೆದುಕೊಳ್ಳುತ್ತಾಳೆ

ಗಂಡು : ಶ್ರೀದುರ್ಗಾದೇವಿ ಆಜ್ಞೆ ತೆಗೆದುಕೊಂಡು ಏನು ಮಾಡುತ್ತಾಳೆ ಏನು?

ಹೆಣ್ಣು : ಶ್ರೀದುರ್ಗಾದೇವಿ ಆಜ್ಞೆ ತೆಗೆದುಕೊಂಡು ಏನು ಮಾಡುತ್ತಾಳೆ ಏನು?

ಗಂಡು : ಬೀಗರು ಬಂದರೆ ಎಡಗಡೆಯಲ್ಲಿ ಚರಿಗೆ ಕೊಡುವುದು

ಹೆಣ್ಣು : ಬೀಗರು ಬಂದರೆ ಎಡಗಡೆಯಲ್ಲಿ ಚರಿಗೆ ಕೊಡುವುದು

ಗಂಡು : ಹಾರಿದ ಗಂಗಳ ಮುಂದಕ್ಕೆ ಕೈ ಚಾಚುವುದು

ಹೆಣ್ಣು : ಹಾರಿದ ಗಂಗಳ ಮುಂದಕ್ಕೆ ಕೈ ಚಾಚುವುದು

ಗಂಡು : ಇಂತಹ ಮನೆಗೆ ಬೀಗಸ್ಥಾನ ಮಾಡ್ತಿನಿ ನಾವು

ಹೆಣ್ಣು : ಇಂತಹ ಮನೆಗೆ ಬೀಗಸ್ಥಾನ ಮಾಡ್ತಿನಿ ನಾವು

ಗಂಡು : ನಮ್ಮಪ್ಪನ ಬಾಳ ಮುಂದಕ್ಕೆ ಹೋಗುವುದು

ಹೆಣ್ಣು : ನಮ್ಮಪ್ಪನ ಬಾಳ ಮುಂದಕ್ಕೆ ಹೋಗುವುದು

ಗಂಡು : ಹಿಂದೆ ಬಂದ ಸೊಸೆಯರ ಮನೆಯಲ್ಲಿ ಕಲಿತುಕೊಳ್ಳುತ್ತಾಳೆ

ಹೆಣ್ಣು : ಹಿಂದೆ ಬಂದ ಸೊಸೆಯರ ಮನೆಯಲ್ಲಿ ಕಲಿತುಕೊಳ್ಳುತ್ತಾಳೆ

ಗಂಡು : ಎಳುಕೊಳ್ಳದುರ್ಗಿ ನೀನು ಮನೆಯ ಉದ್ಧಾರ ಮಾಡವ್ವ

ಹೆಣ್ಣು : ಎಳುಕೊಳ್ಳದುರ್ಗಿ ನೀನು ಮನೆಯ ಉದ್ಧಾರ ಮಾಡವ್ವ

ಗಂಡು : ಎಳುಕೊಳ್ಳದ ಶ್ರೀದುರ್ಗಾದೇವಿ ನಮಗೆ ಸಂತಾನ ಭಾಗ್ಯ ನೀಡವ್ವ

ಹೆಣ್ಣು : ಎಳುಕೊಳ್ಳದ ಶ್ರೀದುರ್ಗಾದೇವಿ ನಮಗೆ ಸಂತಾನ ಭಾಗ್ಯ ನೀಡವ್ವ

ಗಂಡು : ಎಳುಕೊಳ್ಳದ ಶ್ರೀದುರ್ಗಾದೇವಿ ನಮಗೆ ಭಿಕ್ಷೆಗೆ ಹೆಚ್ಚಿನ ಒಲವು ನೀಡವ್ವ

ಹೆಣ್ಣು : ಎಳುಕೊಳ್ಳದ ಶ್ರೀದುರ್ಗಾದೇವಿ ನಮಗೆ ಭಿಕ್ಷೆಗೆ ಹೆಚ್ಚಿನ ಒಲವು ನೀಡವ್ವ
ಗಂಡು : ಎಳುಕೊಳ್ಳದ ಶ್ರೀದುರ್ಗಾದೇವಿ ನಿನ್ನ ಆರಾಧನೆ ಮಾಡಿತ್ತವ್ವ
ಹೆಣ್ಣು : ಎಳುಕೊಳ್ಳದ ಶ್ರೀದುರ್ಗಾದೇವಿ ನಿನ್ನ ಆರಾಧನೆ ಮಾಡಿತ್ತವ್ವ

**ಕೃಷಿ ಕೆಲಸದಲ್ಲಿ ಶ್ರೀದುರ್ಗಾದೇವಿ ಪಾತ್ರ**

ಗಂಡು : ಬಾರಪ್ಪ ಗಂಡ ಹೊಲಕಾ ಹೋಗಣ್ಣಾ
ಹೆಣ್ಣು : ಬಾರಪ್ಪ ಗಂಡ ಹೊಲಕಾ ಹೋಗಣ್ಣಾ
ಗಂಡು : ಹೊಲದಲ್ಲಿ ಮಡಿಕೆ ಬಿತ್ತು ಬರಣ್ಣಾ
ಹೆಣ್ಣು : ಹೊಲದಲ್ಲಿ ಮಡಿಕೆ ಬಿತ್ತು ಬರಣ್ಣಾ
ಗಂಡು : ಅಗಲಿ ನಡೆಯೇ ಎಂದಾನೋ
ಹೆಣ್ಣು : ಅಗಲಿ ನಡೆಯೇ ಎಂದಾನೋ
ಗಂಡು : ಐದು ಮಂದಿ ಕೂಲಿಕಾರ ಕರೆದುಕೊಂಡು
ಹೆಣ್ಣು : ಐದು ಮಂದಿ ಕೂಲಿಕಾರ ಕರೆದುಕೊಂಡು
ಗಂಡು : ಚಕ್ಕಡಿ ಒಳಗೆ ಕೂಡಿಸಿಕೊಂಡು
ಹೆಣ್ಣು : ಚಕ್ಕಡಿ ಒಳಗೆ ಕೂಡಿಸಿಕೊಂಡು
ಗಂಡು : ಹೊಲದ ಹೋಗಿ ಚಕ್ಕಡಿ ಇಳಿಸಿದನಾ
ಹೆಣ್ಣು : ಹೊಲದ ಹೋಗಿ ಚಕ್ಕಡಿ ಇಳಿಸಿದನಾ
ಗಂಡು : ಚಕ್ಕಡಿ ಇಳಿಸಿ, ಪೂಜೆ ಮಾಡನೋ
ಹೆಣ್ಣು : ಚಕ್ಕಡಿ ಇಳಿಸಿ, ಪೂಜೆ ಮಾಡನೋ
ಗಂಡು : ಹೊಲಕ್ಕೆ ನಮಸ್ಕಾರ ಮಾಡುನಾ
ಹೆಣ್ಣು : ಹೊಲಕ್ಕೆ ನಮಸ್ಕಾರ ಮಾಡುನಾ
ಗಂಡು : ಮುತ್ತೈದೆ ಎಂಬದು ಐದು ಮಂದಿ ಹೆಣ್ಣ ಮಕ್ಕಳಿಗೆ
ಹೆಣ್ಣು : ಮುತ್ತೈದೆ ಎಂಬದು ಐದು ಮಂದಿ ಹೆಣ್ಣ ಮಕ್ಕಳಿಗೆ
ಗಂಡು : ಕುಂಕುಮ ಭಂಡಾರ ಹಣೆಗೆ ಹಚ್ಚನಾ
ಹೆಣ್ಣು : ಕುಂಕುಮ ಭಂಡಾರ ಹಣೆಗೆ ಹಚ್ಚನಾ
ಗಂಡು : ಬಾರೆ ಹೆಂಡತಿ ಕೂರಿಗೆ ಹಿಡಿಯನಾ
ಹೆಣ್ಣು : ಬಾರೆ ಹೆಂಡತಿ ಕೂರಿಗೆ ಹಿಡಿಯನಾ
ಗಂಡು : ಉಡಲುದಾಗ ಹೆಸರು ಹಾಕಿನಾ
ಹೆಣ್ಣು : ಉಡಲುದಾಗ ಹೆಸರು ಹಾಕಿನಾ
ಗಂಡು : ಎಳುಕೊಳ್ಳದ ಕೂರಿಗೆ ಮುಂದೆ
ಹೆಣ್ಣು : ಎಳುಕೊಳ್ಳದ ಕೂರಿಗೆ ಮುಂದೆ
ಗಂಡು : ಹಿಂದೆ ಐದು ಮಂದಿ ಒತ್ತುವರು
ಹೆಣ್ಣು : ಹಿಂದೆ ಐದು ಮಂದಿ ಒತ್ತುವರು
ಗಂಡು : ಹೆಂಗ ಹೆಂಗ ಒತ್ತುಕೊಂಡು ಹೋಗುತ್ತಾರೆ

ಹೆಣ್ಣು : ಹೆಂಗ ಹೆಂಗ ಒತ್ತುಕೊಂಡು ಹೋಗುತ್ತಾರೆ
ಗಂಡು : ನಾಲ್ಕು ಮಂದಿ ಸೊಸೆರು
ಹೆಣ್ಣು : ನಾಲ್ಕು ಮಂದಿ ಸೊಸೆರು
ಗಂಡು : ಮಾಯ ರೂಪ ಶ್ರೀದುರ್ಗಾದೇವಿ
ಹೆಣ್ಣು : ಮಾಯ ರೂಪ ಶ್ರೀದುರ್ಗಾದೇವಿ
ಗಂಡು : ಎಳುಕೊಳ್ಳದ ಮೂಗದಣ ಹರಿಯಿತು
ಹೆಣ್ಣು : ಎಳುಕೊಳ್ಳದ ಮೂಗದಣ ಹರಿಯಿತು
ಗಂಡು : ಕೊರಳಿಗೆ ತಾಳಿ ಹೆಂಡತಿ ಬಿಚಿತ್ತು
ಹೆಣ್ಣು : ಕೊರಳಿಗೆ ತಾಳಿ ಹೆಂಡತಿ ಬಿಚಿತ್ತು
ಗಂಡು : ಎಳುಕೊಳ್ಳದ ಶ್ರೀದುರ್ಗಾದೇವಿ ಗುಡಿಗೆ ಬಂದು ನಿಂತಳು
ಹೆಣ್ಣು : ಎಳುಕೊಳ್ಳದ ಶ್ರೀದುರ್ಗಾದೇವಿ ಗುಡಿಗೆ ಬಂದು ನಿಂತಳು
ಗಂಡು : ಎಷ್ಟು ಪಾಪಿ ನೀವು
ಹೆಣ್ಣು : ಎಷ್ಟು ಪಾಪಿ ನೀವು
ಗಂಡು : ಎಷ್ಟು ಚಂಡಾಟ ನೀನವ್ವ
ಹೆಣ್ಣು : ಎಷ್ಟು ಚಂಡಾಟ ನೀನವ್ವ
ಗಂಡು : ನನಗೆ ನೀನು ಕೊಟ್ಟ ಭಾಷೆ ಮರಿತಿಯಾ
ಹೆಣ್ಣು : ನನಗೆ ನೀನು ಕೊಟ್ಟ ಭಾಷೆ ಮರಿತಿಯಾ
ಗಂಡು : ನಿನ್ನ ತೆಗೆದುಕೊಂಡು ಗುಡಿಕೋಪುರ ಮೇಲೆ
ಹೆಣ್ಣು : ನಿನ್ನ ತೆಗೆದುಕೊಂಡು ಗುಡಿಕೋಪುರ ಮೇಲೆ
ಗಂಡು : ಗುಡಿ ಗೋಪುರದ ಮೇಲೆ ನಿನ್ನಕೂಡಿಸಿಕೊಂಡು
ಹೆಣ್ಣು : ಗುಡಿ ಗೋಪುರದ ಮೇಲೆ ನಿನ್ನಕೂಡಿಸಿಕೊಂಡು
ಗಂಡು : ನೀನು ಈ ಊರಿನಲ್ಲಿ ಇರಬೇಡಾ
ಹೆಣ್ಣು : ನೀನು ಈ ಊರಿನಲ್ಲಿ ಇರಬೇಡಾ
ಗಂಡು : ಮುತ್ತೈದೆಯರ ಭಾಷೆ ನಿನ್ನ ಭಾಷೆ
ಹೆಣ್ಣು : ಮುತ್ತೈದೆಯರ ಭಾಷೆ ನಿನ್ನ ಭಾಷೆ
ಗಂಡು : ಈ ಊರು ನಿನ್ನದು
ಹೆಣ್ಣು : ಈ ಊರು ನಿನ್ನದು
ಗಂಡು : ನಿನ್ನ ತವರಿಗೆ ನೀನು ನಡಿಯವ್ವ
ಹೆಣ್ಣು : ನಿನ್ನ ತವರಿಗೆ ನೀನು ನಡಿಯವ್ವ
ಗಂಡು : ಶ್ರೀದುರ್ಗಾದೇವಿಗೆ ಅಜ್ಞೆ ಹೌದು ತಾಯಿ
ಹೆಣ್ಣು : ಶ್ರೀದುರ್ಗಾದೇವಿಗೆ ಅಜ್ಞೆ ಹೌದು ತಾಯಿ
ಗಂಡು : ಈಗ ತವರ ಮನೆಯಲ್ಲಿ ಉಂಡು ಆಡುತ್ತಾಳೆ
ಹೆಣ್ಣು : ಈಗ ತವರ ಮನೆಯಲ್ಲಿ ಉಂಡು ಆಡುತ್ತಾಳೆ

ಗಂಡು : ಗಂಡನ ಬ್ಯಾನೆ ಹ್ಯಾಂಗ ಬೆಳದಂಗ

ಹೆಣ್ಣು : ಗಂಡನ ಬ್ಯಾನೆ ಹ್ಯಾಂಗ ಬೆಳದಂಗ

ಗಂಡು : ಮನೆಯಲ್ಲಿ ಕತ್ತಲಿನಲ್ಲಿ ಅಂದಾಗೆ ಕಾಣು

ಹೆಣ್ಣು : ಮನೆಯಲ್ಲಿ ಕತ್ತಲಿನಲ್ಲಿ ಅಂದಾಗೆ ಕಾಣು

ಗಂಡು : ಗಂಡ ಪಾಪ ಮಾಡಿದಿರಿ, ಅಡಿವಿ ಪಾಲಿಗೆ ಹಾಕಿದಿರಿ

ಹೆಣ್ಣು : ಗಂಡ ಪಾಪ ಮಾಡಿದಿರಿ, ಅಡಿವಿ ಪಾಲಿಗೆ ಹಾಕಿದಿರಿ

ಗಂಡು : ಈಗ ಪಾಪಿಷ್ಮಗೇಡು ತವರ ಮನೆಗೆ ಬಂತು

ಹೆಣ್ಣು : ಈಗ ಪಾಪಿಷ್ಮಗೇಡು ತವರ ಮನೆಗೆ ಬಂತು

ಗಂಡು : ಉಂಡು ಮನೆಗೆ ದ್ರೋಹ ಬಗೆಯಿತು

ಹೆಣ್ಣು : ಉಂಡು ಮನೆಗೆ ದ್ರೋಹ ಬಗೆಯಿತು

ಗಂಡು : ದುರುಗಮ್ಮ ಗುಡಿಯಲ್ಲಿ ಹೋಗಬಾರದು

ಹೆಣ್ಣು : ದುರುಗಮ್ಮ ಗುಡಿಯಲ್ಲಿ ಹೋಗಬಾರದು

ಗಂಡು : ಚರಿಗೆ ನೀರು ಹಾಕುವುದಿಲ್ಲ

ಹೆಣ್ಣು : ಚರಿಗೆ ನೀರು ಹಾಕುವುದಿಲ್ಲ

ಗಂಡು : ರಾಮಪ್ಪ ಸೊಸೆಯರು ಹನಮವ್ವ ಬಾಗಿಲಿಗೆ

ಹೆಣ್ಣು : ರಾಮಪ್ಪ ಸೊಸೆಯರು ಹನಮವ್ವ ಬಾಗಿಲಿಗೆ

ಗಂಡು : ಹನುಮಪ್ಪ ಬಾಗಿಲಿಗೆ ಹಿಡಿದುಕೊಂಡು ಜಗ ಬೀಳಿಕಿ

ಹೆಣ್ಣು : ಹನುಮಪ್ಪ ಬಾಗಿಲಿಗೆ ಹಿಡಿದುಕೊಂಡು ಜಗ ಬೀಳಿಕಿ

ಗಂಡು : ಅಂತವರ ಮನೆಗೆ ನಾವು ಹೋಗಬಾರದು

ಹೆಣ್ಣು : ಅಂತವರ ಮನೆಗೆ ನಾವು ಹೋಗಬಾರದು

ಮೈಲಮ್ಮ

ಗಂಡು : ನಡೆದಾಳಮ್ಮ ನವಾಲಗಿ........

ಹೆಣ್ಣು : ಬಾಲು ಬೇಲು

ಗಂಡು : ಈಕೆ ನೋಡ್ರಿ ಮೈಲಮ್ಮ

ಹೆಣ್ಣು : ಬಾಲು ಬೇಲು

ಗಂಡು : ದೇಶ ತಿರಿಗಾಗಿಕೆ ನಮ್ಮವ್ವ, ಭೂಮಿ ತಿರುಗಾಗಿಕೆ ಮೈಲಮ

ಹೆಣ್ಣು : ಬಾಲು ಬೇಲು

ಗಂಡು : ಅಕ್ಕನ ಪಟ್ಟಣ ಮೇಲಾಗುವಿ, ಅಕ್ಕನ ಪಟ್ಟಣ ಮೇಲಾಗುವಿ

ಹೆಣ್ಣು : ಬಾಲು ಬೇಲು

ಗಂಡು : ದ್ಯಾವನೂರ ಪಟ್ಟಣ ಬೆಳಗಾವಿ, ದ್ಯಾಮನೂಮ್ಮ ಪಟ್ಟಣ ಬೆಳಗಾವಿ

ಹೆಣ್ಣು : ಬಾಲು ಬೇಲು

ಗಂಡು : ಅಕ್ಕನ ಪಟ್ಟಣ ಬೆಳಗಾವಿ

ಹೆಣ್ಣು : ಬಾಲು ಬೇಲು

ಗಂಡು : ದ್ಯಾವಮ್ಮನ ಹೊಟ್ಟೆಯಲ್ಲಿ ಐದುಮಂದಿ ಮಕ್ಕಳ ಹಡೆದಾಳು

ಹೆಣ್ಣು : ಬಾಲು ಬೇಲು

ಗಂಡು : ಮೈಲವ್ವ ಬಂದಳ ನೋಡಾವ್ವ

ಹೆಣ್ಣು : ಬಾಲು ಬೇಲು

ಗಂಡು : ಹಕ್ಕಿ ಪಿಕ್ಕಿ ನುಡಿದವು.....

ಹೆಣ್ಣು : ಬಾಲು ಬೇಲು

ಗಂಡು : ಈಕೆ ನೋಡ್ರಿ ಮೈಲಮ್ಮ.....

ಹೆಣ್ಣು : ಬಾಲು ಬೇಲು

ಗಂಡು : ಅಕ್ಕನ ಮಕ್ಕಳ ಮಾತಾಕಿ, ಬರಬೇಕೆಂದು ಹೊರಟಳು

ಹೆಣ್ಣು : ಬಾಲು ಬೇಲು

ಗಂಡು : ಈಕೆ ಎಂಬುದು ಹೊರಟಾಳು, ಮೈಲಮ್ಮ ಹೊಂಟಾಳು

ಹೆಣ್ಣು : ಬಾಲು ಬೇಲು

ಗಂಡು : ಹೆಂಗೆ ಮಾಡಬೇಕು ನಮ್ಮವ್ವ

ಹೆಣ್ಣು : ಬಾಲು ಬೇಲು

ಗಂಡು : ಬಂಜಾಗಾ ಎಂಬುದು ಕುಂತಿನಿ

ಹೆಣ್ಣು : ಬಾಲು ಬೇಲು

ಗಂಡು : ಬೆಳ್ಳಿ ಕುಂಟಿ ಹೊಲಿಸಳು, ಬಂಗಾರ ಕುಂಟೆ ಹೊಲಿಸಿಳು

ಹೆಣ್ಣು : ಬಾಲು ಬೇಲು

ಗಂಡು : ಬೆಳ್ಳಿ ಉಡುದಾರ ಹೊಲಿಸಿಳು, ಬಂಗಾರ ಉಡುದಾರ ಹೊಲಾಸಿಳು

ಹೆಣ್ಣು : ಬಾಲು ಬೇಲು

ಗಂಡು : ಚಲವಳಿ ಪುಟದಾರ ಹೊಲಿಸಿಳು

ಹೆಣ್ಣು : ಬಾಲು ಬೇಲು

ಗಂಡು : ಅಕ್ಕನ ಮಕ್ಕಳ ಮಾತಾಗಿ ಬರಬೇಕೆಂದು ಹೊರಟಾಳು

ಹೆಣ್ಣು : ಬಾಲು ಬೇಲು

ಗಂಡು : ದೊಡ್ಡದು ಗಂಟು ಕೊಟ್ಟಾಳು, ತಲೆ ಮೇಲೆ ಇಟ್ಟಾಳು

ಹೆಣ್ಣು : ಬಾಲು ಬೇಲು

ಗಂಡು : ತಲೆ ಎಂಬುದು ಉರಿಯುತೈತೆ, ಅಂಗಾಲು ಎಂಬುದು ಉರಿಯುತ್ತಿದೆ

ಹೆಣ್ಣು : ಬಾಲು ಬೇಲು

ಗಂಡು : ಏಳು ಸೀಮೆಗೆ ಬರತಿನಿ, ಏಳು ಕೋಣ ತಿರುಗಾಳೆ

ಹೆಣ್ಣು : ಬಾಲು ಬೇಲು

ಗಂಡು : ಮಾಡಿದ ಮೇಲೆ ಏರಿಳು ದೊಡ್ಡ ಗಂಟು ಏರಿಯಾಳು

ಹೆಣ್ಣು : ಬಾಲು ಬೇಲು

ಗಂಡು : ಸವಾರಿ ಎಂಬುದು ತಿರುಗಾಳೆ ದ್ಯಾವಮ್ಮ ಪಟ್ಟಣ ಬರಬೇಕು

ಹೆಣ್ಣು : ಬಾಲು ಬೇಲು

ಗಂಡು : ಮೈಲಮ್ಮ ಎಂಬದು ಹೊರಟಾಳು, ಮೈಲಮ್ಮ ಎಂಬದು ಹೊರಟಾಳು

ಹೆಣ್ಣು : ಬಾಲು ಬೇಲು

ಗಂಡು : ನೀ ಮೈಲಮ್ಮವೆಂಬುದು ಕುಂತಳೂ, ಮೈಲಮ್ಮವೆಂಬುದು ಕುಂತಳೂ

ಹೆಣ್ಣು : ಬಾಲು ಬೇಲು

ಗಂಡು : ಜೋಳವೆಂಬುದು ಅರಿಯಾಳು

ಹೆಣ್ಣು : ಬಾಲು ಬೇಲು

ಗಂಡು : ರೂಪವೆಂಬುದು ಹೊಗೆಯಿತ್ತು

ಹೆಣ್ಣು : ಬಾಲು ಬೇಲು

ಗಂಡು : ಮಾಲಿಗೆ ಹಟ್ಟಿ ಮಾಡಿತ್ತಾಳೆ

ಹೆಣ್ಣು : ಬಾಲು ಬೇಲು

ಗಂಡು : ಮೈಲಮ್ಮ ಬರುತ್ತಾಳೆ ಏಳು ಕೋಣ ಹುಡುಕಿಕೊಂಡಾಳು

ಹೆಣ್ಣು : ಬಾಲು ಬೇಲು

ಗಂಡು : ತಂಗಿನವೆಂಬುದು ಬರುತ್ತಾಳೆ

ಹೆಣ್ಣು : ಬಾಲು ಬೇಲು

ಗಂಡು : ಐದು ಮಂದಿ ಮಕ್ಕಳ, ದ್ಯಾವಮ್ಮನ ಹೊಟ್ಟೆಯಲ್ಲಿ ಮಕ್ಕಳು

ಹೆಣ್ಣು : ಬಾಲು ಬೇಲು

ಗಂಡು : ಐದು ಮಂದಿ ಮಕ್ಕಳ, ಮಕ್ಕಳವೆಂಬುದು ಕಲಾಸು

ಹೆಣ್ಣು : ಬಾಲು ಬೇಲು

ಗಂಡು : ಇಬ್ಬರು ಮಕ್ಕಳ ತಗೋಬೇಕು, ಚಾಪೆ ಸುಳಿಯಲ್ಲಿ ಸುತ್ತಿಯಾಳ

ಹೆಣ್ಣು : ಬಾಲು ಬೇಲು

ಗಂಡು : ಇಬ್ಬರು ಮಕ್ಕಳ ತೆಗೆದುಕೊಂಡು, ಅಡಲಗಡಿಗೆ ಮುಚಾಳೋ

ಹೆಣ್ಣು : ಬಾಲು ಬೇಲು

ಗಂಡು : ಬಂದು ಮಗನು ತಗೊಂಡು, ಹಟದ ಮೇಲೆ ಮುಚಾಳೇ

ಹೆಣ್ಣು : ಬಾಲು ಬೇಲು

ಗಂಡು : ದ್ಯಾವಮ್ಮ ನಿಂತಾಳ ತಿರುಗಿ ಹರವಿ ಕಟ್ಟಾಳು

ಹೆಣ್ಣು : ಬಾಲು ಬೇಲು

ಗಂಡು : ತಿರುಗಿ ಹರವಿ ಕಟ್ಟಾಳು, ಮೈ ತುಂಬ ಬಂದಾಳ

ಹೆಣ್ಣು : ಬಾಲು ಬೇಲು

ಗಂಡು : ಮೈಲಮ್ಮ ಬರುತ್ತಾಳೆ, ಏಳು ಕೋಣ ಹಿಡಿದುಕೊಂಡು

ಹೆಣ್ಣು : ಬಾಲು ಬೇಲು

ಗಂಡು : ಊರುಸುತ್ತ ಮೈಲಮ್ಮ ಬೆಳ್ಳಿನಾಡು ಹಚ್ಚಳಾ

ಹೆಣ್ಣು : ಬಾಲು ಬೇಲು

ಗಂಡು : ಹೆಂಗೋ ಮಾಡಬೇಕು ಪರಮಾತ್ಮ, ಹೆಂಗೋ ಮಾಡಬೇಕು ಪರಮಾತ್ಮ
ಹೆಣ್ಣು : ಬಾಲು ಬೇಲು
ಗಂಡು : ಏಳು ಕೋಣ ತಿರುಗಾಸಿಳೂ, ಬೆಳ್ಳಿ ನಾಣ್ಯ ಸಿಗಿಸೆಳೋ
ಹೆಣ್ಣು : ಬಾಲು ಬೇಲು
ಗಂಡು : ಅಕ್ಕನ ಮನೆಗೆ ಹೋದಳಾ ಏಳು ಕೋಣ ತಂದಾಳೋ
ಹೆಣ್ಣು : ಬಾಲು ಬೇಲು
ಗಂಡು : ಅಕ್ಕನ ಎಂಬುದು ಎತ್ತಾಳು, ತಲೆ ಹರವಿ ಕೊಟ್ಟಾಳು
ಹೆಣ್ಣು : ಬಾಲು ಬೇಲು
ಗಂಡು : ಚರಿಗೆ ನೀರು ತೆಗೆದುಕೊಂಡು, ತಂಗಿ ಎಂಬುದು ಬಂದಿನಿವ್ವ
ಹೆಣ್ಣು : ಬಾಲು ಬೇಲು
ಗಂಡು : ಚರಿಗೆ ನೀರು ಬಂದಿಲ್ಲ, ತುತ್ತು ಕೊಳಗೆ ಬಂದಿಲ್ಲ
ಹೆಣ್ಣು : ಬಾಲು ಬೇಲು
ಗಂಡು : ಐದು ಮಂದಿ ಮಕ್ಕಳು ನಿನ್ನ ಹೊಟ್ಟೆಯಲ್ಲಿ ಐದಾರೂ
ಹೆಣ್ಣು : ಬಾಲು ಬೇಲು
ಗಂಡು : ಐದು ಮಕ್ಕಳ ಭೂಮಿಗೆ ತೋರಿಸುವ್ವ
ಹೆಣ್ಣು : ಬಾಲು ಬೇಲು
ಗಂಡು : ದ್ಯಾವಮ್ಮ ಹಂತಾಳೆ, ನಾನು ಬಂಜೆಗೆ ಕುಂತಿನಿ
ಹೆಣ್ಣು : ಬಾಲು ಬೇಲು
ಗಂಡು : ನೀನು ಹೊಟ್ಟೆ ಬಂಜೆವ್ವ, ಬಂಜೆವ್ವ ಹೇಳುತ್ತಾಳೆ
ಹೆಣ್ಣು : ಬಾಲು ಬೇಲು
ಗಂಡು : ಮೈಲಮ್ಮ ಹಂತಾಳೆ
ಹೆಣ್ಣು : ಬಾಲು ಬೇಲು
ಗಂಡು : ಹಕ್ಕಿ-ಪಿಕ್ಕಿ ನುಡಿಯುತ್ತಾವೆ, ಕಾಗೆ-ಗೂಗೆ ನುಡಿಯುತ್ತಾವೆ
ಹೆಣ್ಣು : ಬಾಲು ಬೇಲು
ಗಂಡು : ನಿನ್ನ ಹೊಟ್ಟೆಯಲ್ಲಿ ನಮ್ಮವ್ವ, ಐದು ಮಂದಿ ಮಕ್ಕಳವ್ವ
ಹೆಣ್ಣು : ಬಾಲು ಬೇಲು
ಗಂಡು : ಮಕ್ಕಳಲಿಲ್ಲ, ಚರಿಗೆ ನೀರಲ್ಲ....
ಹೆಣ್ಣು : ಬಾಲು ಬೇಲು
ಗಂಡು : ಬೆಳ್ಳಿ ಗುಂಟೆ ತರಿಸ್ತೀನಿ, ಬಂಗಾರ ಗುಂಟೆ ತರಿಸಿತಿನಿ
ಹೆಣ್ಣು : ಬಾಲು ಬೇಲು
ಗಂಡು : ಬೆಳ್ಳಿ ಅಡಗಲು ತಂದಿನಿ, ಬಂಗಾತ ಅಡಗಲು ತಂದಿನಿ
ಹೆಣ್ಣು : ಬಾಲು ಬೇಲು
ಗಂಡು : ಮಕ್ಕಳ ತೋರಿಸ ಅಕ್ಕು....

ಹೆಣ್ಣು : ಬಾಲು ಬೇಲು
ಗಂಡು : ಬೆಳ್ಳಿ ಕುಂಚಿ, ಬಂಗಾರ ಕುಂಚಿ ತಂದಿನಿ....
ಹೆಣ್ಣು : ಬಾಲು ಬೇಲು
ಗಂಡು : ಚುರುಮರಿ ತಿನ್ನಿಸುತಿನಿ, ಮಕ್ಕಳ ಮುದ್ದ ಕೊಡುತ್ತಿನಿ
ಹೆಣ್ಣು : ಬಾಲು ಬೇಲು
ಗಂಡು : ಮಕ್ಕಳ ಇಲ್ಲವ್ವ, ಬಂಜೆ ಅನ್ನುತ್ತಾರೋ
ಹೆಣ್ಣು : ಬಾಲು ಬೇಲು
ಗಂಡು : ಮೈಲಮ್ಮ ಎಂಬುದು, ಮಸಣವೆಂಬದು ಮುರಿಯುತ್ತಾಳೆ
ಹೆಣ್ಣು : ಬಾಲು ಬೇಲು
ಗಂಡು : ಸುಂಕಪ್ಪ ಕಿವಿ ಕೊರೆತಾಳೆ....
ಹೆಣ್ಣು : ಬಾಲು ಬೇಲು
ಗಂಡು : ಏಳು ಕೋಣ ತಿರುಗುತ್ತಾಳೆ, ಅವನವೆಂಬುದು ತೆಗೆದುಳಾ
ಹೆಣ್ಣು : ಬಾಲು ಬೇಲು
ಗಂಡು : ಮೂರು ದಾರಿ ಕೂಡಿದಿದ್ದವು, ಎಡಕ್ಕೊಂದು, ಬಲಕ್ಕೊಂದು ತಿರುಗುದವು
ಹೆಣ್ಣು : ಗಲ್ಲದ ಮೇಲೆ ಚಿಂತವ್ವ, ಮೈಲೆಮ್ಮ ಎದ್ದ ಕೂಂತಾಳ್ರೆ
ಗಂಡು : ಪಂಚರವೆಂದು ತೆಗೆಗೊಂಡು, ಗಂಟುಬಂದು ಬಿಟ್ಟಳೆ
ಹೆಣ್ಣು : ಬಾಲು ಬೇಲು
ಗಂಡು : ಕಡ್ಡಿಕೋರದು ಬೆಂಕಿಯವ್ವ, ಭೂಮಿಗೆ ಮೇಲೆ ಸುಡುತ್ತಾಳೆ
ಹೆಣ್ಣು : ಬಾಲು ಬೇಲು
ಗಂಡು : ಹೆಂಗೆ ಮಾಡಬೇಕು ಪರಮಾತ್ಮ, ಹೆಂಗೆ ಮಾಡಬೇಕು ಪರಮಾತ್ಮ
ಹೆಣ್ಣು : ಬಾಲು ಬೇಲು
ಗಂಡು : ಐದು ಮಂದಿ ಮಕ್ಕಳ ಇಲ್ಲವೆಂತೆ
ಹೆಣ್ಣು : ಬಾಲು ಬೇಲು
ಗಂಡು : ಪುಂಗೆ ಊದಾಳಾ......
ಹೆಣ್ಣು : ಬಾಲು ಬೇಲು
ಗಂಡು : ಅಕ್ಕನ ಮನೆಗೆ ಹೋಗಿಳಾ, ಚಾಪೆ ಸುಳಿ ನೋಡುತ್ತಾಳೆ
ಹೆಣ್ಣು : ಬಾಲು ಬೇಲು
ಗಂಡು : ಇಬ್ಬರು ಮಕ್ಕಳು ಕಂಡಿಲ್ಲ, ನಾಲಗೆ ಮೇಲೆ ಬಿಚ್ಚಿಲ್ಲ
ಹೆಣ್ಣು : ಬಾಲು ಬೇಲು
ಗಂಡು : ತಲೆವೆಂಬುದು ಎರಡು ಕಣ್ಣು ಜಿಗಿದು ಹಾಳ್
ಹೆಣ್ಣು : ಬಾಲು ಬೇಲು
ಗಂಡು : ಚಾಪೆ ಸುಳಿಯಲ್ಲಿ ನೋಡಿಹಾಳ್, ಇಬ್ಬರ ಮಕ್ಕಳ ಕಂಡಿಳಾ
ಹೆಣ್ಣು : ಬಾಲು ಬೇಲು

